ಕನ್ನಡ ಪುಷ್ಪಮಾಲೆ-೩

# ಶ್ರೀ ರೇಣುಕಗೀತೆ

(ರೇಣುಕಾಗಸ್ತ್ಯ ಸಂವಾದರೂಪ ಶಿವಾದ್ವೈತ ಸಿದ್ಧಾಂತಂ)

## ಕನ್ನಡ ಭಾಮಿನಿ ಷಟ್ಪದಿ ಕಾವ್ಯಂ

('ಸಿದ್ಧಾಂತ ಶಿಖಾಮಣಿ' ಸಂಸ್ಕೃತ ಗ್ರಂಥಾಧಾರಿತ)

'ನಿಜಗುಣಸಿದ್ಧ'





ಪ್ರ[illegible] ಪುಸ್ತಕ ಮಂದಿರ
೧೪೦೫, ಕೃಷ್ಣಮೂರ್ತಿಪುರಂ, ಮೈಸೂರು-೪

# ಶ್ರೀ ರೇಣುಕ ಗೀತೆ

(ಕನ್ನಡ ಭಾಮಿನಿ ಷಟ್ಪದಿ ಕಾವ್ಯಂ)

ನಿಜಗುಣಸಿದ್ಧ



ಪ್ರಸಾದ ಪುಸ್ತಕ ಮಂದಿರ,
೧೪೦೫, ಕೃಷ್ಣಮೂರ್ತಿಪುರಂ, ಮೈಸೂರು–4.
1972

'*SRI RENUKA GEETHE*' is composed in verse called 'Kannada Shatpadi' by 'Nijaguna Siddha' *i.e.*, S. M. Siddiah, B. A. (Hons.). 'Renuka Geeta' is a dialogue between Sree Jagadguru Renukacharya who preached Veerashaivism in Tretayuga to Agastya a sage at Malayashram in South India.



First Edition—1,100 Copies

Price : 15–00
Calico : 20–00



ಪ್ರಥಮ ಮುದ್ರಣ—1,100 ಪ್ರತಿಗಳು



ಸಾದಾ ಪ್ರತಿ : 15–00
ಉತ್ತಮ ಪ್ರತಿ : 20–00



ಮುದ್ರಕರು :
ಶ್ರೀ ರಘುವೀರ್ ಪ್ರಿಂಟಿಂಗ್ ಪ್ರೆಸ್, ಮೈಸೂರು–೪.



ಶ್ರೀಜಗದ್ಗುರುರೇಣುಕಾಚಾರ್ಯರು ಅಗಸ್ತ್ಯಮಹರ್ಷಿಗಳಿಗೆ
ಶಿವಸಿದ್ಧಾಂತವನ್ನುಪದೇಶಿಸುತ್ತಿರುವರು

ಶ್ರೀ ರಂಭಾಪುರೀ ೧೧೦ನೆಯ ಜಗದ್ಗುರು ಶ್ರೀ ಪ್ರಸನ್ನ ರೇಣುಕ ವೀರ
ಗಂಗಾಧರ ಶಿವಾಚಾರ್ಯ ಮಹಾಸ್ವಾಮಿಗಳವರ ಪಟ್ಟಾಧಿಕಾರ
ರಜತ ಮಹೋತ್ಸವ ಸವಿನೆನಪಿಗಾಗಿ

## ಸಮರ್ಪಿತ

ಜಯ ಜಾಹ್ನವೀಧರ ಓಂ !
ಭವಭಯ ಸಂಹರ ಓಂ !
ಶಿವ ಶಿವ ಶಂಕರ ಓಂ !
ಮಣಿವೆನೋಂಕಾರಂಗೆ
ಮಣಿವೆನೀಶಾನಂಗೆ
ಮಣಿದು ನಾನರ್ಪಿಸುವೆ
ಮಣಿಯನೀ ರಸಕೃತಿಯನು !
ಕನ್ನಡದ ಜೇನ್ ಸವಿಯನು !
ಪ್ರಣವಾನು ಸಂಧಾನಿ
ಅಣಿಮಾದಿ ನಿಜಸಿದ್ಧ
ಎಣಿಸದವ ಗುಣಶತವ
ತಣಿಸಯ್ಯ ತತ್ತ್ವ ತೃಷೆ !
ರೇಣುಕರು ಕರುಣೆಯಿಂ
ಜಾಣಮುನಿ ಕುಂಭಜಗೆ
ಮಾಣದಿತ್ತುಪದೇಶ
ವಾಣಿಯಂ ಸ್ವೀಕರಿಸು !
ರೇಣುಕ ಶ್ರೀ ಗೀತ
ಕಾಣ್ಕೆಯಂ ಸ್ವೀಕರಿಸಿ,
ಮೇಣು ಕರುಣಂವಿರಿಸಿ,
ತಾಣ ತಣ್ಪೆಳಗಿ ನಾ
ಜಾಣರಾಡೊಂಬಲವ
ಮಾಣದಲೆ ಕರುಣಿಸಯ್ಯ !

ಮೈಸೂರು
೨೪-೧-೧೯೭೨

—ನಿಜಗುಣಸಿದ್ಧ

ಪ್ರಮಥಗಣಗಳ ಪಂಚಬೊಮ್ಮರಿ । ನಮಿಸಿ ಜೇಡುವೆ ನುತಿಸಿಪಾಡುವೆ
ಕ್ರಮದೆ ಷಟ್‌ಸ್ಥಲದಂಗಮಾರ್ಗದೆ ನಡೆಯಗಲಿಸಲ್ಕೆ ॥
ಪ್ರಮಥಪುಂಗವ ರೇಣುಕಾರ್ಯರು । ನಮಿತಮಲಯಾಶ್ರಮದಮುನಿ ಹೃ ।
ತ್ಕಮಲವರಳುವ ತೆರದೊಳೀಯುವಬೋಧೆಯರಿಯಲ್ಕೆ ॥



' ನಿಜಗುಣಸಿದ್ಧ ' ಕಾವ್ಯನಾಮದಿಂದ ಶ್ರೀರೇಣುಕಗೀತೆ ರಚಿಸಿದ
ವೇ॥ ಎಸ್. ಎಂ. ಸಿದ್ಧಯ್ಯ, ಬಿ.ಎ., ಆನರ್ಸ್.

॥ ಶ್ರೀ ಜಗದ್ಗುರು ಪಂಚಾಚಾರ್ಯ ಪ್ರಸೀದಂತು ॥

## ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು 'ಶ್ರೀ ರೇಣುಕ ಗೀತೆ' ಗೆ ಇತ್ತ ಶುಭ ಸಂದೇಶ

ವೇ॥ ಎಸ್. ಎಂ. ಸಿದ್ಧಯ್ಯ, ಬಿ.ಎ. (ಆನರ್ಸ್)—ಇವರು 'ನಿಜಗುಣಸಿದ್ಧ' ಕಾವ್ಯನಾಮದಿಂದ ರಚಿಸಿರುವ ಕನ್ನಡ 'ರೇಣುಕಗೀತೆ' ಮುದ್ರಾಗಿದೆ; ಮನಮುಟ್ಟುವಂತಿದೆ; ಕವಿಯನ್ನು ಪಂಡಿತ ಪದವಿಗೆ ಏರಿಸಿದೆ.

ಜಗದ್ಗುರು ಆದಿರೇಣುಕಾಚಾರ್ಯರು ಅಗಸ್ತ್ಯ ಮಹರ್ಷಿಗಳಿಗೆ ಶಿವಾದ್ವೈತ ತತ್ತ್ವೋಪದೇಶ ಮಾಡಿದರು. 'ರೇಣುಕಾಗಸ್ತ್ಯ ಸಂವಾದ'ವನ್ನು ಸುಮಾರು ಎರಡು ಸಾವಿರ ವರ್ಷಗಳ ಹಿಂದಿನ 'ಶಿವಯೋಗಿ ಶಿವಾಚಾರ್ಯ'ರೆಂಬ ಪಂಡಿತೋತ್ತಮರು ಸಂಗ್ರಹಿಸಿ ಕಾವ್ಯ ರಚಿಸಿದರು. ಆ ಮಹಾ ಸಿದ್ಧಾಂತ ಗ್ರಂಥವೇ "ಸಿದ್ಧಾಂತಶಿಖಾಮಣಿ". ಸಂಸ್ಕೃತ ಭಾಷೆಯಲ್ಲಿರುವ 'ಈ ಸಿದ್ಧಾಂತ ಶಿಖಾಮಣಿ'ಯನ್ನು ಕನ್ನಡಿಗರು ಅರ್ಥ ಮಾಡಿಕೊಳ್ಳುವುದು ಸಾಧ್ಯವಿಲ್ಲದ ವಿಚಾರ. ಈ ಕೊರತೆಯನ್ನು ನೀಗುವುದಕ್ಕಾಗಿ ಅನೇಕ ಪಂಡಿತರು ಬಹಳ ದಿನಗಳಿಂದ ಪ್ರಯತ್ನಪಟ್ಟು ಈ 'ಸಿದ್ಧಾಂತ ಶಿಖಾಮಣಿ'ಗೆ ಟೀಕೆ, ಟಿಪ್ಪಣಿಗಳನ್ನು ಬರೆದುದುಂಟು.

ಆದರೆ ಅಷ್ಟೊಂದು ವಿಶಾಲವಾದ ಟೀಕೆಯನ್ನು ಓದುವುದು ಒಂದು ಪ್ರಯಾಸವೇ ಸರಿ ಎಂಬುದು ಅನೇಕರು ಅರಿತುಕೊಂಡ ವಿಚಾರ. ಮೂಲಕ್ಕೂ ಸರಿಯಾಗಿ ಸ್ವಲ್ಪದರಲ್ಲಿಯೇ ಭಾಷಾನುವಾದವಾಗುವ ಗ್ರಂಥ ಓದುಗರಿಗೆ ಹೆಚ್ಚು ಸಮಯವನ್ನು ಉಳಿಸಬಹುದಲ್ಲದೆ, ಅಂತಹ ಅನುವಾದ ಗ್ರಂಥಗಳ ಬೆಲೆಯು ಕಡಿಮೆಯಾಗುವುದೂ ಸಾಧ್ಯ. ಈ ಹಲವಾರು ಕಾರಣಗಳನ್ನು ನೆನೆಸಿಕೊಂಡರೆ 'ನಿಜಗುಣಸಿದ್ಧ'ರು 'ಸಿದ್ಧಾಂತ ಶಿಖಾಮಣಿ'ಯ ಸಂಸ್ಕೃತ ಶ್ಲೋಕಗಳಿಗೆ ಕನ್ನಡ ಪದ್ಯರೂಪವಾಗಿ

ಅನುವಾದ ಮಾಡಿರುವುದು ಬಹಳ ಒಪ್ಪತಕ್ಕ ವಿಚಾರ. ಶ್ರೀಯುತರು ಸಂಸ್ಕೃತ, ಆಂಗ್ಲ, ಹಿಂದಿ, ಕನ್ನಡ ಭಾಷೆಗಳಲ್ಲಿ ಪರಿಣತರಿರುವುದರಿಂದ ಇವರ ಅನುವಾದವು ಈಗಿನ ಜನಾಂಗಕ್ಕೆ ಹಿಡಿಸುವಂತೆ ಬಹಳ ಸರಳ ಶೈಲಿ ಯಲ್ಲಿ ರಚಿತವಾಗಿದೆ. ಮೂಲಕ್ಕೆ ಎಷ್ಟೂ ವ್ಯತ್ಯಾಸವಾಗದಂತೆ ಬಹಳ ಜಾಗರೂಕತೆಯಿಂದ ಪದ್ಯಾನುವಾದವನ್ನು ಮಾಡಿದ್ದಾರೆ. ಭಾಷೆ ಬಹು ಮುದ್ದಾಗಿದೆ. ಸರಣಿ ಲಲಿತವಾಗಿದೆ. ಕಾವ್ಯದ ಓಟ ಗಂಗಾಧಾರೆಯಂತೆ ನಿರರ್ಗಳವಾಗಿ ಸಾಗಿದೆ.

ಕವಿಗಳು ಸರ್ಕಾರಿ ಉದ್ಯೋಗದಲ್ಲಿದ್ದರೂ, ಗೃಹಸ್ಥರಾಗಿದ್ದರೂ ಇವರ ನಿತ್ಯಕರ್ತವ್ಯ ಶಿವಾನುಷ್ಠಾನ, ಶಿವಯೋಗ, ಶಿವಾದ್ವೈತ ವಿವೇಚನೆ, ಪರೋಪಕಾರ, ದೀನ ದಲಿತರ ಬಗ್ಗೆ ಅನುಕಂಪ—ಈ ಎಲ್ಲಾ ಸದ್ಗುಣ ಗಳಿಂದ ಇವರು ನಿಜವಾಗಿಯೂ 'ನಿಜಗುಣ ಶಿವಯೋಗಿ'ಗಳಂತೆ ಸಂಸಾರ ಯೋಗಿಯಾಗಿದ್ದಾರೆಂದು ಅಪ್ಪಣೆಕೊಡಿಸಿದರೆ ಅತಿಶಯೋಕ್ತಿಯೇನೂ ಅಲ್ಲ.

ಇಂತಹ ವಿಶಾಲ ಸ್ವಭಾವದ ತರುಣ ಕವಿಗಳು ಸಮಾಜಕಲ್ಯಾಣ ವನ್ನೇ ಗುರಿಯಾಗಿಟ್ಟುಕೊಂಡು 'ಭಾಷಾ ಸೇವೆಯೇ ಈಶ ಸೇವೆ' ಎಂಬ ಮನೋವೃತ್ತಿಯಿಂದ ಸಾಹಿತ್ಯ ಸೇವೆ ಸಲ್ಲಿಸುತ್ತಿರುವುದು ಸಾಮಾನ್ಯವಾದ ವಿಚಾರವಲ್ಲ.

ಇವರು ಇನ್ನೂ ಹಲವಾರು ಕೃತಿಗಳನ್ನು ರಚಿಸಿ ಪ್ರಕಾಶಪಡಿಸಿ ದ್ದಾರೆ. ತಮಗೆ ಸಿಕ್ಕ ಬಿಡುವಿನ ಸಂದರ್ಭದಲ್ಲಿ ತಮ್ಮ ಗೃಹಕೃತ್ಯದ ಜೊತೆಗೆ ಸಾಹಿತ್ಯ ಸೇವೆ ನಿತ್ಯದುಸಿರೆಂದು ಭಾವಿಸಿ ಒಂದೊಂದು ಕೃತಿ ರತ್ನಗಳನ್ನು ರಚನೆ ಮಾಡುತ್ತಲೇ ಇರುತ್ತಾರೆ. ದಯಾಘನರಾದ ಮಲ್ಲಿಕಾರ್ಜುನ ಭ್ರಮರಾಂಬೆಯರು ಇವರಿಗೆ ಅಧಿಕ ಆಯುಷ್ಯ, ಆರೋಗ್ಯ, ಐಶ್ವರ್ಯಗಳನ್ನು ಕೊಟ್ಟು ಕಾಪಾಡುವ ಮೂಲಕ ಇವರ ಕೈಗಳಿಂದ ಇನ್ನೂ ಹಲವಾರು ಕೃತಿರತ್ನಗಳು ಹೊರಬೀಳುವಂತೆ ಅನುಗ್ರಹಿಸಲೆಂದು ಶುಭಾ ಶೀರ್ವಾದಗಳಿಂದ ಹರಸಿದ್ದೇವೆ.

ಮೊಕ್ಕಾಂ : ಭದ್ರಾವತಿ
ದಿನಾಂಕ : ೨೫–೧೧–೧೯೭೧.

ಶುಭಂ ಭವತು
ಶ್ರೀ ಜ.ವಾ.ಪಂ.ಶಿ. ಮಹಾಸ್ವಾಮಿನಃ.

ಶ್ರೀಮನ್ ನಿರಂಜನ ಪ್ರಣವಸ್ವರೂಪಿ ಶಿವಕುಮಾರ ಸ್ವಾಮಿಗಳು,
ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಮಠ, ಬೆಂಗಳೂರು,
ವಿರಕ್ತಮಠ, ಶಿರಾಳಕೊಪ್ಪ ಇವರ ಶುಭಸಂದೇಶ :

ಸದುವಿನಯ ಸಂಪನ್ನರೂ, ಭಕ್ತಿಶೀಲರೂ ಆದ ಶ್ರೀ ಎಸ್. ಎಂ. ಸಿದ್ಧಯ್ಯ, ಬಿ.ಎ. (ಆನರ್ಸ್) ಇವರು ಅತ್ಯಂತ ಶ್ರದ್ಧೆಯಿಂದ 'ಸಿದ್ಧಾಂತ ಶಿಖಾಮಣಿ' ಗ್ರಂಥವನ್ನು ಕನ್ನಡ ಭಾಮಿನಿ ಷಟ್ಪದಿಯಲ್ಲಿ ರಚಿಸಿದ್ದು ಸ್ತುತ್ಯವಾದ ಕಾರ್ಯವಾಗಿದೆ. ಇಂದಿನ ಕಾಲದಲ್ಲಿ ಸಂಸ್ಕೃತ ಭಾಷೆ ಎಷ್ಟೇ ಸುಲಭ ಮತ್ತು ಸರಳವಾಗಿದ್ದರೂ ಅದನ್ನು ತಿಳಿಯುವ ಜನತೆ ಬಹಳ ಕಡಿಮೆ. ವೀರಶೈವ ಸಿದ್ಧಾಂತವು ಮಾನವ ಜೀವನದ ಉದ್ದೇಶ್ಯಪೂರ್ತಿಗಾಗಿ ಬಲು ಸುಲಭವಾಗಿದ್ದರೂ ಭಾಷೆಯ ತೊಡಕಿನಿಂದ ಅಭ್ಯಾಸಿಸುವುದು ಕಷ್ಟಕರವಾಗಿರುತ್ತದೆ. ಈ ಕ್ಲಿಷ್ಟತೆಯನ್ನು ದೂರಮಾಡಿ ಜನಸಾಮಾನ್ಯರು ಸುಲಭವಾಗಿ ಸಿದ್ಧಾಂತವನ್ನು ತಿಳಿದುಕೊಂಡು ಅದನ್ನು ಆಚರಣೆಯಲ್ಲಿ ತಂದುಕೊಳ್ಳುವುದಕ್ಕೆ ಅವಕಾಶ ಮಾಡಿಕೊಟ್ಟಿದ್ದಾರೆ.

'ಶ್ರೀ ರೇಣುಕ ಗೀತೆ' ಎಂಬ ಕನ್ನಡ ಭಾಮಿನಿ ಷಟ್ಪದಿ ಕಾವ್ಯದ ಭಾಷೆ ಸರಳವಾಗಿದೆ; ಕವಿತೆಯು ವೈವಿಧ್ಯಪೂರ್ಣವಾಗಿದೆ; ಶೈಲಿಯು ಲಲಿತವಾಗಿದೆ; ಓಟವು ಅವ್ಯಾಹತವಾಗಿ ಹರಿದಿದೆ. ವಾಚಕರು ಈ ಗ್ರಂಥ ಕೈಗೆತ್ತಿಕೊಂಡರೆ ವಿಷಯದೊಡನೆ, ಕವಿತೆಯ ರಸವನ್ನೂ ಆಸ್ವಾದಿಸುತ್ತಾ ಮುನ್ನಡೆಯುತ್ತಾರೆ.

ಇಂತಹ ಅಮೂಲ್ಯವಾದ ಗ್ರಂಥವನ್ನು ಶ್ರೀ 'ನಿಜಗುಣಸಿದ್ಧ' ಯಾವ ಆಶೆ ಆಕಾಂಕ್ಷೆಗಳಿಲ್ಲದೆ ಜನತೆಗೆ ನೀಡಿರುವುದು ಸಮಾಜದ ಸುದೈವ. ಇವರಿಂದ ಇನ್ನೂ ಇಂತಹ ಧಾರ್ಮಿಕ ಗ್ರಂಥಗಳು ರಚಿತವಾಗಿ ಕನ್ನಡ ಸರಸ್ವತಿಗೆ ಕಂಠಾಭರಣವಾಗಲಿ ಎಂದು ಹಾರೈಸುತ್ತೇವೆ.

ಮೊಕ್ಕಾಂ : ಶಿರಾಳಕೊಪ್ಪ. ಶುಭಂ ಭವತು,
ದಿನಾಂಕ : ೨೮-೧೧-೧೯೭೧. ಶ್ರೀ ನಿ. ಪ್ರ. ಶಿವಕುಮಾರಸ್ವಾಮಿ.

# ಮುನ್ನುಡಿ

ಭಾರತದ ಪುರಾತನ ಶಾಸ್ತ್ರಗಳು ನಿಗಮಾಗಮಗಳು. ಅವುಗಳಿಗೆ ಐಯ್ದು ಸಾಸಿರ ವರುಷಗಳ ಹಳೆತನವಿದೆ; ಚಾರಿತ್ರವಿದೆ. ನಿಗಮಗಳಿಗೆ ಹೊಯ್ಕಯ್ ಆಗಿರುವುವು ಆಗಮಗಳು. ಆಗಮಗಳು ಅನೇಕವಿವೆ. ಅವುಗಳಲ್ಲಿ ಶೈವಾಗಮಗಳು ಸನಾತನವಾದವು. ಶಿವಾಗಮಗಳಂತೆ ವೀರಶಿವಾಗಮಗಳೂ ಪುರಾತನವಾದವುಗಳು. ವೀರಶೈವ ಸಂಸ್ಕೃತಿಯ ಭದ್ರ ಬುನಾದಿಯಾಗಿವೆ ವೀರಶಿವಾಗಮಗಳು. ಷಟ್‌ಸ್ಥಲ ಸಿದ್ಧಾಂತವೆಂಬ ಪ್ರಬುದ್ಧ ಪ್ರವಾಹದ ಗಂಗೋತ್ರಿ ವೀರಶಿವಾಗಮಶಾಸ್ತ್ರ. ಅದುವೆ ವೀರಶೈವ ತತ್ತ್ವದರ್ಶನ ತಂತ್ರ; ಸರ್ವೋನ್ನತ ಸಿದ್ಧಾಂತ; ಸರ್ವ ಸಮನ್ವಯಶಾಸ್ತ್ರ.

ಷಟ್‌ಸ್ಥಲ ಸಿದ್ಧಾಂತವನ್ನು ಹಿಗ್ಗಿಸಿ ನೂರೊಂದು ನೆಲೆಗಳನ್ನಾಗಿಸಿದ ಪ್ರಥಮ ಕೀರ್ತಿ ಸಿದ್ಧಾಂತ ಶಿಖಾಮಣಿಯದು. ಏಕೋತ್ತರ ಶತಸ್ಥಲಗಳ ಉನ್ನತ ವಿವರಣೆಗೆ ಅದು ಗೌರೀಶಿಖರವನ್ನು ಹೋಲುತ್ತದೆ. ಭೂತತ್ತ್ವದಿಂದ ಮೊದಲಾಗಿ ಜಲ, ತೇಜ, ವಾಯು, ಆಕಾಶ ಮಂಡಲಗಳನ್ನೇರಿ ಆಚೆಗೆ ಸಾರಿ, ಆತ್ಮವಿಚಾರದಲ್ಲಿ ಸಮರಸವಾಗುತ್ತದೆ. ಬಯಲಗಳಿಸಿ ನಿರವಯಲವಾಗಿಸುತ್ತದೆ. ಪರಿಪೂರ್ಣದೆಡೆಗೆ ಒಯ್ದು ಮುಟ್ಟಿಸುತ್ತದೆ. ಪಿಂಡ-ಪಿಂಡಸ್ಥಲಗಳಿಂದ ಮೊದಲಾಗಿ ಅಂದರೆ ಶುದ್ಧ ಜೀವ–ಜೀವ ವಿಜ್ಞಾನಗಳಿಂದ ಮೊದಲ್ಗೊಂಡು ಮುಂದುವರಿದು ಮೇಲೇರಿ ಮನಮೀರಿ ಜ್ಞಾನಶೂನ್ಯ (ಜ್ಞಾನಪೂರ್ಣ) ಸ್ಥಿತಿಗೆ ಸೇರಿಸುತ್ತದೆ. ಸತ್ಯ ಸಾಧಕನು ಆ ಅಖಂಡಾನಂದ ಸ್ವರೂಪಕ್ಕೆ ಏರಿಹೋಗಲು ನಿರ್ಮಿಸಿದ ಏಣಿಯ ಅಡಿಗಳಂತಿವೆ ಸಿದ್ಧಾಂತ ಶಿಖಾಮಣಿಯ ನೂರೊಂದು ನೆಲೆಗಳು. ಕಾರ್ಯ-ಕಾರಣ, ದೃಕ್-ದೃಶ್ಯಗಳನ್ನು ನಿಕ್ಕರಿಸದ ಶಿವಾಚಾರ್ಯರ ಸಮನ್ವಯ ಭಾವಾನುಭಾವಗಳು ಘನೀಭೂತವಾಗಿವೆ ಇದರಲ್ಲಿ! ಭಾವಾಭಾವಗಳಾಚೆ ಹೋಗಿ ಅಲ್ಲಿ ಮೂಡಿದ ಆ ಶಿವಾಚಾರ್ಯನ ಆ ನಿರ್ಭಾವಸ್ವರೂಪದ ಅಚ್ಚಳಿಯದ ಹೆಜ್ಜೆಗಳ ಹೆಗ್ಗುರುತುಗಳನ್ನು ಸಿದ್ಧಾಂತ ಶಿಖಾಮಣಿಯಲ್ಲಿ ಸೊಗಸಾಗಿ ಸಂದರ್ಶಿಸುತ್ತೇವೆ. ಏಕದರಲ್ಲಿ ಅನೇಕವನ್ನು, ಅನೇಕದರಲ್ಲಿ ಏಕವನ್ನು ಇದರಲ್ಲಿ ಇಮ್ಮಾಗ್ಗಿ ಕಾಣು

ತ್ತೇವೆ. ತ್ರೈಲೋಕ್ಯ ಸಂಪತ್ತನ್ನು, ಷಡ್ದರ್ಶನ ಸಂವಿತ್ತನ್ನು ಷಟ್ತ್ರಿಂಶ ತ್ತತ್ತ್ವವನ್ನು, ಸ್ವಾಭಾವಿಕವಾದ ಉತ್ತಮತ್ವವನ್ನು, ವಿಶ್ವಭಾಸಕತ್ವವನ್ನು ವಿಶ್ವಭಾವಿನಿಯಾದ, ವಿಶ್ವರೂಪಿನಿಯಾದ, ವಿಶ್ವಧರ್ಮಚಾರಿಣಿಯಾದ, ಪರ ಮಾನಂದ ಪ್ರಬೋಧವಾಹಿನಿಯಾದ, ಸಕಲ ವಿದ್ಯಾಪ್ರದಾಯಿನಿಯಾದ ಪರಮ ಶಕ್ತಿಯನ್ನು ಇದರಲ್ಲಿ ಸಂದರ್ಶಿಸುತ್ತೇವೆ. ತತ್ತ್ವಗಳ ತಂತ್ರವಿದು. ಕಾವ್ಯಶೈಲಿಯ ಕಲಾಗಾರವಿದು. ಜೀವನಕ್ಕೆ ಬೇಕಾದ ಜ್ಯೋತಿಯಿದು. ಎಲ್ಲ ತತ್ತ್ವ, ಎಲ್ಲ ಸಿದ್ಧಾಂತ, ಎಲ್ಲ ದರ್ಶನಗಳನ್ನು ತನ್ನಲ್ಲಿ ಪರಿಪೋಷಿಸಿಕೊಂಡ ಸಮನ್ವಯ ಸಿದ್ಧಾಂತ ಗ್ರಂಥವಿದು. ಷಟ್‌ಸ್ಥಲ ಸಾಗರದ ತರಂಗಗಳು ಇದರಲ್ಲಿ ಠೀವಿಯಿಂದ ಸಂಚರಿಸುತ್ತವೆ. ಓದುಗರ ಹೃದಯ ತೀರಗಳಿಗೆ ಅಪ್ಪಳಿಸಿ ಆರ್ದ್ರವನ್ನಾಗಿಸಿ ಆಪ್ಯಾಯನಗೊಳಿಸುತ್ತವೆ. ಇದರ ಪಾವನ ಗರ್ಭದಲ್ಲಿ ಅನಂತ ಅನರ್ಘ್ಯ ಮುತ್ತು ರತ್ನಗಳಿವೆ.' ಇದರ ಆಳಕ್ಕೆ ಇಳಿದಷ್ಟೂ ಅವು ಲಭ್ಯವಾಗುತ್ತವೆ. ಬಡವ ಬಲ್ಲಿದನಾಗುತ್ತಾನೆ. ದುಃಖಿ ಸುಖಿಯಾಗು ತ್ತಾನೆ. ಹೆಳವ ನಡೆಯುಬಲ್ಲ; ಕುರುಡ ಕಾಣಬಲ್ಲ; ಕಿವುಡ ಕೇಳಬಲ್ಲ. ಸಾಮಾನ್ಯರಿಗೂ ಸೌಲಭ್ಯವಾಗುವಂತೆ ಸತ್ಯಾನ್ವೇಷದ ಸ್ತರಗಳನ್ನು ಇದರಲ್ಲಿ ಸೃಜಿಸಲಾಗಿದೆ. ಸ್ಥಲಗಳು ಹಲವಿದ್ದರೂ ಸೂತ್ರ ಒಂದೆ! ಸತ್ಯ ಸ್ವರೂಪ ಒಂದೆ! ತತ್ತ್ವ ಪ್ರತಿಪಾದನೆಯ ಪಥ ಒಂದೆ! ಇದರಲ್ಲಿ ಚಿತ್ರಗಳು ಹಲವಿದ್ದರೂ ಭಿತ್ತಿಯೊಂದೆ! ಇಲ್ಲಿನ ಜಿಜ್ಞಾಸೆ ಎಟುಕದ ದೇವನದಲ್ಲ; ಎಟುಕುವ ಈ ಜೀವನದು. ಬರೀ ಜಿಜ್ಞಾಸ್ಯವಲ್ಲ, ಅಂದರೆ ವಿಚಾರ ಸಾಧಕ ಮಾತ್ರವಲ್ಲ, ಜತೆಗೆ ಆಚಾರಕ್ಷಮವಾದುದು. ಜೀವನ ಸಾಧನಕ್ಷಮವಾದುದು; ಸರ್ವ ಸಾಧ್ಯವಾದುದು. ಸಿದ್ಧಾಂತ ಶಿಖಾಮಣಿಯು ಸರ್ವರ ಉದ್ಧಾರಕ್ಕಾಗಿ ಉನ್ನಯನಕ್ಕಾಗಿ ಪ್ರವಹಿಸುತ್ತಿರುವ ಪಾವನ ಗಂಗೆ! ಸಾಂಸ್ಕೃತಿಕ ಮಂದಾಕಿನಿ!

ಈ ಸಕ್ಕದ ಕೃತಿಯನ್ನು ಈ ದಿವ್ಯರಸ ಮಂದಾಕಿನಿಯನ್ನು ಕನ್ನಡದ ನೆಲಕ್ಕೆ. ಹರಿಸುವ ಸಾಹಸ ಮಾಡಿದವರಲ್ಲಿ ಈ ಮುನ್ನುಡಿಗಾರರು ಒಬ್ಬರು ಮಾತ್ರವಲ್ಲ ಮೊದಲಿಗರು. ಇದಕ್ಕೆ ಟೀಕೆ-ಟಿಪ್ಪಣಿಗಳನ್ನು ಬರೆ ದವರುಂಟು; ಅರ್ಥ-ಭಾವಗಳನ್ನು ಬಿತ್ತರಿಸಿದವರುಂಟು. ಆದರೆ ಮೂಲ

ಕೃತಿಯನ್ನು ಕನ್ನಡಕ್ಕೆ ತಂದವರಿರಲಿಲ್ಲ; ತಂದಿರಲಿಲ್ಲ. ನಾವು ಮೊದಲು 'ಮಣಿಕಾಂತಿ' ಎಂಬ ಗದ್ಯ ಕೃತಿಯನ್ನು, ಆಮೇಲೆ 'ಮಣಿ ಮುಕುರಂ' ಎಂಬ ಕಾವ್ಯಶೈಲಿಯನ್ನು, ಅನಂತರ 'ಮಣಿವಚನಗಳು' ಎಂಬ ವಚನ ಕೃತಿಯನ್ನು, ಕೊನೆಯದಾಗಿ 'ಜೀವನ ಸಿದ್ಧಾಂತ' ಎಂಬ ಮೇರು ಕೃತಿಯನ್ನು ರಚಿಸಿದೆವು. ಈ ಹಾದಿಯನ್ನು ಹಿಡಿದು ಎರಡನೆಯದಾಗಿ ಶ್ರೀ ಸು. ಮ. ಸಿದ್ಧಯ್ಯ, ಬಿ.ಎ. (ಆನರ್ಸ್) ರವರು ಈ ಕೃತಿಯನ್ನು ಕನ್ನಡ ಭಾಮಿನಿ ಷಟ್ಪದಿಯಲ್ಲಿ ಅನುವಾದಿಸಿದ್ದಾರೆ. 'ನಿಜಗುಣ ಸಿದ್ಧ'ಎಂಬುದು ಕವಿಯ ಕಾವ್ಯನಾಮ. ಇವರು ಈ ಒಳಕ್ಕೆ 'ಶ್ರೀಶೈಲ ಕುಸುಮ' ಎಂಬ ಒಂದು ಕವನ ಸಂಕಲನವನ್ನು ಬರೆದು ಬೆಳಕಿಗೆ ತಂದಂತೆ ತಿಳಿ ಯುತ್ತದೆ.

ಕನ್ನಡದಲ್ಲಿ ಅನುವಾದಿತವಾದ ಈ 'ರೇಣುಕಗೀತೆ' ಇವರ ಎರಡನೆಯ ಕೃತಿ. ಇದರಲ್ಲಿ ಶಿವಯೋಗಿ ಶಿವಾಚಾರ್ಯರ ಭಾವಚೇತನವನ್ನು ಪ್ರತಿಬಿಂಬಿಸಿದ್ದಾರೆ. ಷಟ್‌ಸ್ಥಲ ಜ್ಯೋತಿಯನ್ನು ಬೆಳಗಿಸಿದ್ದಾರೆ. ಭಾವಾಮೃತ ರಸವನ್ನು ಪ್ರವಹಿಸಿದ್ದಾರೆ. ಇದು ಅವರೇ ಹೇಳುವಂತೆ 'ಮತಿಗೆ ಮಂಗಲವೀವ ಸತ್ಕೃತಿಯು' ಮತ್ತು

"ಮುದ್ದು ದೇವಾಚಾರ್ಯ ವಂಶಜ
ಶುದ್ಧ ಸಂಸ್ಕೃತಗೀತೆಯೊರೆಯಲು
ಶುದ್ಧ ಸಿದ್ಧಾಂತದ ಶಿಖಾಮಣಿಯಾಯ್ತು ಭಾರತಿಗೆ ।
ಶುದ್ಧ ಜಂಗಮ ವಂಶಿ 'ನಿಜಗುಣ
ಸಿದ್ಧ' ಷಟ್ಪದಿಯಿಂದಲೊರೆದನು
ಮುದ್ದುಕನ್ನಡ ಭಕ್ತವೃಂದಕೆ ಭಾವಮಿಡಿಯುವೊಲು"

ಇದನ್ನು ಓದಿದರೆ ಮತಿಗೆ ಮಂಗಲವುಂಟಾಗುವುದು; ಭಾವ ಮಿಡಿಯುವುದು. ಇದು ಸೈದ್ಧಾಂತಿಕ ಕೃತಿಯಾದ್ದರಿಂದ ಕವಿಯ ಈ ಮಾತು ದಿಟಕ್ಕೆ ದಿಟ. 'ಭಾಷಾಸೇವೆಯೆ ಈಶಸೇವೆ' ಎಂಬ ಹಿರಿಯ ಶಾಸ್ತ್ರಪಂಡಿತರ ಆದೇಶವನ್ನು ಹೊತ್ತು, ಕನ್ನಡ ನುಡಿಯೊಳಿಗಕ್ಕೆ ಕವಿ

ಕೈಹಾಕಿದ್ದಾನೆ. ಅಂತೆಯೆ 'ಕವನ ಮಾಡುವ ಕಲೆಯು ಕೈವಶ' ವಾಗಿದೆ ಈ ಕವಿಗೆ. ಈ ಕನ್ನಡ ಕಾವ್ಯ ರೂಪುಗೊಳ್ಳಲು ಅನೇಕ ವಿದ್ವಾಂಸರ ಆಚಾರ್ಯರ ಶಾಸ್ತ್ರವಿದರ ಕರುಣೆ ಕೈಯಾಸರವಾಗಿದೆ. ಅವರ ಬೋಧೆಯ ಬೆಳಕು ಬುದ್ಧಿವಶವಾಗಿದೆ. ಅದರಿಂದಾಗಿ ಕವಿಗೆ ಈ ಕೃತಿ ರಚನೆಯ ಕುಶಲತೆ ಕೈಗೂಡಿದೆ. 'ಬಂಧುರದ ನುಡಿ ನಿನದ ವೊಳಗಿದೆ.' ಅದನ್ನು ಆಲಿಸಿ ಆನಂದಿಸಿದಲ್ಲಿ ಮರ್ತ್ಯ ಸ್ವರ್ಗವಾಗುವುದು.

ಕವಿಗಳಿಗೆ ಕೃತಿಕಾರನ ಕರೆಯಿದು :

"ಎಲ್ಲ ದೇಶದ ಎಲ್ಲ ಭಾಷೆಯ
ಸೊಲ್ಲು ಸಂಪದವನ್ನು ಬೆಳೆಸಿಹ
ಸಲ್ಲಲಿತ ಕವಿವರರೆ ಕೇಳಿರಿ ಸಿದ್ಧವಾಣಿಯನು |
ಬಲ್ಲ ಭಾವುಕರೆಲ್ಲ ಹರ್ಷಿಸಿ
ಸೊಲ್ಲುಸೊಲ್ಲಿಗೆ ಪುಳುಕಗೊಳುವೊಲು
ನಿಲ್ಲದೋಡುವ ಭಾವಗಂಗೆಯ ಮಿಂದು ಮುದವೇರಿ"

ಕವಿ ಹೇಳಿರುವಂತೆ ಈ ಕಾವ್ಯದಲ್ಲಿ ಭಾವಗಂಗೆ ಅಡೆತಡೆಯಿಲ್ಲದೆ ತನ್ನ ಗುರಿಯತ್ತ ಓಡಿದೆ. ಶೈಲಿಯಲ್ಲಿ ಪ್ರಾಸಾದಿಕತೆಯಿದೆ. ಕನ್ನಡತನ ಕುದುರಿದೆ; ಬಗೆ ಹದಗೊಂಡಿದೆ. ಶೈಲಿ ಸೊಗಸಾಗಿದೆಯಾದರೂ ಕಾವ್ಯ ಗಂಗೆಯಲ್ಲಿ ಗೊಳ್ಳೆಗೊರಚೆ ಚಿಪ್ಪುಗಳು ತೇಲದಿಲ್ಲ. ಬಲ್ಲಿದರಿಂದ ಕೈಯಾಡಿಸಿದ್ದರೆ ಕಣ್ಣಾಡಿಸಿದ್ದರೆ ಲೇಸಿತ್ತೇನೊ ಎನ್ನಿಸುತ್ತದೆ. ಕೃತಿಯ ವೈಶಿಷ್ಟ್ಯವನ್ನು ಕುರಿತು ಕವಿ ಹೀಗೆ ಹಾಡಿದ್ದಾನೆ :—

"ಇದುವೆ ತತ್ತ್ವದ ಮುಡಿಗೆ ಮಣಿತಾ
ನಿದುವೆ ರೇವಣಸಿದ್ಧ ಗೀತವು
ಮಧುರ ಜೀವಿಯ ಶಿವನನಾಗಿಪ ಮೂಲಮಂತ್ರಾರ್ಥ |
ಇದುವೆ ಭೇದಾಭೇದಯೋಗವು
ಮುದದೊಳೋದುವ ಭಕ್ತಗೊಲಿವುದು
ಸದದಿ ರೇಣುಕ ಗುರುವಗಸ್ತ್ಯಂಗೊರೆದ ಶಿವಯೋಗ"

'ರೇವಣಸಿದ್ಧ ಗೀತೆ' ಎಂದು ಹೇಳುವ ಕವಿಯು ಚಾರಿತ್ರಕ ಪ್ರಶ್ನೆಯನ್ನು ಪ್ರಶ್ನಿಸಬೇಕಾಗುತ್ತದೆ. ಇಲ್ಲವಾದರೆ 'ರೇವಣ' ಪದವನ್ನು ಏಕೆ ಪ್ರಯೋಗಿಸಬೇಕಿತ್ತು ? ಈ ಪ್ರಯೋಗ ಮತ್ತೆ ಮತ್ತೆ ಮರುಕಳಿಸುತ್ತದೆ. ಇದು ರೇಣುಕ ಗೀತೆಯಲ್ಲದೆ ರೇವಣಸಿದ್ಧ ಗೀತೆಯಲ್ಲ. ರೇಣುಕರೆ ಬೇರೆ ; ರೇವಣರೆ ಬೇರೆ. ರೇಣುಕರು ಪ್ರಾಚೀನರು ; ರೇವಣರು ಅರ್ವಾಚೀನರು ; ಹನ್ನೊಂದನೆಯ ಶತಮಾನದವರು.

'ನಿಜಗುಣಸಿದ್ಧ'ರು ನಿಜಕ್ಕೂ ಸಾಹಸಶೀಲರು. ಸಾಹಿತ್ಯಸಾಧನೆ ಜೀವಿಗಳು. ಬಡತನದ ಕುಲುಮೆಯಲ್ಲಿ ಕುದ್ದು ಶುದ್ಧರಾದವರು; ಬೆಂದು ಬಣ್ಣವೇರಿದವರು. ಎಳೆತನದಲ್ಲಿ ತಬ್ಬಲಿಯಾಗಿ ಎಲ್ಲೆಲ್ಲಿಯೊ ಇದ್ದು ಬುದ್ಧಿಗಲಿತವರು. ಇವರು ಪಟ್ಟ ಪಾಡು ಅನಿತನಿತಲ್ಲ. ಆದರೂ ಎದೆ ಗುಂದದೆ ಎದೆ ಎತ್ತಿ ನಿಂತಿದ್ದಾರೆ. ಹೃದಯ ಶ್ರೀಮಂತಿಕೆಯನ್ನು ಉಳಿಸಿಕೊಂಡಿದ್ದಾರೆ. ಮಾಹೇಶ್ವರ ಸಂಸ್ಕೃತಿಯ ಮನೆತನದವರು. ಶಿವಾಚಾರ್ಯ ಸಾಹಿತ್ಯದ ಸಂಸ್ಕಾರದಲ್ಲಿ ಬೆಳೆದು ಬಂದವರು. ಆ ಸಾಹಿತ್ಯ ಪ್ರಭಾವ ಅವರಲ್ಲಿ ಅಚ್ಚೊತ್ತಿ ನಿಂತಿದೆ. ಜಗದ್ಗುರು ಪಂಡಿತಾಚಾರ್ಯರ ಪರಂಪರೆಯವರು. ಶ್ರೀಶೈಲ ಪೀಠ (ಮುಕ್ತ ಗುಚ್ಛ) ಸೂತ್ರದವರು. ಧಾರ್ಮಿಕವಾಗಿಯೂ ದಾರ್ಶನಿಕವಾಗಿಯೂ ನಮಗೆ ಹತ್ತಿರದವರೆಂಬ ಹೆಮ್ಮೆ ಹರುಷಗಳು ನಮ್ಮವು.

'ಸಿದ್ಧಾಂತ ಶಿಖಾಮಣಿ' ಯಂತಹ ಉದ್ಗ್ರಂಥದ ಮೇಲೆ ಕೈಯಾಡಿಸುವ, ಕನ್ನಡಕ್ಕೆ ಅನುವಾದಿಸಿ ಕಾವ್ಯವನ್ನು ಬರೆವ ಸಾಹಸ ಸಣ್ಣದೇನಲ್ಲ. ಭಾವಾನುವಾದ ಭಾವಾಕರ್ಷಕವಾಗಿ ಬಂದಿದೆ. ಭಾಷಾ ದೋಷಗಳಿದ್ದರೂ ರಸಾಭಾಸವೇನಿಲ್ಲ. ಸೈದ್ಧಾಂತಿಕ ವಿಚಾರಗಳನ್ನು ಕನ್ನಡ ಕಾವ್ಯಕ್ಕೆ ಬಳಸಿಕೊಳ್ಳುವುದರಲ್ಲಿ ಸಮತೂಕ ಸಂಯಮ ಸುಭಗತೆಗಳನ್ನು ಕಾಯ್ದುಕೊಂಡಿರುವರು. ಶಿವಯೋಗಿ ಶಿವಾಚಾರ್ಯರ ಗಂಭೀರ ಭಾವಗಳನ್ನು ದಿವ್ಯರಸವನ್ನು ಕಮನೀಯ ಕಲ್ಪನೆಗಳನ್ನು ಉಳಿಸಿಕೊಂಡು ಬರಲು ಪರಿಶ್ರಮಿಸಿದ್ದಾರೆ. ಭಾವಜೀವಿಗಳಾದ ಶ್ರೀ ಸಿದ್ಧಯ್ಯನವರು ಈ ದಿಸೆಯಲ್ಲಿ ಸಫಲರಾಗಿದ್ದಾರೆ. ಓದುಗರ ಅಭಿರುಚಿಯನ್ನು ಕಳೆಯದ ಶೈಲಿ

ಯನ್ನು ಉದ್ದಕ್ಕೂ ಉಪಯೋಗಿಸಿದ ಕುಶಲತೆ ಇವರದು. ಕನ್ನಡದ ಚೆನ್ನು ಇವರದು. ಇವರ ಶುಚಿ ರುಚಿಗಳ, ಶ್ರದ್ಧೆ ನಿಷ್ಠೆಗಳ ಉತ್ತಮ ಭವಿಷ್ಯದ ಪ್ರತೀಕ ಇವರ ಈ ಸತ್ಕೃತಿ ! ಇದು ಇವರ ಅನುವಾದ ಕೃತಿಯೆನಿಸದೆ ಸ್ವತಂತ್ರ ಕೃತಿಯೆನಿಸುವಷ್ಟು ಶಕ್ತಿ, ಸಲ್ಲಕ್ಷಣಗಳಿಂದ ಕೂಡಿದೆ. ಪದ್ಯ ಪದ್ಯದಲ್ಲಿ ಸರಸತೆ ಸುಭಗತೆಗಳು ನೆಲೆಸಿವೆ. ಶಿವಯೋಗಿ ಶಿವಾಚಾರ್ಯರ ಅರಿವು ಅನುಭವಗಳನ್ನು ಸರಿಯಾಗಿ ಜೀರ್ಣಿಸಿಕೊಳ್ಳದೆ ಈ ಬಗೆಯಾಗಿ ಬರೆದು ರೂಪಿಸಲು ಸಾಧ್ಯವಾಗದು. ಇವರ ಈ ಅನುವಾದಶಕ್ತಿಯನ್ನು ಸಂದರ್ಶಿಸಲು ಯಾವ ಪದ್ಯವನ್ನೆತ್ತಿ ಬರೆಯಬೇಕೊ ತಿಳಿಯದಂತಿದೆ. ಓದುಗರ ಎದುರಿಗೆ ಇಡೀ ಕಾವ್ಯವೇ ಇದೆ. ಓದುಗರೇ ಓದಿ ಅರಿಯಬೇಕು. ಅನುವರಿದ ಅನುವಾದ. ಕಳೆತರುವ ಕಲೆಯ ಕುರುಹ ಬೀರುವ ಕನ್ನಡ ಕೃತಿಗಳಲ್ಲಿ ಇದೊಂದು ಎಂದು ಹೇಳಿದಲ್ಲಿ ಹೆಚ್ಚೇನಲ್ಲ. 'ರೇಣುಕ ಗೀತೆ'ಯನ್ನು ಕನ್ನಡ ಷಟ್ಪದಿಗೆ ತಂದ ಕೀರ್ತಿ ಇವರದು. ಇವರಿಂದ ಇನ್ನೂ ಉತ್ತಮ ಕೃತಿಗಳು ಹೊರಬರಲೆಂದು ಹರಸಿ ಇವರ ಅಪೇಕ್ಷೆಯಂತೆ ಈ ಕೃತಿಗೆ ಈ ಮೂರು ಮಾತುಗಳನ್ನು ಬರೆಯುವಂತಾದುದಕ್ಕೆ ಸಂತೋಷವೆನಿಸಿದೆ.

ನಿಡುಮಾಮಿಡಿ,
[redacted] ಸಂಸ್ಥಾನ,
ಗೂಳೂರು.
೧೨–೧೨–೧೯೭೧

[redacted]
ಶ್ರೀ ಜ. ಚ. ನಿ.

# ಗ್ರಂಥವಿಚಾರ

ಶ್ರೀ ಜಗದ್ಗುರು ರೇಣುಕಾಚಾರ್ಯರು ಪರಶಿವನ ಅಪ್ಪಣೆಯ ಮೇರೆಗೆ ತ್ರಿಲಿಂಗದೇಶದ ಶ್ರೀ ಸೋಮನಾಥ ಶಿವಲಿಂಗದಿಂದವತರಿಸಿ ವೀರಶೈವ ಮತವನ್ನು ಸ್ಥಾಪಿಸಿ, ಶಿವಾದ್ವೈತ ಸಿದ್ಧಾಂತವನ್ನು ಸರ್ವತ್ರ ನೆಲೆಗೊಳಿಸಿದ ಸಂಗತಿ ನಿಗಮಾಗಮ ಪ್ರಸಿದ್ಧವಾಗಿದೆ. ಶ್ರೀ ಪೂಜ್ಯಪಾದರು ಶಿವಜೀವೈಕ್ಯ ರೂಪ ಲಿಂಗಾಂಗ ಸಾಮರಸ್ಯವನ್ನು, ಶಿವಾದ್ವೈತ ತತ್ತ್ವವನ್ನು ಮಲಯಾ ಶ್ರಮದಲ್ಲಿದ್ದ ಅಗಸ್ತ್ಯ ಮಹರ್ಷಿಗೆ ಬೋಧಿಸುವುದೇ 'ಶ್ರೀ ರೇಣುಕ ಗೀತೆ' ಎಂಬೀ ಷಟ್‌ಸ್ಥಲ ಸಿದ್ಧಾಂತ ಗ್ರಂಥದ ವಸ್ತುವಾಗಿದೆ. ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ—ಎಂಬೀ ಆರು ಸೋಪಾನಗಳೇ ಷಟ್‌ಸ್ಥಲಗಳು. ಶುದ್ಧಜೀವಿಯು ಮುಕ್ತಿಮಂದಿರವನ್ನು ಪ್ರವೇಶಿಸಲು ಪ್ರವೃತ್ತಿ ಮಾರ್ಗವಾದ 'ಅಂಗ ಷಟ್‌ಸ್ಥಲ'ಗಳಲ್ಲೂ ; ನಿವೃತ್ತಿಮಾರ್ಗ ವಾದ 'ಲಿಂಗ ಷಟ್‌ಸ್ಥಲ'ಗಳಲ್ಲೂ ಸಾಧನೆಮಾಡಿ ಪರಿಪೂರ್ಣತೆ ಪಡೆಯ ಬೇಕಾಗುತ್ತದೆ.

ಅಂಗ ಷಟ್‌ಸ್ಥಲಗಳಲ್ಲಿ ಸಾಧನೆ ಮಾಡುವುದರಿಂದ ಕರ್ಮ ಮತ್ತು ಜ್ಞಾನಯೋಗಗಳಲ್ಲೂ ; ಲಿಂಗಷಟ್‌ಸ್ಥಲಗಳಲ್ಲಿ ಸಾಧನೆ ಮಾಡುವುದರಿಂದ ಲಯಯೋಗದಲ್ಲೂ ಸಿದ್ಧಿ ಹೊಂದುತ್ತಾನೆ—ವೀರಶಿವಮತಿ ! ಅಂದರೆ ದೇಹ ದೇಗುಲವಾಗಿ ಪಾವನನೂ; ಜೀವ ಶಿವನಾಗಿ ಪೂಜ್ಯನೂ, ಮುಕ್ತನೂ ಆಗುತ್ತಾನೆ; ಶಿವಯೋಗಿಯಾಗುತ್ತಾನೆ.

'ಅಂಗಷಟ್‌ಸ್ಥಲ' ಮತ್ತು 'ಲಿಂಗಷಟ್‌ಸ್ಥಲ'ಗಳು ಶಿವಯೋಗ ಮಾರ್ಗದಲ್ಲಿರುವ ಎರಡು ಮೈಲುಗಲ್ಲುಗಳು. ಅಂಗಷಟ್‌ಸ್ಥಲಾಪನ್ನನಾದ ಶಿವಯೋಗಿಯು 'ಪಿಂಡಸ್ಥಲ'ದಿಂದ 'ಸಹಭಾಜನಸ್ಥಲ'ದೊರೆಗಿನ ನಾಲ್ವತ್ತು ನಾಲ್ಕು ಸ್ಥಲಗಳಲ್ಲೂ ಸಾಧನೆ ಮಾಡಬೇಕಾಗುತ್ತದೆ. ಇದು ಆಚಾರ ಪ್ರಧಾನವಾದ ಜ್ಞಾನಸಾಧನ ಮಾರ್ಗ. ಕರ್ಮಯೋಗದಲ್ಲಿ 'ಅಂಗ' ಶುದ್ಧಿಯನ್ನು ಪಡೆದ ಸಿದ್ಧ, ಜ್ಞಾನೋಪಾಸನೆಯಿಂದ ಸಹ

ಭಾಜನನಾಗಿ ಮುಕ್ತನಾಗುತ್ತಾನೆ. ಲಿಂಗಷಟ್‌ಸ್ಥಲಾಪನ್ನನಾದ ಶಿವ ಯೋಗಿಯು 'ದೀಕ್ಷಾ ಗುರುಸ್ಥಲ'ದಿಂದ 'ಜ್ಞಾನಶೂನ್ಯಸ್ಥಲ'ದವರೆಗೆ ಐವತ್ತೇಳು ಹಂತಗಳನ್ನೇರಿ ಪರಿಪೂರ್ಣತೆಯನ್ನು ಪಡೆಯುತ್ತಾನೆ. ಅಂದರೆ 'ಅಂಗ'—'ಲಿಂಗ'ವಾಗುತ್ತಾನೆ; 'ಜೀವ'—'ಶಿವ'ನಾಗುತ್ತಾನೆ.! ಹೀಗೆ ಶಿವಾದ್ವೈತ ತತ್ತ್ವವು ಸಿದ್ಧಾಂತ ಮಾಡಲ್ಪಟ್ಟಿದೆ—ಶ್ರೀ ರೇಣುಕ ಭಗವತ್ಪಾದರಿಂದ.

ವೀರಶೈವ ಮತಸ್ಥಾಪಕರಾದ ಶ್ರೀ ಜಗದ್ಗುರು ರೇಣುಕಾಚಾರ್ಯರು ಜಗದ್ವಿಖ್ಯಾತರಾದ ಅಗಸ್ತ್ಯ ಮಹರ್ಷಿಗಳಿಗೆ ಶಿವಾದ್ವೈತಸಾರರೂಪ ಷಟ್ ಸ್ಥಲ ಸಿದ್ಧಾಂತವನ್ನುಪದೇಶಿಸಿ ಆ ಮಹರ್ಷಿಯನ್ನು ಮುಕ್ತನನ್ನಾಗಿಸಿದರು. ಹಾಗೂ ರಾವಣಾನುಜನಾದ ವಿಭೀಷಣನಾಭೀಷ್ಟದಂತೆ ಮೂರು ಕೋಟಿ ಶಿವಲಿಂಗಗಳನ್ನು ಏಕಕಾಲದಲ್ಲಿ ಸ್ಥಾಪಿಸಿದರು—ಎಂಬೀ ವಿಷಯವು ಈ ಗ್ರಂಥದಲ್ಲಿ ಪ್ರತಿಪಾದಿಸಲ್ಪಟ್ಟಿದೆ.

ಈ ಗ್ರಂಥವು ಶ್ರೀ 'ಸಿದ್ಧಾಂತ ಶಿಖಾಮಣಿ' ಎಂಬ ಸಂಸ್ಕೃತ ಗ್ರಂಥವನ್ನಾಧರಿಸಿದೆ. ಮೂಲಗ್ರಂಥದಲ್ಲಿರುವ ಇಪ್ಪತ್ತೊಂದು ಪರಿಚ್ಛೇದ ಗಳನ್ನು ಇಪ್ಪತ್ತೊಂದು ಸಂಧಿಗಳಲ್ಲಿ ಅಳವಡಿಸಲಾಗಿದೆ. ಪೀಠಿಕಾ ಸಂಧಿ ಯಲ್ಲಿ ಕನ್ನಡಿಸಿದ ಕವಿಯ ಮತ್ತು ಕಾವ್ಯದ ವಿಚಾರ ಪ್ರಸ್ತಾಪಿಸಲ್ಪಟ್ಟಿದೆ. ಅಂದರೆ ಒಟ್ಟು ಇಪ್ಪತ್ತೆರಡು ಸಂಧಿಗಳಿವೆ—ಈ ಗ್ರಂಥದಲ್ಲಿ.

ಮೂಲಗ್ರಂಥದಲ್ಲಿರುವ ಒಂದುಸಾವಿರದ ಮುನ್ನೂರು ಮೂವತ್ತು ಶ್ಲೋಕಗಳನ್ನು 925 ಭಾಮಿನಿ ಷಟ್ಪದಿಗಳಲ್ಲಿ ಭಾವಾನುವಾದ ಮಾಡಲ್ಪ ಟ್ಟಿದೆ. ಇಪ್ಪತ್ತೊಂದು ಸಂಧಿಗಳಲ್ಲಿ 1, 2, 3, 4 ಮತ್ತು 21ನೆಯ ಸಂಧಿಗಳಲ್ಲಿ ಮಾತ್ರ ಚಾರಿತ್ರಿಕಾದಿ ವಿಷಯಗಳು ಪ್ರತಿಪಾದಿಸಲ್ಪಟ್ಟಿವೆ. ಸಂಧಿ 5 ರಿಂದ 20ನೆಯ ಸಂಧಿಯ ವರೆಗಿರುವ 16 ಸಂಧಿಗಳಲ್ಲಿ ಷಟ್‌ಸ್ಥಲ ಸಿದ್ಧಾಂತವನ್ನು ಪ್ರತಿಪಾದಿಸುವ ಒಟ್ಟು ಒಂದುನೂರ ಒಂದು ಸ್ಥಲಗಳ ಸಮಗ್ರ ಸ್ವರೂಪವು ನಿರೂಪಿಸಲ್ಪಟ್ಟಿದೆ. ಈ ಗ್ರಂಥದಲ್ಲಿ ಒಟ್ಟು 951 ಷಟ್ಪದಿಗಳೂ, ಇಪ್ಪತ್ತು ಮೂರು ಪದ್ಯಾರ್ಥ (ಸೂಚನಾ ಪದ್ಯ)ಗಳೂ ಇವೆ.

ಗ್ರಂಥದ ಮೊದಲನೆಯ ಭಾಗವು ಕವಿಕಾವ್ಯವಿಚಾರ, ಶಿವಯೋಗಿ ಶಿವಾಚಾರ್ಯರ ವಂಶಾವಳಿ ವೃತ್ತಾಂತ, ಜಗತ್ ಸೃಷ್ಟಿ ವರ್ಣನೆ, ಕೈಲಾಸ ವರ್ಣನೆ, ರೇಣುಕರ ಲಿಂಗಾವತಾರ, ಮಲಯಾಶ್ರಮದ ವರ್ಣನೆ, ಮತ್ತು ಅಂಗ ಷಟ್‌ಸ್ಥಲಗಳನ್ನು ಪ್ರತಿಪಾದಿಸುತ್ತದೆ. ಪೀಠಿಕಾ ಸಂಧಿಯೂ ಸೇರಿ ಒಟ್ಟು ಹದಿನೈದು ಸಂಧಿಗಳಿವೆ.

ಗ್ರಂಥದ ಎರಡನೆಯ ಭಾಗವು ಲಿಂಗ ಷಟ್‌ಸ್ಥಲಗಳನ್ನೂ, 'ವಿಭೀಷಣಾಭೀಷ್ಟ ವರಪ್ರದಾನಂ'—ಎಂಬ ಸಂಗತಿಯನ್ನು ಪ್ರತಿಪಾದಿಸುತ್ತದೆ. ಎರಡನೆಯ ಭಾಗದ ಏಳು ಸಂಧಿಗಳ ಪೈಕಿ ಆರು ಸಂಧಿಗಳು ಲಿಂಗ ಷಟ್‌ಸ್ಥಲವನ್ನು ಪ್ರತಿಪಾದಿಸುತ್ತವೆ.

ಪ್ರತಿ ಸಂಧಿಯ ಆರಂಭದಲ್ಲೂ ಪ್ರಸ್ತಾಪಿಸಲಿರುವ ವಿಷಯವನ್ನು ಸೂಚ್ಯವಾಗಿ ಹೇಳಿ, ಸಂಧಿಯ ಕೊನೆಯೊಂದು ಪದ್ಯದಲ್ಲಿ ಉಪಸಂಹಾರ ರೂಪವಾಗಿ ಇಡೀ ಸಂಧಿಯಲ್ಲಿ ಪ್ರಸ್ತಾಪಿಸಿದ ವಿಷಯವನ್ನೆಲ್ಲಾ ಕ್ರೋಢೀಕರಿಸಿ ಹೇಳಿದೆ.

ಶ್ರೀ 'ಸಿದ್ಧಾಂತ ಶಿಖಾಮಣಿ'ಯು ವೀರಶೈವ ಮತ ಗ್ರಂಥಗಳಲ್ಲೆಲ್ಲಾ ಅತಿ ಪ್ರಾಚೀನವಾದುದೆಂಬುದು ಅನೇಕ ಪಂಡಿತರ ಅಭಿಪ್ರಾಯವಾಗಿದೆ. ಶ್ರೀಪತಿ ಪಂಡಿತರು, ಶ್ರೀಕಂಠಶಿವಾಚಾರ್ಯರು, ಭಟ್ಟೋಜಿ ದೀಕ್ಷಿತರು, ಕಮಲಾಕರ ಭಟ್ಟರು—ಇನ್ನೂ ಮುಂತಾದ ಉದ್ದಾಮ ಪಂಡಿತರು ತಾವು ಬರೆದಿರುವ ಗ್ರಂಥಗಳಲ್ಲಿ 'ಸಿದ್ಧಾಂತ ಶಿಖಾಮಣಿ'ಯ ಪ್ರಮಾಣಗಳನ್ನು ಉದಾಹರಿಸಿದ್ದಾರೆ. ಅಂತಾಗಿ ಇದು ಸರ್ವಮತ ಪಂಡಿತ ಮಂಡಲಿಯಿಂದ ಅಂಗೀಕೃತವಾಗಿ ಮಾನ್ಯತೆ ಪಡೆದಿದೆ ಎಂದು ಸಿದ್ಧವಾಗುತ್ತದೆ.

ಇಂತಹ ಅಮೂಲ್ಯ ಗ್ರಂಥವನ್ನು ರಚಿಸಿದ ಶ್ರೀ ಶಿವಯೋಗಿ ಶಿವಾಚಾರ್ಯರು ಸ್ತುತ್ಯರಿರುತ್ತಾರೆ. ಆದರೆ ಇವರ ಕಾಲವಾವುದು? ಯಾವ ದೇಶದವರು? ಎಂಬುದನ್ನು ಹೇಳಿಕೊಂಡಿಲ್ಲ. ಶ್ರೀ ಕಾಶೀನಾಥ ಶಾಸ್ತ್ರಿಗಳು ಇವರು ಕರ್ಣಾಟಕ ದೇಶದ ಜಂಗಮ ಮನೆತನದವರೆಂದೂ, ಸರಿ

ಸುಮಾರು ಎರಡು ಸಾವಿರ ವರ್ಷಗಳಷ್ಟು ಹಳಬರೆಂದೂ ಅಭಿಪ್ರಾಯ ಪಟ್ಟಿದ್ದಾರೆ. ಒಂದು ನೂರ ಒಂದು ದಾರ್ಶನಿಕ ಗ್ರಂಥಗಳನ್ನು ಬರೆದು ಪ್ರಸಿದ್ಧರಾದ ನಿಡುಮಾಮಿಡಿ ಜಗದ್ಗುರುಗಳವರ ಅಭಿಪ್ರಾಯವೂ ಇದೇ ಆಗಿದೆ.

ಶ್ರೀ ಶಿವಯೋಗಿ ಶಿವಾಚಾರ್ಯರು ರಚಿಸಿರುವ ಶ್ಲೋಕಗಳು ಪದಲಾಲಿತ್ಯದಿಂದ ಮನೋಜ್ಞವಾಗಿವೆ; ಸರಳವಾದರೂ ಅರ್ಥಗರ್ಭಿತ ವಾಗಿವೆ; ಶಾಂತರಸ ಪ್ರತಿಪಾದನೆಯಿಂದ ಮೈದುಂಬಿವೆ—ಎಂಬುದು ವಿಮರ್ಶಕರ ಅಭಿಪ್ರಾಯವಾಗಿದೆ.

ಭಾವಾನುವಾದ ಮಾಡುವಾಗ ಈ ಮೇಲಿನ ಮೂಲಮಾನಗಳನ್ನು ಗಮನದಲ್ಲಿಟ್ಟುಕೊಂಡೇ ಮುಂದುವರಿದಿದ್ದೇನೆ. ನನ್ನೀ ಸಾಧನೆ ಹೇಗೆ ಸಿದ್ಧಿಸಿದೆ? ಎಷ್ಟರಮಟ್ಟಿಗೆ ಆ ಮಟ್ಟಕ್ಕೇರಲೆತ್ನಿಸಿದೆ? ಎಂಬುದರ ವಿಮರ್ಶೆ ಯನ್ನು ಸಹೃದಯರಿಗೆ ಬಿಟ್ಟಿದ್ದೇನೆ.

ಶಾಸ್ತ್ರ, ತತ್ತ್ವ ಮತ್ತು ಕಾವ್ಯಗಳೆಂಬ ತ್ರಿವೇಣೀ ಸಂಗಮದಂತಿರುವ ಈ ರಸವತ್ಕೃತಿಯು ಎಲ್ಲಾ ಕನ್ನಡಿಗರ ಮನ ಮತ್ತು ಮನೆಗಳನ್ನು ಅಲಂಕರಿಸುವುದೆಂದು ನಂಬಿದ್ದೇನೆ.

—ನಿಜಗುಣಸಿದ್ಧ.

# ನಿವೇದನೆ

೧

ಸಹೃದಯರೇ,

ಶ್ರೀ 'ಸಿದ್ಧಾಂತ ಶಿಖಾಮಣಿ'—ಎಂಬ ಸಂಸ್ಕೃತ (ದರ್ಶನ) ಧರ್ಮಗ್ರಂಥವು ಕನ್ನಡ ಹಾಡುಗಬ್ಬವಾಗಿ ಶ್ರೀ 'ರೇಣುಕಗೀತೆ'ಯಾಗಿ ಮೈತಳೆದು ಕನ್ನಡಿಗರ ಕೈಸೇರುವಂತಾಗಿದೆ. ಈ ರಸವತ್ಕೃತಿಯು ರೂಪು ದಳೆಯಲು ಶ್ರೀ ಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳ ಕೃಪಾಶೀರ್ವಾದವೇ ಮೂಲಕಾರಣ. ಮಹಾತ್ಮರ ದಿವ್ಯದೃಷ್ಟಿಯು ನನ್ನಲ್ಲಿದ್ದ ಸುಪ್ತ ಚೇತನವನ್ನು ಜಾಗೃತಗೊಳಿಸಿತು. ಹಲವಾರು ಧರ್ಮಗ್ರಂಥಗಳನ್ನು ಓದಿ, ಹಲವಾರು ಪಾದಸರಣೆಯನ್ನು ಕೇಳಿ ಹಲವಾರು ಆಶ್ರಮಗಳಲ್ಲಿ ಆಶ್ರಯ ಪಡೆದು ಸಾಧನೆ ಮಾಡಿದರೂ ನನ್ನ ಹೃದಯ ನೆಮ್ಮದಿ ಕಂಡಿರಲಿಲ್ಲ. ನಿಲುಗಡೆಗಾಗಿ ಹಾತೊರೆವ ಸಮುದ್ರ ಪಕ್ಷಿಯಂತಾಗಿತ್ತು. ರಾಮಕೃಷ್ಣಾಶ್ರಮವಾಯಿತು, ರಾಮದಾಸಾಶ್ರಮ, ದತ್ತಾಶ್ರಮಗಳಾದವು, ಮಂಗಳೂರಿನ ರಮಾಶ್ರಮವಾಯಿತು, ಶಿರಡಿಯ ಸಾಯಿ ಮತ್ತು ಪುಟ್ಟಪರ್ತಿಯ ಸತ್ಯಸಾಯಿಯ ಆಶ್ರಮವನ್ನು ಕಂಡುಬಂದಾಯಿತು. ವೇದೋಪನಿಷತ್ತುಗಳಲ್ಲದೆ ಕುರಾನು, ಬೈಬಲ್ಲು ಗಳನ್ನು ಓದಿದ್ದಾಯಿತು. ಆದಾಗ್ಯೂ ನಾನು ಐಹಿಕವಾಗಿಯೂ, ಪರಮಾರ್ಥಿಕವಾಗಿಯೂ ಕಡುಬಡವನಾಗಿದ್ದೇನೆಂಬ ಕೊರಗು ಕಾಡುತ್ತಿತ್ತು. ಸದಾಶ್ರಯಕ್ಕಾಗಿ ಹೃದಯ ತುಡಿಯುತ್ತಿತ್ತು.

ಇಂತಹ ತುಮುಲು ಹೃದಯನಾಗಿದ್ದ ನಾನು ಬೆಂಗಳೂರಿನಲ್ಲಿ ನಡೆದ ಶ್ರೀಶೈಲ ಜಗದ್ಗುರುಗಳ ಅಡ್ಡಪಲ್ಲಕ್ಕಿ ಮಹೋತ್ಸವ ನೋಡಲು ಮಡಕೇರಿಯಿಂದ ಬಂದೆನು. ಶಿವಾಚಾರ್ಯರ ದರ್ಶನ ಲಾಭವಾಯಿತು. ಕರುಣಾ ಪ್ರಸಾದವೂ ದೊರೆಯಿತು. ಅಂದು ಗುರುವಾರ. ಆಶೀರ್ವಾದ ನುಗ್ರಹ ಪಡೆದು ಬರಲು ಹೋದಾಗ ಶ್ರೀ ಸನ್ನಿಧಿಯು "ಹಲವು ಹನ್ನೊಂದು ಪುಸ್ತಕ ಓದುವುದು ಬೇಡ. ಶ್ರೀ 'ಸಿದ್ಧಾಂತ ಶಿಖಾಮಣಿ'

ಯನ್ನು ಪಾರಾಯಣ ಮಾಡು"—ಎಂದು ಅಪ್ಪಣೆ ಕೊಡಿಸಿದರು. ಆಧ್ಯಾತ್ಮ ಗುರುವಿನ ಮಾತೇ ಜ್ಯೋತಿರ್ಲಿಂಗವೆಂದು ನಂಬಿ ಆಜ್ಞೆಯನ್ನು ಶಿರಸಾ ವಹಿಸಿದೆನು. ಅಂದೇ ಕಲ್ಯಾಣಭವನದಿಂದ ಒಂದು ಪ್ರತಿ 'ಸಿದ್ಧಾಂತ ಶಿಖಾಮಣಿ' ಯನ್ನು ಕೊಂಡೆನು. ಬಿಡುವಾದಾಗಲೆಲ್ಲಾ ಓದಲಾರಂಭಿಸಿದೆನು.

ದೈವಯೋಗದಿಂದ ನನಗೆ ಮಡಕೇರಿಯಿಂದ ಬೆಂಗಳೂರಿಗೆ ವರ್ಗವಾಯಿತು. ಗಾಂಧೀನಗರದಲ್ಲಿರುವ ಶ್ರೀ ತಿಪ್ಪಶೆಟ್ಟಿ ಮಠದಲ್ಲಿ ವಸತಿಯ ಅನುಕೂಲವಾಯಿತು. ಶ್ರೀ ಗುರುಸಿದ್ಧ ಶಿವಯೋಗಿಗಳ ತಪೋನೆಲೆಯಾದ ಶ್ರೀ ಮಠದಲ್ಲಿ ಸತತಾಭ್ಯಾಸಕ್ಕಾರಂಭಿಸಿದೆನು. ಮೂಲ ಗ್ರಂಥದ ಸಂಸ್ಕೃತ ಶ್ಲೋಕಗಳ ಅರ್ಥ ಗ್ರಹಿಸಲು ಶ್ರೀ ಕಾಶೀನಾಥ ಶಾಸ್ತ್ರಿಗಳ ಮತ್ತು ಕರಿಬಸವ ಶಾಸ್ತ್ರಿಗಳ ಟಿಪ್ಪಣಿಗಳು ಕೈದೀವಿಗೆಯಾದವಾದರೂ ಸಂದೇಹಗಳಿದ್ದೇ ಇದ್ದವು. ೧೯೬೪ನೇ ಶ್ರಾವಣಮಾಸದಲ್ಲಿ ಒಂದು ಮಾಸಪೂರ್ತಿ ಶ್ರೀ ಕಲ್ಲಿನಾಥಶಾಸ್ತ್ರಿಗಳು ಕೃಪೆಮಾಡಿ ಅರ್ಥೈಸಿ ಪಾಠ ಹೇಳಿದರು. ಅವರು 'ನಿಜಗುಣ' ಶಿವಯೋಗಿಗಳ ಸಾಹಿತ್ಯವನ್ನೇ ಕಂಠಪಾಠ ಮಾಡಿಕೊಂಡಿದ್ದರು. ಜ್ಞಾನವೃದ್ಧರೂ, ವಯೋವೃದ್ಧರೂ, ಶಿವಾನುಭವಿಗಳೂ ಆದ ಪುರಾಣಿಕರು ಮಾಡಿದ ಜ್ಞಾನದಾಸೋಹದಿಂದ ನನಗೆ ಗ್ರಂಥದ ವಿಷಯ ಆತ್ಮೀಯವಾಯಿತು; ಶ್ರದ್ಧೆ ಕುದುರಿತು.

ಬೆಂಗಳೂರಿನಿಂದ ಮತ್ತೆ ನನಗೆ ಶಿವಮೊಗ್ಗಕ್ಕೆ ವರ್ಗವಾಯಿತು. ೧೯೬೬ ನೇ ಆಗಸ್ಟ್ ತಿಂಗಳಾರಂಭದಲ್ಲಿ ಯೋಗಾಯೋಗದಿಂದ ಶ್ರೀ ಕೃಷ್ಣ ಶಾಸ್ತ್ರಿಗಳ ಭೇಟಿಯಾಯಿತು. ಅವರು ನಿವೃತ್ತ ಪ್ರೌಢಶಾಲೆಯ ಕನ್ನಡ ಪಂಡಿತರು. ಅವರೇ ಭಾಮಿನಿ ಷಟ್ಪದಿಯಲ್ಲಿ ಬರೆದ 'ಶ್ರೀ ಕೃಷ್ಣಗೀತೆ' ಎಂಬ ಕೃತಿಯ ಪ್ರತಿಯನ್ನು ನನಗೆ ಕೊಟ್ಟರು. ಕನ್ನಡ ಭಾಷಾಭಿಮಾನದಿಂದಲೂ, ಗೀತಾಭಿಮಾನದಿಂದಲೂ, ಅದನ್ನು ಅವರಿಂದ ಕೊಂಡುಕೊಂಡು ಓದಿದೆನು. ಅವರೀಕೃತಿ ಪ್ರತಿಬಾರಿಯೂ ಸಾವಿರದಂತೆ ಐದನೆಯ ಬಾರಿಗೆ ಮುದ್ರಣ ಕಂಡಿತ್ತು. ಅವರ ಸಾಹಸ ನನಗೆ ಮೆಚ್ಚಾಯಿತು; ಆದರ್ಶವಾಯಿತು.

ಶ್ರೀಕೃಷ್ಣಾರ್ಜುನರ ಸಂವಾದ ರೂಪವಾದ 'ಭಗವದ್ಗೀತೆ'ಯ ಭಾವಾನುವಾದವನ್ನೋದಿದ ಮೇಲೆ ನನ್ನಲ್ಲಿ ಒಂದು ಯೋಚನೆ ಮಿಂಚಿತು. ಶ್ರೀ ರೇಣುಕಾಗಸ್ತ್ಯ ಸಂವಾದರೂಪವಾದ ಶಿವಾದ್ವೈತ ತತ್ತ್ವ ಪ್ರತಿಪಾದಿಸುವ 'ಶ್ರೀ ಸಿದ್ಧಾಂತ ಶಿಖಾಮಣಿ' ಎಂಬ ವೀರಶೈವ ಧರ್ಮಗ್ರಂಥವನ್ನೇಕೆ ಕನ್ನಡ ಭಾಮಿನಿ ಷಟ್ಪದಿಯಲ್ಲಿ ಬರೆಯಬಾರದು?—ಎಂಬುದೇ ಹಾಗೆ ಮಿಂಚಿದ ಯೋಚನೆ. ಅಂದೇ ಸಂಕಲ್ಪ ಮಾಡಿದೆನು. ೧೯೭೬ನೆಯ ಆಗಸ್ಟ್ ೧೫ರಂದು ನನ್ನ ಸತ್ಯಸಂಕಲ್ಪವನ್ನು ಕೃತಿಗಿಳಿಸಿದೆನು.

ನನ್ನ ಸಂಕಲ್ಪಕ್ಕೆ ಹೊಂದಿಕೆಯಾಗದ ಸರ್ಕಾರಿ ನೌಕರಿಯನ್ನು ನಿರ್ವಹಿಸುತ್ತಲೇ ಅಳಿದುಳಿದ ಬಿಡುವನ್ನೆಲ್ಲಾ ಮೀಸಲಿಟ್ಟೆನು. ಹಾಗೆಯೇ ದೇವರಲ್ಲಿ ಹೆಚ್ಚಿನ ಬಿಡುವಿಗಾಗಿ ಮೊರೆಯಿಟ್ಟೆನು. ದಯಾಘನನಾದ ಮಲ್ಲಿಕಾರ್ಜುನ ನನ್ನ ಮೊರೆ ಕೇಳಿರಬೇಕು. ನನಗೆ ಚಿಕ್ಕಮಗಳೂರಿಗೆ ವರ್ಗವಾಯಿತು. ಆಡಿಟ್ ಮಾಡುವ ಸಂಚಾರಿ ಕೆಲಸ ತಪ್ಪಿತು. ಒಂದೇ ಕಡೆ ಒಂದು ಆಫೀಸಿಗೆ ಸೀಮಿತವಾಯಿತು ಕೆಲಸ. ಬಿಡುವು ಹೆಚ್ಚಾಗಿ, ಮಕ್ಕಳು ಮರಿಯೆಲ್ಲಾ ಒಂದೆಡೆ ನೆಲೆನಿಂತ ಪ್ರಯುಕ್ತ ನೆಮ್ಮದಿಯುಂಟಾಯಿತು. ಕೃತಿರಚನೆ ಭರದಿಂದ ನಡೆಯಿತು. ಶ್ರೀ ರೇಣುಕರಿಂದ ಸ್ಥಾಪಿಸಲ್ಪಟ್ಟ ಶ್ರೀ ರಂಭಾಪುರೀ ಪೀಠಕ್ಕೆ (ಬಾಳೆಹೊನ್ನೂರಿಗೆ) ಆಗಾಗ್ಗೆ ಹೋಗಿ ಪ್ರಭಾವಿತನಾದೆನು. ಆ ಪುಣ್ಯಕ್ಷೇತ್ರದ ಮಹಿಮೆಯಿಂದ 'ನಂದನವನ'ದ ದೃಶ್ಯ ಬಗೆಗಣ್ಣಿನ ಮುಂದೆ ಚೆಲ್ಲವರಿಯಿತು. ಆಗ ಮೈತಳೆದ ಪದ್ಯವಿಂತಿದೆ—

ತೊರೆದ ಕೆಚ್ಚಲ ಕರುವಿಗೂಡಿದ
ಕಿರಿದುಗೊಂಬಿನ ಕಪಿಲೆ, ಪೊದೆಯೊಳು
ಗರಿಕೆಮೇಯುವ ಮೊಲವು ಬಣ್ಣದ ಗರಿಯನರಳಿಸಿದ।
ವಿರಹ ನಾಟ್ಯದ ನವಿಲು ; ಮಾಮರ
ದರೆಯಮೇಲ್ಸರವಿಟ್ಟ ಕೋಗಿಲೆ ;
ಮರಕೆ ಮರದಿಂ ಪಾರ್ವಗಿಳಿಯಿಂ ಬನವು ನಲಿದಿತ್ತು !

ಚಿಕ್ಕಮಗಳೂರಿಗೂ ಹಿರಿಯಮಗಳೂರಿಗೂ ಮಧ್ಯದ ಹಾದಿಯಲ್ಲಿ ಸಂಜೆ ಮುಂಜಾನೆಯ ಗಾಳಿಸಂಚಾರ ನನ್ನ ಚಿಂತನ ಚೇತನಕ್ಕೆ ಪುಷ್ಟಿ

ಗೊಟ್ಟಿತು. ಅಂತಾಗಿ ೧೯೬೭ನೇ ಆಗಸ್ಟ್ ೧೫ನೆಯ ತೇದಿಗೆ ಗ್ರಂಥದ ಪ್ರಥಮ ಭಾಗವಾದ " ಅಂಗಸ್ಥಲ " ಪೂರ್ಣಗೊಂಡಿತು.

೨

ನಂತರ ನನ್ನ ಹೃದಯವನ್ನು ಶೂನ್ಯವಾವರಿಸಿತು. ನಾನು ಎಷ್ಟೇ ಪ್ರಯತ್ನಿಸಿದರೂ ಒಂದು ಪಸ್ಯವನ್ನು ರಚಿಸಲೂ ಸಾಧ್ಯವಾಗದೇ ಹೋಯಿತು. ಕೃತಿರಚನಾಶಕ್ತಿಯೇ ಉಡುಗಿಹೋಯಿತಲ್ಲಾ ಎಂದು ಪರಿತಪಿಸುವಂತಾಯಿತು. ಕವಿತಾಶಕ್ತಿಯುಡುಗಿಡುದಕ್ಕೆ ಕಾರಣ ತಿಳಿಯ ದಾಯಿತು. ನನ್ನ ಅನಿರೀಕ್ಷಿತ ಬಡತನದಿಂದ ಪರಿತಪಿಸುತ್ತಿದ್ದೆನು. ಈ ಕೊರಗಿನ ಒಂದಿರುಳು ಒಂದು ಕನಸಾಯಿತು—ಉದಯೋನ್ಮುಖನಾದ ಸೂರ್ಯ ಇದ್ದಕ್ಕಿದ್ದಂತೆ ಉತ್ತರಾಭಿಮುಖನಾಗಿ ಧಾವಿಸಿ ಪಶ್ಚಿಮದಿಗಂತಕ್ಕೆ ಬಂದು ಮುಳುಗಲಾರಂಭಿಸಿದನು. ನಾನು ಹೊತ್ತು ಮುಳುಗಿ ಕತ್ತಲಾವರಿ ಸುವ ಮುನ್ನ ಗುರಿಕಾಣಲು ಧಾವಿಸಿದ್ದೆನು. ಇಕ್ಕೆಲದ ಪ್ರಪಾತದ ಮಧ್ಯೆ ಕಿರಿದಾದ ಏರಿಯದಾರಿಯ ಮೇಲೆ ನನ್ನ ನಾಗಾಲೋಟ ಸಾಗಿತ್ತು. ಶಕ್ತಿಯುಡುಗಿತು ; ಹೊತ್ತು ಮುಳುಗಿತು ; ಗಾಢಾಂಧಕಾರ ಕವಿಯಿತು ! ದಿಕ್ಕುಗಾಣದೆ ಕುಸಿದು ಕುಳಿತು ಭಯಭೀತನಾಗಿ ಚಿಟ್ಟನೆ ಚೀರಿದೆನು ! ರೋಮರೋಮಗಳೆಲ್ಲಾ ನಿಮಿರಿನಿಂತಿದ್ದವು. ಎರಡೂ ಅಳ್ಳೆಗಳು ತಿದಿ ಯೊತ್ತಿ ಬಡಿದುಕೊಳ್ಳುತ್ತಿದ್ದವು. ಬೆವರು ಧಾರಾಕಾರವಾಗಿ ಸುರಿಯುತ್ತಿತ್ತು —ಎದ್ದು ಕುಳಿತಾಗ !

ಈ ಕನಸು ಬೆಳಗಿನ ಝಾವದಲ್ಲಾದ್ದರಿಂದ ನನ್ನ ಹೃದಯವನ್ನು ಮರಣಭಯ ಆವರಿಸಿತು. ಮಾಡಿದ್ದ ಸತ್ಯಸಂಕಲ್ಪವನ್ನು ಪೂರ್ಣಗೊಳಿ ಸದೆ ಪ್ರಾಣ ನೀಗಬೇಕಾಯಿತಲ್ಲಾ—ಎಂಬ ಸಂಕಟ ಮರಣಭಯಕ್ಕಿಂತ ಮಿಗಿಲಾಗಿ ಬಾಧಿಸಿತು. ಸತ್ಯಸಂಕಲ್ಪ ಈಡೇರದೆ, ಮರಣಭಯ ಕಾಡುವ ಈ ಸಂಕಟದಲ್ಲಿ ನನ್ನ ಆಧ್ಯಾತ್ಮ ಗುರುವನ್ನು ಮನಸಾ ಪ್ರಾರ್ಥಿಸಿದೆನು. ಮತ್ತೊಂದಿರುಳು ಸ್ವಪ್ನದಲ್ಲಿ ಶ್ರೀಗುರು ದರ್ಶನವಿತ್ತು ಅಭಯ ಪ್ರದಾನ ಮಾಡಿದರು. ಆಗ ನನ್ನ ಹೃದಯವು ಧೈರ್ಯ ಮತ್ತು ಸಂತೃಪ್ತಿಯಿಂದ ಕೂಡಿ ಆನಂದದಲ್ಲಿ ತೇಲಾಡಿತು. ೧೯೬೭ನೇ ಅಕ್ಟೋಬರ್ ಒಂದನೇ

ತಾರೀಖಿನಿಂದ ಮತ್ತೆ ಕೃತಿರಚನೆಯು ಕೈವಶವಾಯಿತು. ಜ್ಞಾನ ಭೂಯಿಷ್ಟವಾದ " ಲಿಂಗಷಟ್‌ಸ್ಥಲ " ವೆಂಬ ಎರಡನೆಯ ಭಾಗ ಪೂರ್ಣಗೊಂಡಿತು. ಪೂರ್ಣಗೊಂಡ ದಿನಾಂಕ ೧೪-೧೨-೧೯೬೦ನೆಯ ಗುರುವಾರ. ಆ ಒಂದೇ ದಿನ " ವಿಭೀಷಣಾಭೀಷ್ಟ ವರಪ್ರದಾನಂ " ಎಂಬ ಪರಿಚ್ಛೇದ ಪೂರ್ತಿಯಾಗಿ ಅನುವಾದಿಸಲ್ಪಟ್ಟಿತು! ಅಂದು ರಾತ್ರಿಯ ಲಿಂಗಪೂಜೆಯಲ್ಲಿ ಹೀಗೆ ಹಾಡಿ ಪ್ರಾರ್ಥನೆ ಸಲ್ಲಿಸಿದೆನು—

ಪಾಹಿ ಪರಮಜ್ಯೋತಿರೂಪನೆ
ಪಾಹಿ ಪರತರ ಲಿಂಗರೂಪನೆ
ಪಾಹಿ ಗಂಗಾಭರಣಭೂಷಣ ತಿಂಗಳೊಡಿದನೆ!
ಪಾಹಿ ಮಂಗಳಶ್ರುತಿ ವಿಲೋಚನ
ಪಾಹಿ ಪರಮಾನಂದ ಲಕ್ಷಣ
ಪಾಹಿ ಪಾರ್ವತಿಪತಿಯೆ! ಪರಶಿವ! ಪಾಹಿ ಪರಮೇಶ!

೩

ತನ್ನಯ ತತ್ತ್ರಿಯಮೇಲೆ ಹಕ್ಕಿ ಕಾವು ಕೂರುವಂತೆ ಈ ಕೃತಿಯ ಕರಡು ಪ್ರತಿಯನ್ನು ನಾನು ಮತ್ತೆ ಮತ್ತೆ ಓದಿದ್ದೇನೆ. ಹೊಳೆದ ಭಾವಗಳನ್ನು ಅಳವಡಿಸಿದ್ದೇನೆ. ಅನುವಾದ, ಮೂಲವನ್ನು ಪ್ರತಿಧ್ವನಿಸುವಂತೆ ಚಿಂತನಮಾಡಿದ್ದೇನೆ. ' ಸಿದ್ಧಾಂತ ಶಿಖಾಮಣಿ ' ಗ್ರಂಥಕ್ಕೆ ಸಂಬಂಧಿಸಿದ ಹಲವು ಟೀಕೆ ಟಿಪ್ಪಣಿ ಗ್ರಂಥಗಳನ್ನು ಅವಲೋಕಿಸಿದ್ದೇನೆ. ನಿಡುಮಾಮಿಡಿ ಜಗದ್ಗುರುಗಳ ಎಲ್ಲಾ ಪ್ರಯೋಗಗಳನ್ನು ಆಸ್ಥೆಯಿಂದ ಅಭ್ಯಾಸ ಮಾಡಿದ್ದೇನೆ. ಶ್ರೀ ಟಿ. ಎಸ್. ಮಲ್ಲಪ್ಪನವರ ವಚನವೇದ, ನಾಸದೀಯ ಸೂಕ್ತ, ಮೊದಲಾದ ಕೃತಿಗಳನ್ನೂ; ಡಾ॥ ಸಿದ್ಧಪ್ಪಾರಾಧ್ಯರ ಭಗವದ್ಗೀತಾ ವೀರಶೈವ ಭಾಷ್ಯವನ್ನೂ ಓದಿದ್ದೇನೆ. ಆಂಗ್ಲಾನುವಾದ ' ಶ್ರೀ ರೇಣುಕ ' ಗೀತೆಯನ್ನು ಪರಾಂಬರಿಸಿದ್ದೇನೆ. ಒಡನೊಡನೆ ನನ್ನ ಕೃತಿರಚನೆಯನ್ನು ಒರೆಹಚ್ಚಿ ನೋಡಿಕೊಂಡಿದ್ದೇನೆ-ಮುಗಿಸಿ ಸುಮಾರು ನಾಲ್ಕು ವರ್ಷಗಳಿಂದ.

"ಕಿರಿಯನಾಂ, ಹಿರಿಯರ್ಗೆ ಹಾಡುವೆನ್, ಕೇಳ್ವುದಾಶೀರ್ವಾದಂ! "—ಎಂದಿದ್ದಾರೆ ರಾಷ್ಟ್ರಕವಿ ಕುವೆಂಪುರವರು. ಅಂತೆಯೆ ನಾನು ಪ್ರಾಜ್ಞರ

ಮುಂದೆ ಹಾಡಿದ್ದೇನೆ. ಹಾಗೆ ಕೇಳುವ ಕೃಪೆಮಾಡಿದ್ದಾರೆ—ಜಗದ್ಗುರುಗಳು ಸಾಹಿತಿಗಳು, ಸಹೃದಯರು, ಸ್ನೇಹಿತರು, ಸದ್‌ಭಕ್ತರು.

ನನ್ನ ಕೃತಿಯನ್ನು ನಾನೇ ಕೇಳಿ ಆನಂದದಲ್ಲಿ ತೇಲುವಂತೆ ಮಾಡಿದ್ದಾರೆ, ಈ ಕೆಳಗಿನ ನನ್ನ ಗಮಕಕಲಾ ಪ್ರವೀಣರು—

(i) ಶ್ರೀ ಗುಡ್ಡದ ಬಸಪ್ಪ, ಉಪಾಧ್ಯಾಯರು, ಬೆಳಲಗೆರೆ

(ii) ವೇ|| ಶ್ರೀ ಎಂ. ಶಾಂತವೀರಯ್ಯ ಉ|| ಚಿರಡೋಣಿ

(iii) ವೇ|| ಎಂ. ವೀರಭದ್ರಯ್ಯ, ಹಿಂದಿ ಪಂಡಿತ್, ಜಿಲ್ಲಾ ಬೋರ್ಡ್ ಪ್ರೌಢಶಾಲೆ, ಕಾಪರಹಳ್ಳಿ.

(iv) ಶ್ರೀ ಟಿ. ಎನ್. ಚನ್ನಪ್ಪನವರು, ಬೆಂಗಳೂರು.

ಈ ಗ್ರಂಥ ಪ್ರಕಾಶನಕ್ಕೆ ನೂರು ರೂಪಾಯಿಗಳ ವಂತಿಗೆ ನೀಡಿದ ಶ್ರೀ ಕಿರವಾಡಿ ಷಣ್ಮುಖಪ್ಪನವರು, ವರ್ತಕರು, ದಾವಣಗೆರೆ ; ವೇ|| ಎಂ. ರಾಜಶೇಖರಯ್ಯನವರು, ಕಮರ್ಶಿಯಲ್ ಟ್ಯಾಕ್ಸ್ ಇನ್ಸ್‌ಪೆಕ್ಟರ್, ತುಮಕೂರು ಮತ್ತು ಐವತ್ತು ರೂಪಾಯಿ ವಂತಿಗೆ ನೀಡಿದ ಶ್ರೀ ಶರಣಪ್ಪ, ಸಹಕಾರಿ ಸಂಘದ ಕಾರ್ಯದರ್ಶಿ, ಮೊಳಕಾಲ್ಮುರು ; ಶ್ರೀ ವೀರಬಸಪ್ಪನವರು, ವರ್ತಕರು, ದಾವಣಗೆರೆ ; ವೇ|| ಡಿ. ಎಂ. ರುದ್ರಯ್ಯನವರು, ಲಾಯರ್, ಚಿತ್ರದುರ್ಗ ಮತ್ತು ವೇ|| ಹೆಚ್. ಎಂ. ತಿಪ್ಪೇಸ್ವಾಮಿ, ಲಾಯರ್, ಚಿತ್ರದುರ್ಗ ಇವರಿಗೆ ನಾನು ಕೃತಜ್ಞನಾಗಿದ್ದೇನೆ.

ಈ ಗ್ರಂಥವನ್ನು ಪ್ರಕಾಶಪಡಿಸಲು ಒಪ್ಪಿ ಮುಂದೆ ಬಂದ ಪ್ರಸಾದ ಪುಸ್ತಕ ಮಂದಿರದವರಿಗೂ, ಮುದ್ದಾಗಿ ಅಚ್ಚುಮಾಡಿಕೊಟ್ಟ ರಘುವೀರ ಪ್ರಿಂಟಿಂಗ್ ಪ್ರೆಸ್‌ನವರಿಗೂ, ಬ್ಲಾಕುಗಳನ್ನು ಪ್ರತಿಫಲಾಪೇಕ್ಷೆಯಿಲ್ಲದೆ ಕೊಟ್ಟ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್ಸಿನ ನಾಗನೂರು ಬೃಹನ್ಮಠಾಧ್ಯಕ್ಷ ವೇ|| ಮಹಾದೇವಯ್ಯನವರಿಗೂ, ಈ ಕಾವ್ಯವನ್ನು ಆಸಕ್ತಿಯಿಂದ ಓದಿ ಶುಭ ಸಂದೇಶ, ಮುನ್ನುಡಿ, ಅಭಿಪ್ರಾಯಗಳನ್ನು ಬರೆದು ಆಶೀರ್ವದಿಸಿದ ಪ್ರಾಜ್ಞರಿಗೂ, ಪೂಜ್ಯರಿಗೂ ವಿನಮ್ರನಾಗಿ ವಂದಿಸಿ, ಅವರ ಕೃಪೆಯು ಸದಾ ನನ್ನ ಮೇಲೆ ಏಕಾಂತಿಯಿಂದಿರುವಂತೆ ಪ್ರಾರ್ಥಿಸುತ್ತಿರುತ್ತೇನೆ.

ಇಂತೀ ಎಲ್ಲರವ,

‘ನಿಜಗುಣಸಿದ್ಧ’

# ಪ್ರಕಾಶಕೀಯ

ಹಲವು ವರ್ಷಗಳಿಂದ ಹಿಂದೀ ಗ್ರಂಥ ಪ್ರಕಾಶನ ಕಾರ್ಯದಲ್ಲಿ ನಿರತರಾಗಿದ್ದೇವೆ. ಶ್ರೀಯುತ ಕೆ. ವೆಂಕಟರಾಮಪ್ಪನವರ ಅವ್ಯಾಜ ಪ್ರೇಮವು ನಮ್ಮನ್ನು ಕನ್ನಡ ಸೇವೆಗೂ ತೊಡಗಿಸಿತು. ಈವರೆಗೆ 'ಕಾವ್ಯ ಮಂಥನ' ಮತ್ತು 'ಜೀವಂಧರ' ಎಂಬ ಎರಡು ಕನ್ನಡ ಗ್ರಂಥಗಳನ್ನು ಪ್ರಕಾಶಪಡಿಸಿದ್ದೇವೆ. ಶ್ರೀ 'ರೇಣುಕ ಗೀತೆ' ಮೂರನೆಯ ಪುಷ್ಪ. ನಮ್ಮ ತಂದೆ ಶ್ರೀ ಎಂ. ರಾಜೇಶ್ವರಯ್ಯ, ಹಿಂದಿ ರೀಡರ್, ಮಾನಸ ಗಂಗೋತ್ರಿ ಇವರ ಬಾಲ್ಯಸ್ನೇಹಿತರೂ, ನಮ್ಮ ಆತ್ಮೀಯ ಬಂಧುಗಳೂ ಆದ ವೇ|| ಎಸ್. ಎಂ. ಸಿದ್ಧಯ್ಯ, ಬಿ.ಎ. (ಆನರ್ಸ್), ಶಿವಮೊಗ್ಗ ಜಿಲ್ಲಾ, ಚನ್ನಗಿರಿ ತಾಲ್ಲೂಕು, ಬಸವಾಪಟ್ಟಣದ ಹೋಬಳಿ, ಚಿರಡೋಣಿ ಗ್ರಾಮದ ಚರಂತದೇವರು (ಶಾಂತಿಸಾಗರ ಮಠ) ಇವರು ತಮ್ಮ ಸತತಾಭ್ಯಾಸ ಪುಣ್ಯ ಫಲ ಸ್ವರೂಪವಾದ 'ಶ್ರೀ ರೇಣುಕ ಗೀತೆ' ಎಂಬೀ ಶಿವಾದ್ವೈತ ಧರ್ಮ ಗ್ರಂಥ ಪ್ರಕಾಶನವನ್ನು ನಮಗೆ ಒಪ್ಪಿಸಿದರು. ಖರ್ಚು ಮತ್ತು ಲಾಭಗಳಲ್ಲಿ ಸಮಪಾಲು—ಎಂಬ ನಿಯಮಕ್ಕೊಳಪಟ್ಟು ಈ ಗ್ರಂಥ ಪ್ರಕಾಶನಕ್ಕೆ ಒಪ್ಪಿಕೊಂಡೆವು. ಕನ್ನಡ ಸಾಹಿತ್ಯ ಸೇವೆ, ಧರ್ಮಸೇವೆಗಳೆರಡನ್ನೂ ಏಕ ಕಾಲಕ್ಕೆ ಮಾಡುವ ಸದವಕಾಶ ನಮ್ಮದಾಯಿತು.

ಸನಾತನ ಧರ್ಮಬೋಧೆಯನ್ನೀಯುವ ಈ ರಸವತ್ಕೃತಿಯನ್ನು ಕನ್ನಡ ಸಾಹಿತ್ಯಾಭಿಮಾನಿಗಳೂ, ಧರ್ಮಾಭಿಮಾನಿಗಳೂ ಸಾದರದಿಂದ ಬರಮಾಡಿಕೊಂಡು ಪ್ರೋತ್ಸಾಹಿಸುತ್ತೀರೆಂಗಿ ನಂಬಿದ್ದೇವೆ.

ಮೈಸೂರು, ಎಂ. ಆರ್. ಪ್ರಸಾದ್,

೨೪—೧—೧೯೭೩ ಪ್ರಸಾದ ಪುಸ್ತಕ ಮಂದಿರ.

# ಸಹೃದಯರ ಅಭಿಪ್ರಾಯಗಳು

1 "'ಶ್ರೀ ರೇಣುಕ ಗೀತೆ'ಯ ಭಾಷೆ ಬಹು ಮುದ್ದಾಗಿದೆ; ಸರಣಿ ಲಲಿತವಾಗಿದೆ. ಕಾವ್ಯದ ಓಟ ಗಂಗಾಧಾರೆಯಂತೆ ನಿರರ್ಗಳವಾಗಿ ಸಾಗಿದೆ"

—ಶ್ರೀ ಜಗದ್ಗುರು ವಾಗೀಶ ಪಂಡಿತಾರಾಧ್ಯ
ಶಿವಾಚಾರ್ಯ ಮಹಾಸ್ವಾಮಿಗಳು, ಶ್ರೀಶೈಲ.

2 "ವಾಚಕರು ಈ ಗ್ರಂಥವನ್ನು ಕೈಗೆತ್ತಿಕೊಂಡರೆ ವಿಷಯದೊಡನೆ ಕವಿತೆಯ ರಸವನ್ನೂ ಆಸ್ವಾದಿಸುತ್ತಾ ಮುನ್ನಡೆಯುತ್ತಾರೆ"

—ಶ್ರೀ ನಿ. ಪ್ರ. ಶಿವಕುಮಾರಸ್ವಾಮಿಗಳು,
ಸರ್ಪಭೂಷಣ ಶಿವಯೋಗೀಶ್ವರ ಮಠ, ಬೆಂಗಳೂರು

3 "ಗ್ರಂಥಕರ್ತರು ಬಹಳ ಶ್ರಮವಹಿಸಿ ಅನೇಕ ಪಂಡಿತರ ಸಲಹೆಗಳನ್ನು ಸ್ವೀಕರಿಸಿ ಶುದ್ಧೀಕರಿಸಿದ್ದಾರಾದ್ದರಿಂದ 'ಶ್ರೀ ರೇಣುಕ ಗೀತೆ'ಯು ಪ್ರತಿಯೊಬ್ಬನಿಗೂ ಪಾರಾಯಣಯೋಗ್ಯವಾಗಿದೆ."

—ಶ್ರೀ ನಿ. ಪ್ರ. ಕರಿಬಸವಸ್ವಾಮಿಗಳು,
ತುಮಕೂರು.

4 "ಭಾಮಿನಿ ಷಟ್ಪದಿಯಲ್ಲಿ ರಚಿಸಿರುವ 'ರೇಣುಕ ಗೀತೆ'ಯನ್ನು ನಾನು ಆಸಕ್ತಿಯಿಂದ ಅವಲೋಕಿಸಿದ್ದೇನೆ. 'ಸಿದ್ಧಾಂತ ಶಿಖಾಮಣಿ'ಯ ತತ್ತ್ವ ಹೃದಯವನ್ನು ಈ ಕನ್ನಡ ಕೃತಿಯಲ್ಲಿ ಮನೋಜ್ಞವಾಗಿ ನಿರೂಪಿಸಿರುತ್ತಾರೆ."

—ಶ್ರೀ ವಿದ್ಯಾ ವಿಭೂಷಣ ಓ. ಎನ್. ಲಿಂಗಣ್ಣಯ್ಯ,
ಬಿ.ಎ. (ಆನರ್ಸ್)
ನಿವೃತ್ತ ಅಸಿಸ್ಟೆಂಟ್ ಕಮಿಷನರ್, ಮೈಸೂರು.

5 " ಇದು ಇವರ ಅನುವಾದ ಕೃತಿಯೆನಿಸದೆ ಸ್ವತಂತ್ರ ಕೃತಿಯೆನಿಸು ವಷ್ಟು ಶಕ್ತಿ ಸಲ್ಲಕ್ಷಣಗಳಿಂದ ಕೂಡಿದೆ. ಪದ್ಯ ಪದ್ಯಗಳಲ್ಲಿ ಸರಳತೆ ಸುಭಗತೆಗಳು ನೆಲಸಿವೆ. ಶುಚಿ ರುಚಿಗಳ, ಶ್ರದ್ಧೆ-ನಿಷ್ಠೆಗಳ, ಉತ್ತಮ ಭವಿಷ್ಯದ ಪ್ರತೀಕ ಇವರ ಈ ಸತ್ಕೃತಿ ! "

—ಆಚಾರ್ಯ ಸಿಂಹಾಸನಾಧೀಶ್ವರ ಶ್ರೀ ಜ.ಚ.ನಿ.
ಶ್ರೀಶೈಲ ಸಂಸ್ಥಾನ ಮಠ, ಗೂಳೂರು

6 " ' ಶ್ರೀ ರೇಣುಕ ಗೀತೆ 'ಯನ್ನು ಓದಲಾರಂಭಿಸಿದರೆ ಕಾವ್ಯರಸ ಮಂದಾಕಿನಿಯಲ್ಲಿ ಮೀಯುತ್ತೇವೆ ; ಭಕ್ತಿಭಾವದಿಂದ ಪುಲಕಿತರಾಗು ತ್ತೇವೆ ; ಪ್ರಕೃತಿ ಸೌಂದರ್ಯದ ಮಡಿಲಲ್ಲಿ ನಲಿದಾಡುತ್ತೇವೆ ; ಪುಣ್ಯಾಶ್ರಮದಲ್ಲಿ ವಿರಮಿಸುತ್ತೇವೆ ; ಶಾಸ್ತ್ರಮಂಥನ ಮಾಡುತ್ತೇವೆ ; ಶಿವಾದ್ವೈತ ತತ್ತ್ವಸುಧೆಯನ್ನು ಸವಿಯುತ್ತೇವೆ; ಲಿಂಗಾನಂದ ತುಂದಿಲ ರಾಗುತ್ತೇವೆ.

—ಅರಮನೆ ಜಪದಕಟ್ಟೆ ಮಠದ ಸ್ಥಿರಪಟ್ಟಾಧ್ಯಕ್ಷ, ಶಕ್ತಿವಿಶಿಷ್ಟಾದ್ವೈತ
ವಿದ್ವಾನ್ ಶಿವಪ್ರಕಾಶ ಶಿವಾಚಾರ್ಯ ಸ್ವಾಮಿಗಳು
ಮೈಸೂರು.

7 ' ರೇಣುಕ ಗೀತೆ 'ಯಲ್ಲಿ ವೇದ, ಆಗಮ, ಉಪನಿಷತ್ತುಗಳ ವಾಕ್ಯ ಗಳನ್ನು ಶಿವಶರಣರ ವಚನಗಳನ್ನು ಉದಾಹರಿಸುವುದು ' ಶಿವಾದ್ವೈತ ' ದಿವ್ಯಮೂರ್ತಿಯ ಭಾವಚಿತ್ರಕ್ಕೆ ಕೋದ ರನ್ನದ ಚೌಕಟ್ಟಿನಂತಾ ಗಿದೆ. ನಿರ್ಗುಣಲಿಂಗ, ಸಾಕಾರ ಗುರುರೂಪದಿಂದವತರಿಸಿ ಲೀಲೆ ಮೆರೆದು ಲೋಕೋದ್ಧಾರವೆಸಗಿ ನಿರವಯಲಾಗುವ ಪರಿಪೂರ್ಣ ದರ್ಶನ ಮಾಡಿಸಲು ' ಸಿದ್ಧಾಂತ ಶಿಖಾಮಣಿ '—ಎಂಬ ಸಂಸ್ಕೃತದ ಸತ್ಕೃತಿ ಯನ್ನು ಕನ್ನಡ ಹಾಡುಗಬ್ಬದಲ್ಲಿ ಹಾಡಿದ ಕೀರ್ತಿ ' ನಿಜಗುಣಸಿದ್ಧ ' ನದು. ಕನ್ನಡಿಗರಿಗಿದೊಂದು ದಿವ್ಯವಾದ ಉಡುಗೊರೆ. "

ಮೋ. ರಾಜೇಶ್ವರಯ್ಯ, ಎಂ.ಎ.,ಎಲ್‌ಎಲ್.ಬಿ.,
ಹಿಂದಿ ರೀಡರ್, ಮಾನಸಗಂಗೋತ್ರಿ, ಮೈಸೂರು.

8 ಈ 'ರೇಣುಕ ಗೀತೆ'ಯು ವೀರಶೈವರ ಪಾರಾಯಣಕ್ಕೂ ಪ್ರವಚನಕ್ಕೂ ಅನುಕೂಲವಾಗಿದ್ದು ಕನ್ನಡಿಗರಿಗೆ ಸುಲಭವಾಗಿ ಅರ್ಥವಾಗುವಂತಿದೆ. ವೀರಶೈವರ ತತ್ತ್ವ ಸಿದ್ಧಾಂತವು ಅವರ ಜನ್ಮ ಭಾಷೆಯಲ್ಲೇ ರಚಿತವಾಗಿ, ಸಾಧಾರಣ ಓದು ಬಲ್ಲವರಿಗೂ ಅರ್ಥವಾಗುವಂತಿರುವುದರಿಂದ ಶೀಘ್ರವಾಗಿ ಕರ್ನಾಟಕದಲ್ಲಿ ಪ್ರಸರಿಸಿ ಗ್ರಂಥಕರ್ತರಿಗೆ ತೃಪ್ತಿಯನ್ನುಂಟುಮಾಡಲಿ.

—ನಾ. ಬ್ರ. ಮಹಾದೇವಯ್ಯ,

ಸಂಪಾದಕರು, "ಪಂಚಾಚಾರ್ಯ ಪ್ರಭಾ", ಮೈಸೂರು.

# ವಿಷಯಾನುಕ್ರಮಣಿಕೆ


1. ಮುಖಪುಟ
2. ಭಾವಚಿತ್ರ
   ರೇಣುಕಾಗಸ್ತ್ಯ ಸಂವಾದ
3. ಶಿವಾರ್ಪಣೆ—(ಭಾವಗೀತೆ)
4. ಭಾವಚಿತ್ರ
   "ನಿಜಗುಣಸಿದ್ಧ" ಕವಿ
5. ಶುಭ ಸಂದೇಶಗಳು :
   i. ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು, ಶ್ರೀಶೈಲ .... vii
   ii. ಶ್ರೀಮಾನ್ ನಿರಂಜನ ಪ್ರಣವಸ್ವರೂಪಿ ಶಿವಕುಮಾರ ಸ್ವಾಮಿಗಳು, ಸರ್ಪಭೂಷಣ ಶಿವಯೋಗೀಶ್ವರ ಮಠ, ಬೆಂಗಳೂರು .... ix
6. ಮುನ್ನುಡಿ .... xi
7. ಗ್ರಂಥ ಪರಿಚಯ .... xvii
8. ನಿವೇದನೆ .... xxi
9. ಪ್ರಕಾಶಕೀಯ .... xxvii
10. ಸಹೃದಯರ ಅಭಿಪ್ರಾಯಗಳು .... xxviii
11. ವಿಷಯಸೂಚಿ
12. ಪೀಠಿಕಾ ಸಂಧಿ
    ಕನ್ನಡಿಸಿದ ಕವಿ ಕಾವ್ಯ ವಿಚಾರ .... 1
13. ಒಂದನೆಯ ಸಂಧಿ
    ಶಿವಯೋಗಿ ಶಿವಾಚಾರ್ಯರ ವಂಶಾವಳಿ ವರ್ಣನೆ .... 9

14. ಎರಡನೆಯ ಸಂಧಿ
ಜಗತ್‌ಸೃಷ್ಟಿ .... 17

15. ಮೂರನೆಯ ಸಂಧಿ
ಕೈಲಾಸ ಮತ್ತು ಶಿವಸೊಡ್ಡೋಲಗದ ವರ್ಣನೆ .... 25

16. ಭಾವಚಿತ್ರ
ಲಿಂಗೋದ್ಭವ ಮೂರ್ತಿ .... 40

17. ನಾಲ್ಕನೆಯ ಸಂಧಿ
ರೇಣುಕಾಗಸ್ತ್ಯ ಸಮಾಗಮ .... 40

18. ಐದನೆಯ ಸಂಧಿ
ತತ್ತ್ವೋಪದೇಶ ನಿರೂಪಣ .... 52

19. ಆರನೆಯ ಸಂಧಿ
ಗುರುಕಾರುಣ್ಯ ಮತ್ತು ಲಿಂಗಧಾರಣಸ್ಥಲ ನಿರೂಪಣ .... 65

20 ಏಳನೆಯ ಸಂಧಿ
ಭಸ್ಮ ಮತ್ತು ರುದ್ರಾಕ್ಷಧಾರಣಸ್ಥಲ ನಿರೂಪಣ ... 78

21. ಎಂಟನೆಯ ಸಂಧಿ
ಪಂಚಾಕ್ಷರ ಜಪಸ್ಥಲ ನಿರೂಪಣ .... 91

22. ಒಂಭತ್ತನೆಯ ಸಂಧಿ
ಭಕ್ತಿಮಾರ್ಗ ಕ್ರಿಯಾಸ್ಥಲ ನಿರೂಪಣ .... 101

23. ಹತ್ತನೆಯ ಸಂಧಿ
ಮಹೇಶ್ವರ ಸ್ಥಲ ನಿರೂಪಣ .... 118

24. ಹನ್ನೊಂದನೆಯ ಸಂಧಿ
ಪ್ರಸಾದಿ ಸ್ಥಲ ನಿರೂಪಣೆ .... 131

25. ಹನ್ನೆರಡನೆಯ ಸಂಧಿ
ಪ್ರಾಣಲಿಂಗಿ ಸ್ಥಲ ನಿರೂಪಣೆ ... 146

26. ಹದಿಮೂರನೆಯ ಸಂಧಿ
ಶರಣ ಸ್ಥಲ ನಿರೂಪಣೆ .... 157

27. ಹದಿನಾಲ್ಕನೆಯ ಸಂಧಿ
ಐಕ್ಯ ಸ್ಥಲ ನಿರೂಪಣೆ .... 165

28. ಪ್ರಾರ್ಥನೆ .... 174

29. ಹದಿನೈದನೆಯ ಸಂಧಿ
ಭಾಗ ೨—ಲಿಂಗಸ್ಥಲಾನಿ – ಭಕ್ತಸ್ಥಲ—ದೀಕ್ಷಾಗುರುಸ್ಥಲ ದಿಂದ ಪರಸ್ಥಲದೊರೆಗಿನ ಒಂಭತ್ತು ಸ್ಥಲ ನಿರೂಪಣೆ .... 175

30. ಹದಿನಾರನೆಯ ಸಂಧಿ
ಮಹೇಶ್ವರ ಸ್ಥಲ ನಿರೂಪಣೆ—ಕ್ರಿಯಾಗಮ ಸ್ಥಲದಿಂದ ಜ್ಞಾನಾಚಾರ ಸ್ಥಲದೊರೆಗಿನ ಒಂಭತ್ತು ಸ್ಥಲಗಳ ನಿರೂಪಣೆ .... 190

31. ಹದಿನೇಳನೆಯ ಸಂಧಿ
ಪ್ರಾಣಲಿಂಗಿ ಸ್ಥಲ ನಿರೂಪಣೆ–ಕಾಯಾನುಗ್ರಹ ಸ್ಥಲದಿಂದ ಸೇವ್ಯ ಸ್ಥಲದೊರೆಗಿನ ಒಂಭತ್ತು ಸ್ಥಲ ನಿರೂಪಣೆ ... 219

32. ಹದಿನೆಂಟನೆಯ ಸಂಧಿ
ಪ್ರಾಣಲಿಂಗಿ ಸ್ಥಲ ನಿರೂಪಣೆ—ಆತ್ಮಸ್ಥಲದಿಂದ ಸೇವ್ಯ ಪ್ರಸಾದಿ ಸ್ಥಲದೊರೆಗಿನ ಒಂಭತ್ತು ಸ್ಥಲ ನಿರೂಪಣೆ ... 219

33. ಹತ್ತೊಂಭತ್ತನೆಯ ಸಂಧಿ
ಲಿಂಗಶರಣ ಸ್ಥಲ ನಿರೂಪಣೆ – ದೀಕ್ಷಾಪಾದೋದಕ ಸ್ಥಲ ದಿಂದ ಜ್ಞಾನ ಪ್ರಕಾಶನ ಸ್ಥಲದೊರೆಗಿನ ಹನ್ನೆರಡು ಸ್ಥಲ ನಿರೂಪಣೆ .... 231

34. ಇಪ್ಪತ್ತನೆಯ ಸಂಧಿ
ಲಿಂಗೈಕ್ಯ ಸ್ಥಲ ನಿರೂಪಣೆ – ಸ್ವೀಕೃತ ಪ್ರಸಾದ ಸ್ಥಲದಿಂದ ಭಾಜನ ಸ್ಥಲದೊರೆಗಿನ ಐದು ಸ್ಥಲಗಳ ವಿವರಣೆ ..... 247

35. ಇಪ್ಪತ್ತೊಂದನೆಯ ಸಂಧಿ

ವಿಭೀಷಣಾಭೀಷ್ಟ ವರಪ್ರದಾನಂ - ಜಗದ್ಗುರು ರೇಣುಕರು ವಿಭೀಷಣನಿಗೆ ಅನುಗ್ರಹಿಸಿ ಮೂರು ಕೋಟಿ ಶಿವಲಿಂಗ ಸ್ಥಾಪಿಸುವುದು - ಸೋಮೇಶ್ವರ ಲಿಂಗದಲ್ಲಡಗುವುದು - ಗ್ರಂಥಪಾರಾಯಣದ ಫಲಂಗಳ ವಿವರಣೆ ... 268

36. ಭಾವಚಿತ್ರ—ರೇಣುಕರ ಲಿಂಗೈಕ್ಯ

37. ತಿದ್ದುಪಡಿ



| | | | | | |
|---|---|---|---|---|---|
| ಸಂಸಾರ್ ಚಕ್ರ | ಸಂಸರ ಚಕ್ರ | 72 | 29 | 3 | |
| ಮಹಾಲಿಗ | ಮಹಲಿಂಗ | 74 | 37 | 6 | |
| ಶುದ್ಧಿಮಾಡ್ವಾ | ಶುದ್ಧಿಮಾಳ್ಪಾ | 77 | 35 | 4 | |
| — | 4) ಪ್ರಾಣಲಿಂಗ (ಶಾಂತಕಲಾ) | 75 | 38 | 4 | |
| — | 5) ಶರಣ (ಶಾಂತಾತೀತಕಲಾ) | 75 | 38 | 4 | |
| ಐಕ್ಯ (ಶಾಂತೋತ್ತರಕಲಾ | 6) ಐಕ್ಯ (ಶಾಂತೋತ್ತಮ ಕಲಾ) | 75 | 38 | 4 | |
| ಗೈಯ್ಯುವ | ಗೈಯುವ | 75 | 40 | 4 | |
| ಶದ್ಧಲಿಂಗಂ | ಶುದ್ಧಲಿಂಗಂ | 76 | 43 | 2 | |
| ಜಲಮಿತಿಭಸ್ಮ ,—, ವ್ಯೋಮೇತಿ | ಜಲಮಿತಿಭಸ್ಮ , ಸ್ಥಲಮಿತಿಭಸ್ಮ , ವ್ಯೋ | 84 | 22 | ಶ್ಲೋಕ | ಅಡಿಪಟ್ಟಿ |
| (೪) ರುದ್ರಾಕ್ಷಿಧಾರಣಸ್ಥಲಂ | (೭) ರುದ್ರಾಕ್ಷಿಧಾರಣಸ್ಥಲಂ | 86 | .... | .... | ಶಿರೋನಾಮೆ |
| (—) ಪಂಚಾಕ್ಷರ ಜಲಸ್ಥಲ ನಿರೂಪಣಂ | (೮) ಪಂಚಾಕ್ಷರ ಜಪಸ್ಥಲ ನಿರೂಪಣಂ | 91 | .... | .... | ಶಿರೋನಾಮೆ |
| ಮಹಂತ | ಮಹಾಂತ | 93 | 8 | 5 | |
| ಪರಮನೇಕನೇಕನ್ನದ್ವಿ | ಪರಮನೇಕನ್ನದ್ವಿ | 94 | 12 | 3 | |
| ಸಛಲ | ಸಫಲ | 97 | 23 | 5 | |
| ಕರುಣಿಸುತಿಹ | ಕರುಣಿಸುತ್ತಿಹ | 110 | 34 | 5 | |
| ಚರಲಿಂಗವು | ಚರಲಿಂಗ | 111 | 40 | 2 | |

| ತಪ್ಪು | ಸರಿ | ಪುಟ ಸಂಖ್ಯೆ | ಪದ್ಯ | ಸಾಲು | |
|---|---|---|---|---|---|
| ಲೋಕಾಂತರ | ಲೋಕಾಂತರದ | 113 | 46 | 5 | |
| ಶೋಪಾಧಿಕಮದಾದಾನ | ಸೋಪಾಧಿಕಮವಾದಾನ | 114 | 52 | 3 | |
| ಣಂಬಿದೆ | ನಂಬಿದ | 119 | 6 | 3 | |
| — | ಯಾವ ನಿಷ್ಠೆಗೆ ಶಿವ ಜಗನ್ಮಯ | 119 | 4 | 4 | |
| ಯಾವ ನಿಷ್ಠೆಗೆ | ನಾವ ದೃಷ್ಟಿಗೆ | 119 | 4 | 5 | |
| ತೊರೆದುಹೊದರು | ತೊರೆದು ಪೋದರು | 121 | 12 | 4 | |
| ಶಿವತಾನಾಗನೆಂದೆಂದು | ಶಿವತಾನಾಗದೆಂದೆಂದು | 125 | 29 | 3 | |
| ಆಕಾಶ ಆತ್ಮ | ಆಕಾಶ, | 126 | 31 | 1 | ಅಡಿಪಟ್ಟಿ |
| ಜಂಗಮ ಭಕ್ತಮಹಾತ್ಮ್ಯ ಸ್ಥಲಂ | ಜಂಗಮ ಮಹಾತ್ಮ್ಯೆ | 131 | 2 | – | ಅಡಿಪಟ್ಟಿ |
| ಶಮನವಾಗ್ಸುವು | ಶಮನಗೊಳ್ಳುತ | 139 | 31 | 5 | |
| ಬೀಳ್ವುದು | ಬೀಳುತ | ,, | 32 | 4 | |
| ಮಾಗ್ವುವು | ವಾಗುತ | ,, | ,, | 5 | |
| ವ್ಯರ್ಥ ಮಾಗ್ವುವು | ವ್ಯರ್ಥಮದರಿಂ | 140 | 35 | 2 | |
| ವಿಧಿತ ಮಾಗ್ವುದು | ವಿದಿತ ಮಾಗದೆ | ,, | 36 | 3 | |
| ಸದ್ಗುರು | ಕಾವಸದ್ಗುರು | 143 | 49 | 3 | |

| | | | | | |
|---|---|---|---|---|---|
| ಲಿಂಗಿಯ ದಾಗ್ವ | ಲಿಂಗಿಯನೆಂಬ | 146 | 1 | 5 | |
| ಶಿವಯೋಗಲಿಂಗ ಸ್ಥಲಂ | ಶಿವಯೋಗ ಲಿಂಗಸ್ಥಲಂ, ಲಿಂಗ ನಿಜಸ್ಥಲಂ,.... | 147 | 5 | 2 | ಅಡಿಪಟ್ಟಿ |
| ಕಮೆಯು | ಕ್ಷಮೆಯು | 149 | 14 | 1 | |
| ಮಾಹೇಶ್ವರ | ಪರಮೇಶ್ವರ | 153 | 27 | 3, 6 | |
| ಅಂಗ | ಲಿಂಗ | 154 | 51 | 4 | |
| ಹರನ ಶರಣರ | ಹರನು ಶರಣರ | 163 | 24 | 4 | |
| ಸಹೆ ಭಾಜನ | ಸಹ ಭಾಜನ | 165 | 3 | 3 | |
| ಸುಟ್ಟದೆ | ಸುಟ್ಟರೆ | 168 | 16 | 2 | |
| ಭೇದಪಿದೆಲ್ಲ | ಭೇದವಿದೆಲ್ಲ | 171 | 25 | 6 | |
| ಜ್ಞಾನ ಜುವುವಿದೆಂತ್ತಿ | ಜ್ಞಾನ ಜುಹುವಿಂದೆತ್ತಿ | 172 | 27 | 5 | |
| ಭೇದಾ ಭೇಧೆ | ಭೇದಾ ಭೇದ | 179 | 14 | 4 | |
| ಥೇದವಿಂದಿದಕೆ | ಭೇದವೆಂದಿದಕೆ | 181 | 21 | 6 | |
| ದೇವ | ದೀವ | 184 | 34 | 5 | |
| ಲಿಂಗ ಪೂಜೆ ವಿನಃ | ಲಿಂಗಪೂಜಿಸದೆ | 191 | 4 | 6 | |
| (೧೧) ಕ್ರಿಯಾಗಮಸ್ಥಲಂ | (೧೦) ಕ್ರಿಯಾ.... | ,, | – | – | ಶೀರ್ಷಿಕೆ |
| ಥರ್ಮವಿಹಿತವನಿಷ್ಠೆಯಾದರು | ಧರ್ಮ ವಿಹಿತವನಿಷ್ಟೆಯಾದರು | 199 | 38 | 2 | |

ಜ

| ತಪ್ಪು | ಸಂ | ಪುಟ ಸಂಖ್ಯೆ | ಪದ್ಯ | ಸಾಲು |
|---|---|---|---|---|
| ಲಕ್ಷ್ಯೆಯಾಗ್ವುದು | ಲಕ್ಷ್ಯೆಯಾಗ್ವುದು | 199 | 38 | 5 |
| ಸತ್ಯನೋತ್ತ್ರಮ | ಸತ್ಯನುತ್ತ್ರಮ | 200 | 41 | 2 |
| ಮತ್ತ್ರ ಸಂಗವು | ಮತ್ತ್ರಸಂಗವು | 201 | 41 | 3 |
| ಭೇಧಗಳು | ಭೇದಗಳು | 204 | 2 | 2 |
| ಮರೆಯಲಡಗಿದನು | ಮರೆಯಲಡಗಿಹನ | 206 | 9 | 3 |
| ಹೊರಗೆನ್ನುದೆಲ್ಲುಂ | ಹೊರಗೆನ್ನದೆಲ್ಲುಂ | ,, | ,, | 6 |
| ಪ್ರಾಣವೃತ್ತಿಯ | ಪ್ರಾಣವೃತ್ತಿಯು | 208 | 16 | 1 |
| ಪವನ ದಾಟುವ | ಪವನದಾಟುವ | ,, | 17 | 5 |
| ನಿವೀದಿಸು | ನಿವೇದಿಸು | 210 | 23 | 6 |
| ವೃತ್ತಿಗಳೆಲ್ಲವನನುಸರಿಸಿ | ವೃತ್ತಿಗಳೆಲ್ಲವದನನುಸರಿಸಿ | ,, | 25 | 3 |
| ನುಳಿಸದೇ ನನ್ನವನಿ | ನುಳಿಸದೇನನ್ನವನಿ | 211 | 27 | 5 |
| ನಡೆಯು ನಡಿಯಿಂ | ನಡೆಯು ನುಡಿಯಿಂ | 213 | 37 | 6 |
| ಗುರುವನಿಂದ | ಗುರುವರನಿಂದ | 214 | 40 | 4 |
| ಭಾವದೆ | ಭಾವನೆ | 215 | 45 | 4 |
| ಚಿನ್ಮಯ | ಚಿನ್ಮಯ | 217 | 51 | 4 |

# ಪರಿಶೀಲಿಸಿದ ಗ್ರಂಥಗಳು

೧. ಸಿದ್ಧಾಂತ ಶಿಖಾಮಣಿ (ಕಾಶೀನಾಥ ಶಾಸ್ತ್ರಿ, ಕನ್ನಡ ಭಾವಾನುವಾದ)
,, (ಕಂಬಸವ ಶಾಸ್ತ್ರಿ, ,, )
೨. ಷಟ್‌ಸ್ಥಲ ಸಿದ್ಧಾಂತ ವಚನಗಳು.
೩. ವಚನೋಪನಿಷತ್ (ಶ್ರೀ ಟಿ. ಎನ್. ಮಲ್ಲಪ್ಪ)
೪. ನಾಸದೀಯ ಸೂಕ್ತ ( ,, )
೫. ಮಣಿಕಾಂತಿ (ಶ್ರೀ ಸಿ. ಜಿ. ಜಿ.)
೬. ಮಣಿಮುಕುರ ( ,, )
೭. ಜೀವನ ಸಿದ್ಧಾಂತ ( ,, )
೮. ವಚನ ಧರ್ಮಸಾರ (ಎಂ. ಆರ್. ಶ್ರೀ.)
೯. ಶ್ರೀಕರ ಭಾಷ್ಯ (ಶ್ರೀಪತಿ ಪಂಡಿತಾರಾಧ್ಯ)
೧೦. ಭಗವದ್ಗೀತ (ಗಾಂಧೀಜಿ)
೧೧. ,, (ತಿಲಕ್)
೧೨. ,, (ವಿನೋಬಾ ಭಾವೆ)

ಓಂ

ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು

# ಪೀಠಿಕಾ ಸಂಧಿ



## ಕನ್ನಡದ ಕವಿಕಾವ್ಯ ನಿರೂಪಣಂ

ಸೂಚನೆ :—ಸಿದ್ಧ ನಿಜಗುಣ ಕವಿಯು ಗುರುಕೃಪೆ
ಬಿದ್ಧಸೂತ್ರದಿ ಬರೆದ ರೇಣುಕ
ಸಿದ್ಧ ಜಗದಾಚಾರ್ಯ ಬೋಧಾಮೃತವ ಭಾಮಿನಿಯೊಳ್ ॥

ಪರಮ ಗಂಗಾಭರಣ ಜೂಟಿಯೆ
ಕರುಣ ಕಿರಣದ ಚಂದ್ರಪೌಳಿಯೆ
ಗಿರಿಯ ಸುತೆಯನು ವಾಮಭಾಗದಿ ಹೊಂದಿ ಶೋಭಿಪನೇ ।
ನಿರುತ ವರದಾಭಯನೆ ಶಂಕರ
ಶರಣ ವಂದಿತ ದಿವ್ಯ ಚರಣಂ
ಶರಣು ಓಂ ಶಿವ ಸತ್ಯ ಸುಂದರಮೂರ್ತಿ ಮಾಹೇಶ ॥ ೧ ॥

ಶರಣು ಪರಶಿವ ಸಾಂಬಮೂರ್ತಿಯೆ
ಸರುವ ಕರ್ತನಕರ್ತ ಶಾಂತನೆ
ಶರಣರಾನಂದಾತ್ಮ ರೂಪನೆ ರೂಪವಿರಹಿತನೇ ।
ಶರಣು ನಿರ್ಗುಣ ನಿರುಪಮಾಧಿಕ
ವಿರತಲೀಲೋಲ್ಲಾಸ ನಿತ್ಯನೆ
ಪರಮ ಮಂಗಳಮಯನೆ ಶ್ರೀ ಗಿರಿ ಮಲ್ಲಿಕಾರ್ಜುನನೇ ॥ ೨ ॥

ಪರಮ ಮಂಗಳೆಯಾದಿ ಮಾತೆಯೆ
ವರದಶಂಕರನಂಕ ಶೋಭೆಯೆ
ಶರಣು ವಿಶ್ವೇಶ್ವರನ ಶಕ್ತಿಯೆ ಶ್ಯಾಮರೂಪಿಣಿಯೇ !
ಶರಣು ಗೌರಿಯೆ ಗಣಪ ವಂದ್ಯೆಯೆ
ನರಸುರಾಸುರ ನಮಿತನತಿಬಲ
ವರ ಕುಮಾರಸ್ವಾಮಿ ಜನನಿಯೆ ಲೋಕ ಪಾಲಿನಿಯೇ ॥ ೩ ॥

ಪರಮ ಕರುಣಾಕರನ ವರ ಶಂ
ಕರನ ನುತಿರತೆ ಮಲ್ಲಿಕಾರ್ಜುನ
ನರಸಿ ಗಿರಿಸುತೆ ಶರಣು ಶಿವಗಣ ವಂದ್ಯೆ ಭ್ರಮರಾಂಬೆ ।
ತರಳ ನಿಜಗುಣ ಸಿದ್ಧ ಹೃದಯದೊ
ಳರಿಯೆ ರೇಣುಕ ಗೀತೆಯೋದಿಸಿ
ಪರಮ ಶಿವಯೋಗವನು ಕರುಣಿಸು ಶರಣ ಸಂಕುಲಕೆ ॥ ೪ ॥

ಪರಮ ಕರುಣಾಮಾತೆ ಪಾರ್ವತಿ
ಹರನ ಚರಣಾಮೃತದೊಳತಿ ಸುಖಿ
ವಿರತ ಮುನಿಜನ ವೃಂದವಂದಿತೆ ಶರಣು ಶಂಕರಿಯೆ ।
ವರ ನಿರಂಜನ ನಿರ್ಗುಣ ಪ್ರಭು
ಗುರು ಗಣೇಂದ್ರನ ತತ್ತ್ವ ಸುಧೆಯ
ನ್ನೆರದು ಶಿವಭಕ್ತರನು ಕರುಣಿಸಿ ಹರಸು ಜಗದಂಬೆ ॥ ೫ ॥

ಸಿದ್ಧ ರೇಣುಕ ದಾರುಕಾರ್ಯರು
ಶುದ್ಧರೇಕೋರಾಮ ಗುರುಗಳು
ಸಿದ್ಧ ಪಂಡಿತಮೇಣು ವಿಶ್ವಾರಾಧ್ಯ ಗುರುವರರು
ಬುದ್ಧಿ ವಿದ್ಯಾಜ್ಞಾನ ಸಿದ್ಧಿಯ
ಶುದ್ಧ ಭಕ್ತಿಯ ಭುಕ್ತಿ ಮುಕ್ತಿಯ
ಸಿದ್ಧ ನಿಜಗುಣಗಿತ್ತು ರಕ್ಷಿಸಲೆರಗಿ ಬೇಡುವೆನು ॥ ೬ ॥

ಯಾರ ಕೃಪೆತಾ ಮೂಕ ತರ್ಕದ
ಲಾರು ಗೆಲ್ಲದ ಮಾತುಗಾರನ
ತೀರ ಕುಂಟನ ಗಿರಿಯ ಶಿಖರವ ಮೆಟ್ಟಿ ಮೆರೆವಂಥ ।
ವೀರನಾಗಿಯೆ ಮಾಡಬಲ್ಲದೊ
ಧೀರ ಜಗದಾಚಾರ್ಯ ರೇಣುಕ
ವೀರಶೈವವ ಜಗದಿ ಸಾರಿದ ಗುರುವೆ ! ಕೃಪೆದೋರೈ ॥ ೭ ॥

ಆತ್ಮ ವಿಚಾರ—

ಚರದ ಪಟ್ಟವು ಶಾಂತಸಾಗರ
ಚಿರದ ಪಟ್ಟವು ಹಿರಿಯ ಕಲ್ಮಠ
ಚಿರದ ದೋಣಿಯ ಪುರದ ಮುತ್ತಿನ ಗುಚ್ಛ ಸೂತ್ರದವಂ ।
ಪರಮ ಗುರು ಪಂಡಿತನ ಕೃಪೆಯಿಂ
ಧರಿಸಿ ' ನಿಜಗುಣ ಸಿದ್ಧ ' ನಾಮವ
ಬರೆದ ಕೃತಿಯಿದು ಮತಿಗೆ ಮಂಗಲಮೀವ ಸತ್ಕೃತಿಯು ॥ ೮ ॥

ಸಿದ್ಧ ಜಗದಾಚಾರ್ಯ ಬೋಧೆಯ
ನಿದ್ದುದಿದ್ದಂತೊರೆಯೆ ನಿಜಗುಣ
ಸಿದ್ಧಗುರುಕೃಪೆಯಾಂತು ಕನ್ನಡಿಸಿಂತು ಸಮ್ಮುದದಿ ।
ಬಿದ್ದು ಮುಳುಗದತೆರದಿ ಭಕ್ತರ
ನುದ್ಧರಿಪುದೈ ಭವದ ಶರಧಿಯ
ಸಿದ್ಧನಾಕೆಯು ವರದರೇಣುಕ ಗುರುಮಹಾಕೃಪೆಯಿಂ ॥ ೯ ॥

ಮುದ್ದು ದೇವಾಚಾರ್ಯ ವಂಶಜ
ಶುದ್ಧ ಸಂಸ್ಕೃತ ಗೀತೆಯೊರೆಯಲು
ಶುದ್ಧ ಸಿದ್ಧಾಂತದ ಶಿಖಾಮಣಿಯಾಯ್ತು ಭಾರತಿಗೆ ।
ಶುದ್ಧ ಜಂಗಮ ವಂಶಿ ನಿಜಗುಣ
ಸಿದ್ಧ ಷಟ್ಪದಿಯಿಂದಲೊರೆದನು
ಮುದ್ದು ಕನ್ನಡ ಭಕ್ತವೃಂದಕೆ ಭಾವವಿಡಿಯುವೊಲು ॥ ೧೦ ॥

ಗಿರಿಯಪುರವದು ತಾಯಿ ತೌರೂರ್
ಚಿರದ ದೋಣಿಯು ತಂದೆ ನೆಲವನೆ
ಯೆರೆಯಲೊಲವಂ ಪುಣ್ಯ ಫಲಿಸಲು ಸಿದ್ಧಫಲಮಾಯ್ತು ।
ಪರರನಾಶ್ರಯಿಸಾರ್ಜಿಸಿದರಿವು
ವರದ ಗುರುವಿನ ಹರಕೆ ಫಲಿಸಲು
ಹರಿದು ಕನ್ನಡ ಭಕ್ತಕೋಟೆಗಳೆದೆಯ ಮುಟ್ಟಿಹುದು ॥ ೧೦ ॥

ನೇಗಿಲಾತ್ಮನು ತಂದೆ ಸಿದ್ಧಂ
ತ್ಯಾಗಮಯಿಯೈ ತಾಯಿ ಗಂಗಾ
ತ್ಯಾಗಯೋಗಕೆ ಕೀರ್ತಿವೆತ್ತುದು ಚರದ ಮನೆತನವು ।
ಬೇಗೆ ಬಡತನ ಕಷ್ಟ ಕೋಟಿಲೆ
ಯಾಗ ಕುಂಡವು! ತಪವಗೈದವ
ರಾಗ ಮಾಡಲು ಮಗನ ವಿದ್ಯೆಯ ನೃಡನ ಬೇಡುವರು ॥ ೧೧ ॥

ಸಿದ್ಧಲಿಂಗನು ಪೂಜ್ಯನಜ್ಜನು
ಶುದ್ಧೆ ಗಂಗಮ್ಮಜ್ಜಿ, ಕಾಂನೊ
ಳಿದ್ದ ಗುರುಬಸವಯ್ಯ ಬಸವಮ್ಮವರ ಜೊಚ್ಚಲಿನ ।
ಮುದ್ದುಮಗಳಾ ತಾಯಿ ಗಂಗಾ
ಇದ್ದು ಗುರುಬಸವಪ್ಪ ಬಸವಮ
ವಿದ್ಯೆ ಕಲಿಯುವ ಕಾಲಕಾದರು ಸಾಕು ತಾಯ್ತಂದೆ ॥ ೧೨ ॥

ಅರಸನಾಸ್ಥಾನ್ ಮಹಾವಿದ್ವಾನ್
ಸಿರಸಿ ಗುರುಶಾಂತಾರ್ಯ ಶಾಸ್ತ್ರಿಯು
ಕರುಣದಿತ್ತರು ವಸತಿ ವಾರಾನ್ನಂಗಳನ್ನೆನಗೆ ।
ವರಶಿವಾದ್ವೈತಾತ್ಮ ತತ್ತ್ವದ
ಪರಮ ಬೋಧಾಚಾರ್ಯ ಪದದೊಳು
ಕರುಣದಿತ್ತರು ಲಿಂಗಧಾರಣ ಚಂದ್ರಿಕೆಯನೆನಗೆ ॥ ೧೪ ॥

ಕಾಶಿನಾಥನು ಶಾಸ್ತ್ರಪಂಡಿತ
ನೀಶನಾಣತಿಯಂತೆ ಗೈದಿಹ
ನೇಸು ಕಾಲಕು ಮರೆಯುಬರದಾಚಾರ್ಯ ಸೇವೆಯನು |
ಭಾಷೆ ಸೇವೆಯೊಳೀಶ ಸೇವೆಯ
ತೋಷಗೊಳ್ಳುತ ಮಾಡು ಭವವ
ನ್ನೀಸಿ ಗೆಲ್ಲುವೆ ಸಿದ್ಧನಾಗುವೆಯೆಂದ ಗೊಂದಿಪೆನು ‖ ೧೫ ‖

ನಿಗ್ರಹಾನುಗ್ರಹನು ನಂಜುಂ
ಡಗ್ರತಾಣಾಪನ್ನ ಶಿವನೋ
ಲುಗ್ರ ರುದ್ರನವೋಲಹಂ ಧ್ವಂಸಕರ ಜಂಗಮನು |
ಉಗ್ರತಪದೊಳು ಬಾಳಿ ಬಳ್ಳಿಯ
ಲಗ್ರ ಭಾಗದ ಮೂರು ಕಮಲಗ
ಳಗ್ರ ಸಿದ್ಧರ ಶಿವನ ಲಿಂಗಕ್ಕರ್ಪಿಸಿದ ಕೃತಧೀ ‖ ೧೬ ‖

ಅವರೆ ನನಗುಂ ಮಾವ ಮೇಣ್ ಗುರು
ಮವರಿಂಗೆನಗುಂ ಪರಮ ಗುರುವೊ
ಬ್ಬವರೆ ಪಂಡಿತವರ್ಯ ಜಗದಾಚಾರ್ಯ ವಾಗೀಶ |
ಅವರ ಕರುಣಾಬದ್ಧನಾದೆನು
ಜವನ ಬಾಧೆಯು ಗೆಲಿದೆ ಮತ್ತೀ
ಕವನ ಮಾಡುವ ಕಲೆಯು ಕೈವಶ ಸಿದ್ಧ ನಿಜಗುಣಗೆ ‖ ೧೭ ‖

ಬಲ್ಲ ಜಂಗಮರಲ್ಲಿ ಸಂಸ್ಕೃತ
ದಲ್ಲಿ ಪೇಳಿಹ ತತ್ತ್ವಶಾಸ್ತ್ರವ
ನೆಲ್ಲ ತಿಳಿಯಲು ತಿಪ್ಪಶೆಟ್ಟಿಯ ಮಠದಿ ತಪಮಿರಲು |
ಅಲ್ಲಿ ವರಗುರು ಸಿದ್ಧ ಸನ್ನಿಧಿ
ಯಲ್ಲಿ ಸಿದ್ಧಾಂತಾರ್ಥ ಬೋಧೆಯು
ಕಲ್ಲಿನಾಥ ಮಹಾ ಪುರಾಣಿಕರಿಂದ ಕೃಪೆಯಾಯ್ತು ‖ ೧೮ ‖

ಹರಸಿಯಾಶಿಷವಿತ್ತು ಮೈಸೂರ್
ಪುರದಿ ವಿದ್ಯಾಭ್ಯಾಸ ಮಾಡಲು
ಕರುಣದಾಣತಿಯಿತ್ತ ನಿಜಪದಿ ಗುರುಶಿವಾನಂದ |
ಪರಮ ಭಾಸುರ ಶಿವನ ಸಭೆಯೊಳು
ಪರಮ ಶಿವಕವಿಗಳಿಗೆ ಮತ್ತಾ
ನೆರೆದ ಶಿವಗಣಕೆನ್ನ ಕೃತಿಯನ್ನೋದೆ ಬೇಡುವೆನು || ೧೯ ||

"ಅಂದಿನಿಂದಿನ ಕವಿ ಮಹಾಶಯ
ರೊಂದು ಸಂದೇಶವನು ಕೇಳಿರಿ
ಚಂದದಿಂದೀ ಸಿದ್ಧ ನಿಜಗುಣ ಕೃತಿಗೆ ಶುಭ ಕೋರಿ" |
ಬಂಧುರದ ನುಡಿ ನಿನದ ಮೊಳಗುವು
ದೊಂದೆ ಕೊರಲಿಂ ಬಾನು ಭುವಿಯ
ನ್ನೊಂದು ಗೈಯ್ಯುವುದು ಮರ್ತ್ಯವಿಂದೇ ಸ್ವರ್ಗವಾಗುವೊಲು ! || ೨೦ ||

ಎಲ್ಲ ದೇಶದ ಎಲ್ಲ ಭಾಷೆಯ
ಸೊಲ್ಲು ಸಂಪದವನ್ನು ಬೆಳಸಿಹ
ಸಲ್ಲಲಿತ ಕವಿವರರೆ ಕೇಳಿರಿ ಸಿದ್ಧವಾಣಿಯನು |
ಬಲ್ಲ ಭಾವುಕರೆಲ್ಲ ಹರ್ಷಿಸಿ
ಸೊಲ್ಲು ಸೊಲ್ಲಿಗೆ ಪುಳುಕಗೊಳುವೊಲು
ನಿಲ್ಲದೋಡುವ ಭಾವಗಂಗೆಯ ಮಿಂದು ಮುದವೇರಿ || ೨೧ ||

" ವೀರ ರೇಣುಕ ಲಿಂಗ ಸಂಭವ
ವೀರಶೈವವ ಜಗದಿ ಸಾರಲು
ವೀರಯೋಗಿಗೆ ಬೋಧಮಿತ್ತಾ ವೀರ ಸಿದ್ಧಾಂತ |
ವೀರವರ ಶಿವಯೋಗಿ ವಿರಚಿತ
ಮೇರುಸಾದೃಶ ದಿವ್ಯಕೃತಿಯೊಳು
ಚಾರು ತರದಿಂ ಮೂರ್ತಿಗೊಂಡಿದೆ ರೇಣುಕನ ಗೀತೆ || ೨೨ ||

ಇದುವೆ ತತ್ತ್ವದ ಮುಡಿಗೆ ಮಣಿತಾ
ನಿದುವೆ ರೇವಣ ಸಿದ್ಧಗೀತವು
ಮಧುರ ಜೀವಿಯ ಶಿವನನಾಗಿಪ ಮೂಲ ಮಂತ್ರಾರ್ಥ ।
ಇದುವೆ ಭೇದಾಭೇದಯೋಗವು
ಮುದದಿ ನೋಡುವ ಭಕ್ತಗೊಲಿವುದು
ಪದದಿ ರೇಣುಕ ಗುರುವಗಸ್ತ್ಯಂಗೊರೆದ ಶಿವಯೋಗ ॥ ೨೩ ॥

“ ಸತಿಯು ಶರಣನು ಲಿಂಗ ದೇವರೆ
ಪತಿಯು ”—ಎಂಬೀ ಮಧುರ ಭಾವಾ
ದ್ವೈತಭಾವಜ್ಞಾನ ರೇವಣಸಿದ್ಧ ಸಿದ್ಧಾಂತ ।
ಮತಿಗೆ ಮಂಗಲಮೀವ ಬೋಧಾ
ಮೃತವ ನೀಂಟುವ ಭಕ್ತನಿಹಪರ
ಗತಿಯ ಸಾಧಿಪಸಂಗಲಿಂಗದಿ ಬೆರೆದು ಬಯಲಪ್ಪ ॥ ೨೪ ॥

ಶಿವನೆ ಸತ್ಯವು ನಿತ್ಯ ನಿರುಪಮ
ಶಿವನ ರೂಪಮಿದೆಲ್ಲ ವಿಶ್ವವು [1]
ಭುವನ ಮಿಥ್ಯವು ಮಿಥ್ಯಮೆನಿಸಿಕೆ ಬರಿಯ ಕಲ್ಪಿತವು ।
ಶಿವನು ಜಡಚರದಂತರಾಳದೆ
ಸವೆಯದೆಂದುಂ ನೆಲೆಯ ನಿಂತಿಹ
ನವನು ಮಿಲ್ಲದ ತಾಣಮಿಲ್ಲವಿದೆಲ್ಲ ಶಿವರೂಪ ॥ ೨೫ ॥

---

1 “ ಈಶಾವಾಸ್ಯಮಿದಗ್ಂ ಸರ್ವಂ ಯತ್ಕಿಂ ಚ ಜಗತ್ಯಾಂ ಜಗತ್ ”

— ಈಶಾವಾಸ್ಯೋಪನಿಷತ್

“ ಎತ್ತೆತ್ತ ನೋಡಿದೊಡತ್ತತ್ತ ನೀನೇ ದೇವಾ, ಸಕಲವಿಸ್ತಾರದ ರೂಹು ನೀನೆ ದೇವ ”
“ ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ, ಸುಳಿದು ಬೀಸುವ ವಾಯು ನಿಮ್ಮ ದಾನ ”

ಬಂಧು ಬಾಂಧವರೇಳಿ! ಎಚ್ಚರ
ಪೊಂದಿ ಬೋಧವ ಕೇಳಿ! ಭವವ[2]
ನ್ನೊಂದೆ ಜನ್ಮದಿ ಕಳೆಯೆ ಶಿವಮತದಂತೆಯಾಚರಿಸಿ ।
ಅಂದಿಗಾಯಿತದಿಂದಿಗಿಲ್ಲವ
ದೆಂದು ಸಂದೆಯ ನೀಗಿ ನಿರುತ
ವ್ಮೊಂದೆ ಭಾವದೊಳರ್ಚಿಸಿರಿ ಗುರುಲಿಂಗ ಜಂಗಮವ ॥ ೨೬ ॥

ಪೀಠಿಕಾಸಂಧಿ ಸಂಪೂರ್ಣಂ

ಅಂತು ಸಂಧಿಯೊಂದಕ್ಕಂ ಪದನು ಇಪ್ಪತ್ತಾರಕ್ಕಂ
ಮಂಗಳಮಸ್ತು

—ನಿಜಗುಣಸಿದ್ಧ

---

[2] "ಉತ್ತಿಷ್ಠ! ಜಾಗ್ರತ ಪ್ರಾಪ್ಯವರಾನ್ನಿ ಬೋಧತಾ"

# ಒಂದನೆಯ ಸಂಧಿ

## ಶಿವಯೋಗಿ ಶಿವಾಚಾರ್ಯಕವಿ ಮತ್ತು ಕಾವ್ಯವಿಚಾರ

ಸೂಚನೆ—ಶಿವಗು ಶಕ್ತಿಗು ಮಣಿದು ಮತ್ತಾ ।
ಕವಿಯ ವಂಶಾವಳಿಯನಾಲಿಸಿ ।
ಕವಿಯು ಬಣ್ಣಿಪ ಕಾವ್ಯವೋದಲು ಲಾಭ ಶಿವಯೋಗ ॥

**ಶಿವಸ್ತುತಿ**

ಮೂರು ಲೋಕದ ಚಿತ್ರಸಂಪದ
ಕಾರು ಭಿತ್ತಿಯ ತೆರದಲಾಶ್ರಯ
ನಾರು ಮಂಗಳ ಸಚ್ಚಿದಾನಂದಾತ್ಮ ರೂಪಕನೋ ।
ಚಾರು ಮೂರ್ತಾಮೂರ್ತ ಮಹಿಮನ
ನಾರು ಹಂತಗಳೇರಿ ಬೆರೆಯಲು
ಸಾರವೇದಾಗಮದೆ ಸಂಸ್ತುತ ಶಿವನಿಗೊಂದಿಪೆನು[1] ॥ ೧ ॥

ಶರಣು ಪರಶಿವ ಸಾಂಬಮೂರ್ತಿಯೆ
ಶರಣು ಜಗದಧಿ ದೇವದೇವನೇ
ಶರಣು ವೇದಾಗಮುಗಳಾತ್ಮ ಬ್ರಹ್ಮ ಭವಹರನೆ ।
ಶರಣು ಶಿವನಿಂ ಪೃಥವಿಯಾಂತವು
ಮೆರೆವ ಮೂವತ್ತಾರು ತತ್ತ್ವದ[2]
ಶರಧಿ ಚಿನ್ಮಯ ತೆರೆಯವಾಸನೆ ನಿತ್ಯನಿರ್ಮಲನೆ ॥ ೨ ॥

---

[1] " ಪ್ರಪಂಚೋಪಶಮಂ ಶಾಂತಂ ಶಿವಮದ್ವೈತಂ " —ಮಾಂಡೂಕ್ಯೋಪನಿಷತ್
(ಶ್ಲೋಕ ೭–೫)

* [2] " ಶಿವ, ಶಕ್ತಿ, ಈಶ್ವರ, ಶುದ್ಧವಿದ್ಯಾ, ಮಾಯಾ, ಕಲಾ, ವಿದ್ಯಾ, ರಾಗ, ಕಾಲ, ನಿಯತಿ, ಪುರುಷ, ಪ್ರಕೃತಿ ಬುದ್ಧಿ, ಅಹಂಕಾರ, ಮನಃ, ಶ್ರೋತ್ರ, ತ್ವಕ್, ನೇತ್ರ, ಜಿಹ್ವಾ, ಘ್ರಾಣ, ವಾಕ್, ಪಾಣಿ, ಪಾದ, ಪಾಯು, ಉಪಸ್ಥ ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಆಕಾಶ, ವಾಯು, ಅಗ್ನಿ, ಜಲ, ಪೃಥಿವಿ—ಗಳೆಂಬ ಮೂವತ್ತಾರು ತತ್ತ್ವಗಳ ರೂಪವಾಗಿ ಪರಿಣಮಿಸುವುದು.

ಯಾರು ಶಾಂತನೊ ಯಾರು ಶಂಭುವೊ
ಯಾರು ನಿಷ್ಕಲನಾರು ನಿರ್ಮಲ
ನಾರು ಪಂಚಬ್ರಹ್ಮರೂಪನೊ ವಿಶ್ವಕೀಶ್ವರನೋ ।
ಯಾರ ಕಳೆಯಿಂ ವಿಶ್ವಹೊಳೆವುದೊ
ಯಾರು ಸುಖಿಸಲು ವಿಶ್ವನಲಿವುದೊ
ಯಾರ ವೈಭವ ಗುಣಕತೀತವೊ ನಮಿಪೆನಾಶಿವಗೆ ॥ ೩ ॥

ಭಕ್ತರಿಚ್ಛೆಯ ಸಲಿಸೆ ಮುದದಿಂ
ವ್ಯಕ್ತರೂಪವಧರಿಸಿ ಮೆರೆಯುವ
ಭಕ್ತವತ್ಸಲ ಸಾಂಬಶಿವನಿಗೆ ನಮಿಪೆ ಶಂಕರಗೆ ।
ಶಕ್ತಿಗಾಶ್ರಯ ನೂರ್ಧ್ವರೇತಸಿ
ಮುಕ್ತಿದಾಯಕನಾಮಹೇಶಗೆ
ಭಕ್ತಿ ಪೂರ್ವಕ ಮಣಿವೆನೀಶಗೆ ಸರ್ವರೊಡೆಯಂಗೆ ॥ ೪ ॥

ಶಕ್ತಿಸುತಿ

ಆದಿಮಧ್ಯಾಂತಾದಿ ವಿರಹಿತ
ನಾದ ಶಿವತಾ ಶಕ್ತಿ ಸಂಗದ
ಲಾದ ಬಹುವಿಧ ನಾಮರೂಪನು ಶಾಸ್ತ್ರಮತವಿಂತು ।
ಆದಿ ಮಾಯೆಯೇ ! ಸರ್ವಲೋಕಗ
ಳಾದಿ ಶಕ್ತಿಯೆ ! ಧರ್ಮನಡೆಯೊಳು
ಮೋದ ವೀಯುವ ಶಂಭುಕಾಂತೆಯೆ ! ಶರಣು ಶಂಕರಿಯೆ ! ॥ ೫ ॥

ಕಷ್ಟ ಕೋಟಲೆ ಕೊಟ್ಟು ದುಷ್ಟರ
ನಿಷ್ಟಸಿದ್ಧಿಯನಿತ್ತು ಶಿಷ್ಟರ
ದೃಷ್ಟಿ ಸಮತೆಯನಿತ್ತು ಶರಣರ ಪೊರೆವ ಪಾರ್ವತಿಯೆ ।
ಸೃಷ್ಟಿಸರ್ವಕ್ಕಾದಿ ಮಾತೆಯೆ
ಸೃಷ್ಟಿಕಾರ್ಯದಿ ಕಲೆಯ ಪೂರ್ಣೆಯೆ
ಸೃಷ್ಟಿನಿಯಮಾಧಾರೆ ಧಾರಿಣಿ ಶರಣು ಶಾಂಭವಿಯೆ ॥ ೬ ॥

ಭವದಿ ಬೇಯುವ ಭಕ್ತ ಸಂತತಿ
ಜವದೆ ಮುಕ್ತಿಯ ನೀಯೆ ಬೇಡಲು
ಶಿವದ ನೆಲೆಯನು ವೀರಶೈವದಿ ತೋರ್ವ ಪಾರ್ವತಿಯೆ ।
ಶಿವನ ಕಳೆಯಲಿ ವಿಶ್ವಬೆಳಗುವ
ಶಿವದಿ ಶಕ್ತಿಯ ನೆಲೆಯೆ ವಂದಿಪೆ
ಶಿವನ ಭಾವದಿ ವಿಶ್ವಭಾವವ ಮಿಡಿವ ಮಂಗಳೆಯೆ ॥ ೭ ॥

ಅಮೃತ ಪದವನು ಬೇಡಿ ಮೊರೆಹೊಗ
ಲಮೃತ ವಿದ್ಯೆಯ ನೀವೆಶರಣಂ
ಗಮೃತ ಮಯನಾನಂದ ಕಾರಿಣಿ ವಿನುತಶಂಕರಿಯೆ ।
ಅಮೃತ[1]ಕಲಶದ ಬಾಯಿ ಮುಚ್ಚಿಹೆ
ಅಮೃತದಾಹದಿ ಹೃದಯ ತುಡಿದಿಹು
ದಮೃತ ಕರದಿಂ ಕುಡಿಸು ವಂದಿಪೆನನ್ನ ಪೂರ್ಣಾಂಬಾ ! ॥ ೮ ॥

---

[1] "ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ ।
ತತ್ತ್ವಂ ಪೂಷನ್ನ ಪಾವೃಣು ಸತ್ಯಧರ್ಮಾಯ ದೃಷ್ಟಯೇ ॥"

( ಅರ್ಥ—(i) ಸತ್ಯಸ್ಯ ಮುಖಂ–ಪರಬ್ರಹ್ಮನ ಮುಖವು, ಹಿರಣ್ಮಯೇನ ಪಾತ್ರೇಣ–ಹಿರಣ್ಮಯವಾದ ಪಾತ್ರೆಯಿಂದ, ಅಪಿಹಿತಂ – ಮುಚ್ಚಿರುತ್ತದೆ. ಪೂಷನ್ – ಎಲೈ ಪೂಷನೆ, ತತ್ – ಅದನ್ನು, ತ್ವಂ – ನೀನು, ಸತ್ಯ ಧರ್ಮಾಯ – ಸತ್ಯ ಧರ್ಮನಾದ ನನಗೆ, ದೃಷ್ಟಯೇ – ಕಾಣುವುದಕ್ಕಾಗಿ. ಅಪಾವೃಣ – ತೆರೆಯುವವನಾಗು )

(ii) "ತುಚ್ಛೇನಾಭ್ವಪಿಹಿತಂ" ಅಭು – ಪರಬ್ರಹ್ಮವು, ತುಚ್ಛೇನ – ಮಾಯಾ ಶಕ್ತಿಯಿಂದ, ಅಪಿಹಿತಂ – ಮುಚ್ಚಲ್ಪಟ್ಟಿದೆ—ಎಂದು ಅರ್ಥ. (ನಾಸದೀಯ ಸೂಕ್ತ)

## ಗ್ರಂಥಕರ್ತೃ ಶಿವಯೋಗಿ ಶಿವಾಚಾರ್ಯರ ವಂಶಾವಳಿ ವರ್ಣನೆ

ಸೂಚನೆ :—ಧರಣಿಯೊಳು ಗುರು ಮಠದ ಜಂಗಮ
ಚರಿತು ನಡೆಯಲು ಯೋಗ ರತಿಯೊಳು
ಪರಮ ಪುಣ್ಯೋದಯದ ಫಲದಿಂ ಕವಿಯ ಜನಿಸಿದನು ॥

ನಡೆಯು ಲಿಂಗಾಚಾರ ಶೀಲನು
ಮೃಡನ ಶರಣರ ಮುಖ್ಯಮಣಿತಾ
ನೊಡನೈಬೆರೆಯುವ ಶಿವನ ಭಾವದಿ ನಿಜದಿ [1]ಶಿವಯೋಗಿ ।
ಕಡಲು ಚಂದ್ರೋದಯದೆ ಹಿಗ್ಗುತ
ಲೊಡನೆ ಯಾಗಸಕೇರ್ವತೆರದೊಳು
ಕುಡಿಯುವರಿಯಿತು ವಂಶ ಜಂಗಮ ಜಗದಿ ಶೋಭಿಸಿತು ॥ ೯ ॥

ಭವದ ಭವಣೆಯ ನೀಗಲೆಂದೇ
ಶಿವಗೆ ಮನವನು ಮೀಸಲಿಡುತಲಿ
ಶಿವನ ನೆಲೆಯನು ಯೋಗದಿಂದರಿದಾದ ಶಿವಯೋಗಿ ।
ಶಿವನ ಭಕ್ತಿಯ ಶರಧಿಯೋತ್ಸವ
ದಿವಕೆ ದಾಂಗುಡಿಯಿಡಲು ಬೆಳಗಿ
ತ್ರಿವನ ಕೀರ್ತಿಯ ಚಂದ್ರಚಂದ್ರಿಕೆ ಸಿದ್ಧರಾಗ್ರಣಿಯ ॥ ೧೦ ॥

ಕಮಲಗಣ್ಣಿಂ ಪದ್ಮಮುಖದಿಂ
ಕಮಲಕರದಿಂ ಪದ್ಮಪದದಿಂ
ಕಮಲಸರಸಿಯ ಶೋಭೆಗಾಕರ ಮಾದ ತೆರದಂತೆ ॥
ಮಿಮಲ ಜಂಗಮ ವಂಶ ಸಂಭವ
ನಮಲ ಮುತ್ತಿನ ಮಣಿಯ ಮಾಣಿಕ
ವಮಮ ಸುಂದರ ಕಂದ ಪುಟ್ಟಿದ ಸಿದ್ಧರಾಗ್ರಣಿಗೆ ॥ ೧೧ ॥

---

[1] ಶಿವಯೋಗಿ—ಮುದ್ದದೇವಾಚಾರ್ಯ—ಸಿದ್ಧನಾಥಾಚಾರ್ಯ — ಶಿವಯೋಗಿ ಶಿವಾಚಾರ್ಯ—ಇದು ವಂಶಾವಳಿ.

ಭುವಿಯ ಭಾಮೆಯರೆಲ್ಲ ಸೇರುತ
ಸವೆದು ಗುರುವಿನ ಪಾದತೀರ್ಥವ
ನವನವೋದಯ ಶಿಶುವ ಕರೆದರು "ಮುದ್ದದೇವಾರ್ಯ" |
ಕವನ ಮಿಡಿಯುವ ಭಾವದಂದದಿ
ದಿವವ ಬೆಳಗುವ ಚಂದ್ರನಂದದಿ
ಶಿವನ ಭಕ್ತಿಯ ಬೆಳಸಿನಂದದಿ ಬಳೆದನಾ ಬಾಳ ॥ ೧೨ ॥

ಸದಯ ಹೃದಯನ ಮುದ್ದು ಮೊಗತಾ
ಮುದವ ನೀವುದು ಸರ್ವ ಜೀವಿಗು
ಮುದದಿ ಬೋಧಾಮೃತವ ನೀವುದು ಶರಣ ಸಜ್ಜನಕೆ |
ಮುದವು ಕಣ್ಮನ ಬುದ್ಧಿ ಭಾವಂ
ಗೊದವೆ ರವಿತಾ ಜಗದ ಕತ್ತಲೆ
ಚದರೆ ಬೆಳಗುವ ಪರಿಯೆ ಶೋಭಿಪ ಮುದ್ದು ದೇವಾರ್ಯ ॥ ೧೩ ॥

ಮುದ್ದು ದೇವಾಚಾರ್ಯನಂಶದಿ
ಸಿದ್ಧನಾಥಾಚಾರ್ಯ ನೊಗೆದನು
ಶುದ್ಧ ಸಿದ್ಧನು ಶಾಂತಚಿತ್ತನು ಶೈವಸಿದ್ಧಾಂತಿ |
ಸಿದ್ಧರಾಗ್ರಣಿ ವೀರಶೈವದ
ಶುದ್ಧಜಂಗಮ ವಂಶರತ್ನಂ
ಶುದ್ಧ ಶೈವ ಶಕುತಿ ವಿಶಿಷ್ಟಾದ್ವೈತದಾಚಾರ್ಯ ॥ ೧೪ ॥

ಪಾಲಗಡಲಿಂ ದೊಗೆದ ಚಂದ್ರನು
ಬಾಲವೃದ್ಧರ ನಲಿಸುವಂದದಿ
ಬಾಳನುದಿಸಿದ ಸಿದ್ಧನಾಥನ ಸಿದ್ಧಿಫಲಮಾಗಿ |
ಶೂಲಿಯೊಲಿವಾಚಾರ ಶೀಲದೆ
ಪಾಲಿಸುತ ಶಿವಭಕ್ತಿ ರತಿಯನು
ಮೂಲಮಂತ್ರದ ನೆನಹಿನಾಳದಿ ಬಳೆದ ಶಿವಯೋಗಿ ॥ ೧೫ ॥

ಭವದ ಭವಣೆಯು ನೀಗುವಾತನು
ಶಿವದ ನೆಲೆಯನು ತಿಳಿಸುವಾತನು
ಶಿವನ ಶರಣನು ನಿಗಮವಾಗಮವರಿತ ಪಂಡಿತನು ।
ದಿವವು ದಿನಮಣಿ ಕರುಣ ಕಿರಣದೆ
ಭುವಿಯನೆಲ್ಲಾ ಬೆಳಗುತಿರುವೋ
ಲಿವನ ಗೀತವು ವೀರಸಿದ್ಧಾಂತವನು ಮಂಡಿಸಿತು । ॥ ೧೭ ॥

ವೀರಶೈವರ ಧರ್ಮ ಮಾರ್ಗದೆ
ವೀರಪಥವನು ಪಿಡಿದು ನಡೆವಗೆ
ವೀರ ಶಿವಮತತತ್ವದರಿವೊಳು ಶಾಂತನಾದವಗೆ ।
ವೀರವೃತ್ತಿಯ ವೀರಗೋತ್ರವ
ನೇರಿಬಂದಿದೆ ಶಿವನ ಕೃಪೆತಾ
ವೀರಶೈವದ ಗಗನ ಬೆಳಗುವ ಚಂದ್ರಚಂದ್ರಮನ ॥ ೧೭ ॥

ಕಾಮಿಕಾದಿಯು ವಾತುಲಾಂತ್ಯದ
ಕಾಮಿತಾರ್ಥವನೀವ ತಂತ್ರದ
ಸಾಮ ಋಗ್ವೇದಾದಿ ವೇದದ ಮಾರ್ಗವನುಸರಿಸಿ
ಭೂಮಿಯೋಳ್ ಪದಿನೆಂಟ್ಪುರಾಣ್ಯವ [1]
ನಾಮ ಮಹಿಮೆಯ ಪುಣ್ಯಕಥೆಗಳ
ಸೋಮಶೇಖರ ಶರಣನೋದಿದ ವಿಮಲಸುಜ್ಞಾನಿ ॥ ೧೮ ॥

———

ಪದಿನೆಂಟು ಪುರಾಣಗಳು :— ಶಿವ, ವಿಷ್ಣು, ಬ್ರಹ್ಮ, ಭಾಗವತ, ನಾರದ, ಮಾರ್ಕಾಂಡೇಯ, ಅಗ್ನಿ, ಭವಿಷ್ಯ, ಬ್ರಹ್ಮವೈವರ್ತ, ಲಿಂಗ, ವರಾಹ, ಸ್ಕಂದ, ವಾಮನ, ಕೂರ್ಮ, ಮತ್ಸ್ಯ, ಗರುಡ, ಬ್ರಹ್ಮಾಂಡ ಪುರಾಣಗಳೆಂದು ಹದಿನೆಂಟು ಪುರಾಣಗಳು ಪ್ರಸಿದ್ಧವಾಗಿವೆ.

ವೀರಶೈವದ ತಂತ್ರಶಾಸ್ತ್ರದಿ
ನೂರು ಮೇಲೊಂದು ಸ್ಥಲಂಗಳ
ಮಾರಹರ ಶಿವ ಗೌರಿ ಗುಹಂಗೆ ಮುದದಿ ಪೇಳ್ದುದನು ।
ವೀರರೇಣುಕಗುರುವಗಸ್ತ್ಯಗೆ
ಸಾರಿ ಪೇಳಿಹ ಮುಕ್ತಿ ಕವಚವ
ಧೀರಯೋಗಿಯು ಲೋಕಕಲ್ಯಾಣಾರ್ಥ ರಚಿಸಿದನು ॥ ೧೯ ॥

ಮೋದವೀಯುವ ಶೈವತಂತ್ರದ
ವೇದಮಾರ್ಗದ ಸಾರಸಂಗ್ರಹ
ಸಾಧುಶರಣರ ವೀರಶೈವರ ಯೋಗಸಾಧನವು ।
ಬೋಧಿಬುದ್ಧರ, ಬದ್ಧಭವಿಗಳ
ಭೇದನೀತಿಗೆ ನಿಶಿಥದಾಸ್ತ್ರವು
ಬೋಧಿಪುದು ಶಿವಯೋಗ ರೇವಣಸಿದ್ಧ ಸಿದ್ಧಾಂತ ॥ ೨೦ ॥

ಚನ್ನಶರಣರ ಮತದ ಸಾರವಿ
ದುನ್ನತೋನ್ನತ ಗೀತರತ್ನವು
ಮುನ್ನಪಶುಪತಿ ಯೊರೆದ ಗೋಪ್ಯದ ಮಂತ್ರಕರ್ಥಮಿದು ।
ಉನ್ನತಾರ್ಥದ ಶೈವತಂತ್ರದ
ನನ್ನಿಯೆಲ್ಲಾ ವೀರಶೈವರ
ಮನ್ನಣೀಯವು ಮಾನ್ಯಪಂಡಿತರಚ್ಚುಮೆಚ್ಚಿದುವೆ. ॥ ೨೧ ॥

ಇಂತು ರೇಣುಕಗೀತೆ ಬೋಧಿಪು
ದೆಂತು ವರಶಿವಯೋಗಿವಂಶವು
ನಿಂತು ಭುವಿಯೊಳ್ ತುಂಬುಬಾಳನು ಬಾಳಿಬೆಳಗಿದುದೂ ।

ಎಂತುಮಿಹಪರ ಗತಿಯ ಸಾಧಿಸಿ
ತಂತುಭಾರತಿ ಮುಡಿಗೆ ಚಿನ್ಮಯ
ಚಿಂತನದ ಮಣಿಮುಡಿಸಿತೆಂಬೀ ಸಂಧಿಸಂಪೂರ್ಣ ॥ ೩೩ ॥

ಒಂದನೆಯ ಸಂಧಿ ಸಂಪೂರ್ಣಂ

ಅಂತುಸಂಧಿಯೆರಡಕ್ಕಂ ಪದನು ನಾಲ್ವತ್ತೆಂಟಕ್ಕಂ

ಮಂಗಳಮಸ್ತು

—ನಿಜಗುಣಸಿದ್ಧ

# ಎರಡನೆಯ ಸಂಧಿ

## ಜಗತ್ ಸೃಷ್ಟಿ

ಸೂಚನೆ :—ಅಭವನಾವಿರ್ಭಾವವೇಕೆನೆ ?
ಶುಭಗೆ ಶಕ್ತಿಯ ಸಂಗ ಕಾರಣ
ವಿಭುದ ಬೊಮ್ಮನ ಸೃಷ್ಟಿಸಾದ್ಯಶಕೆಂದೆ ಕೈಲಾಸ ॥

ಶರಣು ಸಚ್ಚಿದ್ರೂಪ ನಿತ್ಯನೆ
ಶರಣು ಸದಸದ್ವ್ಯಕ್ತಿಹೇತುವೆ
ಶರಣು ಸಾಂಬಾನಂದ ಸಗಣನೆ ಶಂಭು ಶಂಕರನೆ ।
ಶರಣು ಶಿವಮುಖ ಪೂರ್ಣತತ್ತ್ವದ
ಪರಮ ಮೌಕ್ತಿಕಶುಕ್ತಿರತ್ನಿಯೆ
ಶರಣು ಮಾಹೇಶ್ವರಿಯೆ ಶಕ್ತಿಯನಂತರೂಪಿಣಿಯೆ ॥ ೧ ॥

[1] ಇದ್ದುದಭವಂ ಮೋಕ್ಷಮೂಲಂ
ಶುದ್ಧ ಸತ್ತ್ವಂ ಸುಖಕೆ ಕಾರಣ
ಶುದ್ಧ ಶಾಂತಂ ನಿರ್ವಿಕಲ್ಪಾಕಾರ ರಹಿತಮದು ।
[2] ಇದ್ದು ಭೇದಿಸಬರದ ಶೂನ್ಯವು
ನಿದ್ದೆ ಜಾಗರ ಜಗಕತೀತದ
ಲಿದ್ದುದುಪಮಾತೀತ ವೈಭವಪದದಿ ನೆಲೆಗೊಂಡು ॥ ೨ ॥

---

[1] ‘ಅಖಂಡೇಶ್ವರ ನಿಮ್ಮ ನೀವರಿಯದೆ ಅನಂತಕಾಲ ಇರ್ದಿರಂದು
——ಎಸಗುವಾ ಸಂಸಾರದ ಕುರುಹಿಲ್ಲದಾತಂಗೆ ಹೆಸರಾಗುವುದೂ ಇಲ್ಲ!
——ನಾಮಸೀಮೆ ಇಲ್ಲದಂದು ನೀನು ಉಲಹು ಅಡಗಿದೆಯಲ್ಲಾ ಕಲಿದೇವಯ್ಯ’
ಶೂನ್ಯ ಹುಟ್ಟದಂದು, ಶೂನ್ಯ ನಿಶ್ಶೂನ್ಯವಿಲ್ಲದಂದು——ಕೂಡಲ ಚೆನ್ನಸಂಗಯ್ಯ
ಹೆಸರಿಲ್ಲ ದಿರ್ದನಂದು

[2] “ಚಿದ್ವ್ಯೋಮ್ನೈವಪರಂ ಶೂನ್ಯಂ” ಯೋಗವಾಸಿಷ್ಠ – ನಿರ್ವಾಣ ಪ್ರಕರಣ.

ತಾನೆ ತನ್ನಿಂ ಬೆಳಗಬಲ್ಲವ
ತಾನೆ ತನಗುಪಮಾನವನುಪಮ
ತಾನು ಬಲ್ಲವನೆಲ್ಲ ಚರಿಸುವನೆಲ್ಲು ಸುಸ್ಥಿರನು ।
ತಾನೆ ಸರ್ವಕು ಶಕ್ತ ಶಂಭುವು
ತಾನೆ ಶಾಂತಂ ಪ್ರಭು ನಿರಂಕುಶ
[1]ತಾನೆ ಪರಮಾಕಾಶವನಿತಂ ತುಂಬಿ ತುಳುಕುವನು ॥ ೩ ॥

ಅವನ ಶಿವಹರನಮರದೇವನೆ
ಭವನೆ ಪರತರನದ್ವಿತೀಯನೆ
ಭುವನ ಶುದ್ಧ ಬ್ರಹ್ಮನನುಪಮನೆಂದು ಪೊಗಳುವರು ।
[2] ಶಿವನ ಗರ್ಭದಲಡಗಿದೀ ಕೃತಿ
ಯವನ ಲೀಲಾಮಾತ್ರವಾವಿ
ರ್ಭವಿಸಿ ಬೆಳಗಿತು ತನ್ನುರುತರ ಸ್ವಪ್ರಕಾಶವನು ॥ ೪ ॥

---

[1] ಆಕಾಶಂ, ಗಗನಂ, ಅಂಬರಂ, ವ್ಯೋಮಂ, ಅನಂತಂ, ಶೂನ್ಯಂ—ಇವು ಸಮಾನಾರ್ಥ ಪದಗಳು.

[2] i) ಹಿರಣ್ಯಗರ್ಭಃ ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆ ಸೀತ್ ।
ಸದಾಧಾರ ಪೃಥಿವೀಂ ದ್ಯಾಮುತೇಮಾಂ ಕಸ್ಮೈದೇವಾಯ ಹವಿಷಾ ವಿಧೇಮ ॥
(ಸಯಣಭಾಷ್ಯಾಧಾರ :—ಹಿರಣ್ಯಗರ್ಭಂ=ಹಿರಣ್ಯಗರ್ಭನೆಂಬ ಪ್ರಜಾಪತಿಯು ಅಗ್ರೇ=ಸೃಷ್ಟಿಪೂರ್ವದಲ್ಲಿ, ಏಕಃ=ಇನ್ನೊಬ್ಬನಿಲ್ಲದೆ ತಾನೊಬ್ಬನೆಯಾಗಿ ಸಂ ಅವರ್ತತ=ತಾನೇ ತಾನಾಗಿದ್ದನು, ಜಾತಃ=ಹುಟ್ಟಿದಾಗಲೇ, ಭೂತಸ್ಯ=ಸರ್ವ ಭೂತಗಳಿಗೂ, ಪತಿಃಆಸೀತ್=ಸ್ವಾಮಿಯಾಗಿದ್ದನು, ಸಃ=ಅವನು, ಇಮಾಂ=ಈ ಪೃಥವೀಂ=ಭೂಮಿಯನ್ನು, ಉತ=ಮತ್ತು, ದ್ಯಾಂ=ದ್ಯುಲೋಕವನ್ನು, ದಾಧರ=ಧರಿಸುತ್ತಾನೆ, ಕಸ್ಮೈದೇವಾಯ=ಯಾವದೇವನಿಗೆ, ಹವಿಷಾ=ಹವಿಸ್ಸಿನಿಂದ, ವಿಧೇಯ=ಉಪಚಾರ ಮಾಡೋಣ ?

(ಋಗ್ವೇದ ದಶಮ ಮಂಡಲ –೧೨೧ನೆಯ ಸೂಕ್ತ).

ii) ಏನೂ ಏನೂ ಇಲ್ಲದ ಬಯಲೊಳಗೊಂದು ಬಗೆಗೊಳಗಾದ ಬಣ್ಣ ತಲದೋರಿತ್ತು
ಆ ಬಣ್ಣವನಾ ಬಯಲು ಶೃಂಗರಿಸಲು ಬಯಲು ಸ್ವರೂಪಗೊಂಡಿತ್ತು,
ಅಂತಪ್ಪ ಸ್ವರೂಪಿನ ಭೇದವು ತಾನೇ ನಮ್ಮ ಗುಹೇಶ್ವರಲಿಂಗದ ಪ್ರಥಮ ಭಿತ್ತಿ.

ಚನ್ನ ಪರಶಿವನಾತ್ಮಲಿಂಗವು
ತನ್ನ ಸುಖದೊಳ್ ಸ್ಫೂರ್ತಿಗೊಳ್ಳುತ[1]
ಲಿನ್ನು ಜಗವಂ ಸೃಷ್ಟಿಪೇಷ್ಟದಿ ಭವ್ಯರೂಪಾಯ್ತು ।
ಉನ್ನತೋನ್ನತ ದಿವ್ಯರೂಪವು
ಮುನ್ನಕಾದಿಯ ಶೂನ್ಯತತ್ತ್ವವು
ತನ್ನ ಲೀಲಾಮಾತ್ರ ಬಾಹ್ಯಕೆ ಬರಲು ಹವಣಿಸಿತು ॥ ೫ ॥

ಹುಟ್ಟುಸಾವಿನ ದೋಷವಿಲ್ಲದ
ನೆಟ್ಟನವ್ಯಯ ನಿತ್ಯನಿರ್ಮಲ
ದಿಟ್ಟ ಮೂರರ ನೀಲಕಂಠನು ನಿರುಪಮಾಧಿಕನು[2] ।
ಮೆಟ್ಟ ರವಿಶಶಿ ಕೋಟಿಕಳೆಯನು
ತೊಟ್ಟು ಬೆಳ್ಳಿಭ ಚರ್ಮದುಡಿಗೆಯ
ಕಟ್ಟ ಮುತ್ತಿನ ಹೊಳೆವಹಾರವ ಪೂಜ್ಯತಾನಾದ ॥ ೬ ॥

---

[1] "ತಪಸಾಚೀಯತೇ ಬ್ರಹ್ಮ, ತತೋನ್ನಮಭಿಜಾಯತೇ" ಎಂದರೆ ತಪಸ್ಸಿನಿಂದ ಬ್ರಹ್ಮವು ಅಭಿವೃದ್ಧಿ ಹೊಂದಿ, ವ್ಯಕ್ತವಾದ ಜಗತ್ತು ಹೊರಹೊಮ್ಮುವುದು—ಎಂದು ಮುಂಡಕೋಪನಿಷತ್ತಿನಲ್ಲಿ ಹೇಳಿದೆ.

[2] "ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ ।
ಉರ್ವಾರುಕಮಿವಬಂಧನಾನ್ಮೃತ್ಯೋರ್ಮುಕ್ಷೀಯ ಮಾಮೃತಾತ್ ॥ ಋಗ್ವೇದ
(ಸಾಯಣ ಭಾಷ್ಯಾಧಾರ— ತ್ರ್ಯಂಬಕಂ ತ್ರಯಾಣಾಂ ಬ್ರಹ್ಮವಿಷ್ಣು ರುದ್ರಾಣಾಂಪಿತರಂ)

ಅರ್ಥ :— ಸುಗಂಧಿಂ= 'ಪ್ರಸಾರಿತ ಪುಣ್ಯಕೀರ್ತಿರೂಪ' ಸುಗಂಧವುಳ್ಳವನೂ, ಪುಷ್ಟಿವರ್ಧನಂ=ಜಗತ್ ಪುಷ್ಟಿಯನ್ನು ಹೆಚ್ಚಿಸುವವನೂ ಆದ, ತ್ರ್ಯಂಬಕಂ= ತ್ರಿಮೂರ್ತಿಗಳಿಗೂ ಜನ್ಮದಾಯಕನಾದ ಪರಶಿವ ತತ್ತ್ವವನ್ನು, ಯಜಾಮಹೇ= ಪೂಜಿಸುತ್ತೇವೆ. ಬಂಧನಾತ್ = ತೊಟ್ಟಿನ ಬಂಧನದಿಂದ, ಉರ್ವಾರುಕಮಿವ= ಉರ್ವಾರುಕ ಫಲವು ಕಳಚಿಬೀಳುವ ಹಾಗೆ, ಮೃತ್ಯೋಃ ಬಂಧನಾತ್=ಮರಣ ಧರ್ಮವುಳ್ಳ ಸಂಸಾರ ಬಂಧನದಿಂದ, ಮುಕ್ಷೀಯ=ಬಿಡುಗಡೆ ಹೊಂದುವಂತಾಗಲಿ, ಮಾಮೃತಾತ್=ಅಮರತ್ವದಿಂದ ದೂರವಾಗದಿರಲಿ.

(ಸಾಯಣ ಭಾಷ್ಯದಲ್ಲಿ ತ್ರ್ಯಂಬಕನೆಂದರೆ ಬ್ರಹ್ಮ, ವಿಷ್ಣು, ರುದ್ರರೆಂಬ ತ್ರಿಮೂರ್ತಿಗಳಿಗೂ ಜನಕನೆಂದು ಹೇಳಿರುವುದು ಗಮನಾರ್ಹ) (ಮುಂದುವರಿದಿದೆ)

ಗಣಿಯದಗಣಿತ ಗುಣಕೆ ಮಂಗಳ
ಮಣಿಯು ! ಪರಮಾನಂದವೀಯುವೆ
ಖಣಿಯು ರವಿಶಶಿ ತಾರೆ ಬೆಳಗುವ ಬೆಳಗಿನಾಕರನು ।
ಹಣೆಯಗಣ್ಣುಳ್ಳಸಮ ನಯನನು
ಕುಣಿದು ತಾ ಪದ್ಮಾಸನಂ ಬಿಗಿ
ದೆಣಿಸುವೋಂಕಾರಂತರಾನಂದಾತಿಶಯದೊಳಗೆ ॥ ೭ ॥

ಭಾನುಕೋಟಿಯ ತೇಜನೋಜನು
ಭಾನುಮಂಡಲ ಕೋಟಿಚಂದ್ರಮ
ಮೇಣು ಸುಪ್ರಭೆಯುತನು ತಾನಾಧಾರ ಶಿವಗಣಕೆ ।

---

ಬಂಧನದಿಂದ ಮೋಕ್ಷವನ್ನು ಪಡೆಯುವುದಕ್ಕಾಗಿ ಆರ್ಯ ಋಷಿಯು ಮಾಡಿದ ಪ್ರಾರ್ಥನೆಯು ಈ ಮಂತ್ರದಲ್ಲಿ ಕಂಡುಬರುವುದು.

ಬಿಡುಗಡೆಯನ್ನು ಹೊಂದುವುದು ಬಲವಂತದಿಂದ ಜೀವನದ ಮಧ್ಯದಲ್ಲಿ ಅಲ್ಲ ; ಜೀವನ ನಡೆಸುವುದರಲ್ಲಿ ಬೇಸರವಿಲ್ಲ. ಹಣ್ಣು ಸಕಾಲದಲ್ಲಿ ತೊಟ್ಟು ಕಳಚಿ ಬೀಳುವಂತೆ ಸಂಸಾರದಲ್ಲಿ ಬೆಳೆದು ಬದುಕಿ ಹಣ್ಣಾದ ಮೇಲೆ ಅದರಿಂದ ಬಿಡುಗಡೆ ಹೊಂದಬೇಕೆಂಬ ಭಾವ ಸುಂದರವಾಗಿದೆ. ಬಿಡುಗಡೆ ಹೊಂದುವುದು ಕಾಯನ್ನು ಬಲವಂತದಿಂದ ಕಿತ್ತು, ಮತ್ತೆ ಹಾಗೆ ಬಲವಂತದಿಂದ ಹಣ್ಣುಮಾಡಿದಂತಲ್ಲ. ಜೀವಾತ್ಮವು ಸಂಸಾರವೃಕ್ಷದ ರಸವನ್ನು ಹೀರಿ ಹೂವಾಗಿ ಹೊರಬಂದು ಮಿಡಿಯಾಗಿ, ಹಿಡಿಗಾಯಾಗಿ, ಬಲಿತು ಬಣ್ಣವೇರಿ, ಸುಖದುಃಖವೆಂಬ ಮಳೆ ಬಿಸಲಿಗೆ ಸಿಲುಕಿ, ಬನ್ನಾಣದ ಬಿಗುಹು ಬಯಲಾಗಿ, ಪಕ್ವವಾಗಿ ಸುಮಧುರ ಶಾಂತಿ ರಸದಿಂದ ಪರಿಪೂರ್ಣವಾಗಿ, ತನ್ನನ್ನು ಬಂಧಿಸಿರುವ ಮೋಹವೆಂಬ ತೊಟ್ಟು ತಾನೇತಾನಾಗಿ ಕಳಚಿಹೋಗಲು, ಜನನಮರಣರೂಪವಾದ ಸಂಸಾರ ವೃಕ್ಷದಿಂದ ಬಿಡುಗಡೆ ಹೊಂದಿ ಪರಶಿವ ಬ್ರಹ್ಮಕ್ಕೆ ಅರ್ಪಣವಾಗಲು ಅರ್ಹವಾಗುವುದು— ಎಂಬುದು ಈ ಮಂತ್ರದ ಅಭಿಪ್ರಾಯ.

ತಪಸಾ ಚೀಯತೇ ಬ್ರಹ್ಮ ತತೋಽನ್ನಮಭಿಜಾಯತೇ ॥

—ಮುಂಡಕೋಪನಿಷತ್, ಪುಟ ೧೩, ೧೪

ಜ್ಞಾನ ಪಿಡಿಯುವ ಶುದ್ಧ ಸತ್ವಂ
ಜ್ಞಾನಿ ಜ್ಞಾನಕೆ ವಿಷಯ ಕಾರಣ
ಮೌನಿ ಮೌನಕೆ ಮೂಲವನುಪಮ ಮಹಿಮೆಗಾಸ್ಪದನು ॥ ೮ ॥

ಈಶ ಸಚ್ಚಿದ್ರೂಪ ಕರ್ಷಿಣಿ
ಯೀಶನಾನಂದರಸವರ್ಷಿಣಿ
ಯೀಶ ಸಾಕ್ಷಾತ್ತತ್ವರೂಪವ ಧರಿಸಿ ಮುದದಿಂದ ।
ಈಶ್ವರೇಚ್ಛಾಭಿಯಿಂಗಿತಾಂಗಿನಿ
ಯೀಶ್ವರೇಚ್ಛಾಮಾತ್ರದಿಂ ತಾ
ನೀಶ ಸಮಸಮ ರೂಪವಾಂತಳು ಲೋಕಕಾರಣಕೆ* ॥ ೯ ॥

ಶಕ್ತಿ ಸಹಿತಂ ಶಂಭು ಶಂಕರ
ಶಕ್ತ ಸರ್ವಕುಮಾದಿದೇವನು
ಮುಕ್ತಿನೀಡುವ ವಿಶ್ವನಾಯಕನೆಲ್ಲ ಬಲ್ಲವನು ।
ಯುಕ್ತಿಯಿಂದೀಜಗವ ಸೃಷ್ಟಿಪ
ಶಕ್ತಿಯುತನಂ ಪ್ರಥಮಪುತ್ರನ
ಭಕ್ತಿಭರಿತಂ ಬ್ರಹ್ಮದೇವನ ಮೊದಲು ಸೃಷ್ಟಿಸಿದ ॥ ೧೦ ॥

ಆದಿಗುರು ಶಿವ ಶಂಭು ಶಂಕರ
ನಾದಿಪುತ್ರಗೆ ಸಕಲ ವಿದ್ಯೆಯ
ನಾದರಂ ಮಿಗೆ ಬೋಧಿಸಿದನ್ಪೆ ಜ್ಞಾನಸಾಗರನು ।
ಮೋದಮುದಿಸಲು ದೇವದೇವನ
ಪಾದಪದ್ಮಕೆ ಮಣಿದ ಬೊಮ್ಮಂ
ಗಾದಿಸೃಷ್ಟಿಯ ಮಾಡುವತ್ಯುತ್ಸಾಹವೈತರಲು ॥ ೧೧ ॥

---

* "ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲ ಕ್ರಿಯಾಚ"

—ಶ್ವೇತಾಶ್ವತರೋಪನಿಷತ್

ಸೃಷ್ಟಿಕಾರ್ಯದ ಸಕಲ ವಿದ್ಯೆಯ
ನಿಷ್ಟಸಿದ್ಧಿಯನಿಂತು ಕರುಣಿಸಿ
ದೃಷ್ಟಿ ಮೂರುಂ ಮುಳುಗೆ ಮೌನದಿ ಶಾಂತನಾದ ಶಿವ ।
ದೃಷ್ಟಿ ಮಾಂದ್ಯವು ಮಾಯೆಯಾವರಿ
ಸಿಷ್ಟಕಾರ್ಯವೆ ಕಷ್ಟವಾಯ್ತೈ
ಸೃಷ್ಟಿಮಾಡುವ ಮಾರ್ಗಕಾಣದ ಬೊಮ್ಮದೇವಂಗೆ ॥ ೧೨ ॥

ಎರಗಿ ಬೇಡಿದನಖಿಲಲೋಕದ
ವಿರಚನೋಪಾಯವನು ಕರುಣಿಸೆ
ಮರಳಿ ಬೊಮ್ಮನು ಕಣ್ಣುಮೂರರ ದೇವದೇವನನು ।
ಪರಮ ಕರುಣಾಕರನೆ ಶಂಕರ
ಶರಣು ದೇವರದೇವ ಶಂಭೋ
ವಿರಚಬಲ್ಲವ ನೀನು ನನ್ನಂ ಸರ್ವಲೋಕವನು ॥ ೧೩ ॥

ಜಗದ ಸೃಷ್ಟಿಯ ಮಾಳ್ಪ ಕಲೆಯನು
ಜಗದಪತಿ ! ಶಿವ ! ಸರ್ವಶಕ್ತನೆ
ಯುಗಕತೀತನೆ ಸರ್ವಭರಿತನೆ ! ವರಸನಾತನನೆ ! ।
ಮಗನು ನಾನಹೆ ಕರುಣಿ ಬೋಧಿಸು
ಮುಗಿಯದಾಗಿದೆ ತಂತ್ರರೀತಿಯು
ಸಿಗದೆಹೋಗಿದೆ ರೂಪ ವೈವಿಧ್ಯತೆಯ ನೆಲೆನಿಲವು ॥ ೧೪ ॥

ಲೋಕಸೃಷ್ಟಿಯೊಳಾದ್ಯಕರ್ತನು
ಲೋಕನಾಯಕ ಶಂಭು ಬೊಮ್ಮಗೆ
ಲೋಕಸೃಷ್ಟಿಯ ಮರ್ಮ ಪೇಳಿದನೆಡೆಯ ಬಿಡಿವಂತೆ ।
ಲೋಕಸೃಷ್ಟಿಯ ಮರ್ಮವರಿತರು
ಲೋಕಸೃಷ್ಟಿಯ ಧೈರ್ಯಸಾಲದೆ
ಮೂಕಯಾತನೆಯಿಂದ ಬೊಮ್ಮನು ಮರಳಿನುತಿಗೈದ ॥ ೧೫ ॥

ದೇವದೇವನೆ ಪರಮಪೂಜ್ಯನೆ
ಯಾವ ವಿಶ್ವದ ಸೃಷ್ಟಿಗಾದ್ಯನೆ
ಭಾವಶುದ್ಧಿಯೊಳೆರಗಿ ಬೇಡುವೆ ಸಚ್ಚಿದಾನಂದ ।
ಭಾವಿಪಂತೆಯೆ ಪರಮ ಭಕ್ತರು
ಭಾವನಾತಿಗನಭವ ನಿರ್ಗುಣ
ನೀವೆ ವರವನು ಧರಿಸಿ ಮಂಗಳರೂಪ ಕರುಣದೊಳು ॥ ೧೬ ॥

ಅಲ್ಪಮತಿನಾನಲ್ಪಶಕ್ತನು
ಬಲ್ಲವನು ನೀ ಸರ್ವಶಕ್ತನು
ಕಲ್ಪನೆಗೆ ಮಿಗಿಲಾಯ್ತು ಪೇಳಿದುಪಾಯ ವೈಭವವು ।
ಕಲ್ಪಿಸುತ ನೀನೆನಗೆ ತೋರ್ಕೈ
ಕಲ್ಪನಾತಿಗ ಸೃಷ್ಟಿ ವೈಭವ
ಬಲ್ಲತೆರದೊಳು ನೋಡಿಮಾಡುವೆ ನಿನ್ನ ಕರುಣದೊಳು ॥ ೧೭ ॥

ಇಂತು ನುತಿಸಲು ವಿಶ್ವಯೋನಿಯು
ಕಂತುಹರ ಶಿವ ಶಂಭು ಶಂಕರ
ಸಂತಸಂ ಮಿಗೆ ಸೃಷ್ಟಿಮಾಡಿದ ತನಗೆ ಸರಿಸಮರ ।
ಇಂತು ಮಹಿಮಾನ್ವಿತ ಗಣಂಗಳ
ನಂತಕಾಂತಕ ಶಕ್ತಿಯುತರ
ನ್ನಂತೆ ಸೃಷ್ಟಿ ಸ್ಥಿತಿಯು ಲಯವನು ಮಾಳ್ಪ ರುದ್ರರನು ॥ ೧೮ ॥

ತನ್ನ ಸೃಷ್ಟಿಯ ಗಣಸಮೂಹ
ಕ್ಕುನ್ನತಪ್ರಾಕೃತದ ನಡೆವಳಿ
ಚನ್ನವರ್ಣಾಶ್ರಮದನುಕ್ರಮ ಪೇಳ್ದನಾ ಪ್ರಭುವು ।
ಮುನ್ನ ಶಿವನಿಂದಾದ ಸೃಷ್ಟಿಯು
ಮುನ್ನ ಮೊರೆದಾ ತತ್ತ್ವಬೋಧೆಯು
ಬೊಮ್ಮಗಾಯಿತು ಜಗದ ಸೃಷ್ಟಿಯ ಮಾಡೆ ಸಾಧ್ಯಶವು ॥ ೧೯ ॥

ಇಂತು ರೇಣುಕ ಗೀತೆ ಬೋಧಿಪು
ದೆಂತು ಶೂನ್ಯವೆ ಶಕ್ತಿಸಂಗದ
[1] ಲೋಂತು ಲೀಲಾಮಾತ್ರವಾವಿರ್ಭವಿಸಿತೆಂಬುದನು ।
ಅಂತೆ ವಿಧಿಯನು ಪಡೆದು ಸಾದೃಶ
ಕೆಂತು ಕೈಲಾಸವನು ಸೃಜಿಸಿ
ತ್ತಂತೆ ವಿಶ್ವದ ಸೃಷ್ಟಿಯೆಂಬೀ ಸೃಷ್ಟಿಮೂಲವನು ॥ ೨೦ ॥

ಎರಡನೆಯ ಸಂಧಿ ಸಂಪೂರ್ಣಂ

ಅಂತು ಸಂಧಿ ಮೂರಕ್ಕಂ ಪದನು ಅರುವತ್ತೆಂಟಕ್ಕಂ

ಮಂಗಳಮಸ್ತು

---

[1] "ಪ್ರಥಮದಲ್ಲಿ ಅಖಂಡಾದ್ವಯ ಅನುಪಮ ನಿರವಯ ನಿರಂಜನ ಸರ್ವಶೂನ್ಯವನೊಳಗೊಂಡ ಸಚ್ಚಿದಾನಂದ ನಿತ್ಯಪರಿಪೂರ್ಣವಪ್ಪ ನಿಃಕಲ ಲಿಂಗವು ಧ್ಯಾನಪೂಜೆಗಳಿಲ್ಲದೆ, ನಿರವಯದಲ್ಲಿ ಬಯಲಿಗನಾಗಿ ಇರಬಾರದೆಂದು ತನ್ನ ಸ್ವೇಚ್ಛಾವಿಲಾಸದ ನೆನಹಿನಿಂದ ತನ್ನ ಚಿತ್‌ಪ್ರಭಾ ಸಾಮರ್ಥ್ಯ ಶಕ್ತಿಯ ಮುಂದುಗೊಂಡು, ಅನಂತಕೋಟಿ ಬ್ರಹ್ಮಾಂಡಗಳನ್ನು, ಅನಂತಕೋಟಿ ಆತ್ಮರುಗಳನ್ನು ತನ್ನಲ್ಲಿಯೇ ಪುಟ್ಟಿಸಿ, ಆತ್ಮರುಗಳಿಗೆ ಪಂಚವಿಂಶತಿ ತತ್ವಂಗಳನ್ನು ಸಂಬಂಧಿಸಿದಲ್ಲಿ, ಆ ಆತ್ಮರುಗಳು ದೇಹೋಹಮೆಂದು ಜಾತಿ. ವರ್ಣಾಶ್ರಮ, ಕುಲ ಗೋತ್ರ, ನಾಮಸೀಮೆ, ಸುಖದುಃಖ ಬಂಧಮೋಕ್ಷ ಇವ್ರಗಳಿಗೊಳಗಾಗಿ ತಮ್ಮ ನಿಜ ಸ್ವರೂಪವ ಮರೆದ ಆತ್ಮರುಗಳ ಕಾಲ ಕಾಮರಿಗೆ ವಶಮಾಡಿ ಅವರ ಸುಖದುಃಖ ಬಂಧ ಮೋಕ್ಷಗಳ ಹೊದ್ದದೆ ಯಂತ್ರವಾಹಕನಾಗಿ ಆಡಿಸುತಿರ್ಪನಾ ಶಿವಲಿಂಗವು."

"ರುದ್ರಮುಖದಲ್ಲಿ, ವಿಷ್ಣು ಭುಜದಲ್ಲಿ, ಜಂಘೆಯಲ್ಲಿ ಅಜನಜನನವು; ಇಂದ್ರ ಪಾದದಲ್ಲಿ ಚಂದ್ರಮನದಲ್ಲಿ, ಚಕ್ಷುವಿನಲ್ಲಿ ಸೂರ್ಯಜನನವು; ನೊಸಲಲಗ್ನಿಯು, ಪ್ರಾಣದಲ್ಲಿ ವಾಯು, ನಾಭಿಯಲ್ಲಿ ಅಂತರಿಕ್ಷ ಜನನವು; ಶಿರದಲುದಯಿಸಿತ್ತೀಸಕೋಟಿ ದೇವರ್ಕಳು; ಪಾದತಳದಲ್ಲಿ ಭೂಮಿ ಜನನವು, ಶ್ರೋತ್ರದಲ್ಲಿ ದಶದಿಕ್ಕು, ಜಗವನಿಕ್ಷೇಪಿಸಿದ ಕುಕ್ಷಿಯೊಳಕ್ಷಯನಗಣಿತ ನಿಮ; ಸಾಸಿರ ಮುಖ, ಸಾಸಿರ ಕಣ್ಣು, ಸಾಸಿರ ಭುಜ, ಸಾಸಿರ ಪಾದ' ಸಾಸಿರ ಸಮ್ಮಹಿತ ನಮ್ಮ ಕೂಡಲ ಸಂಗಮ ದೇವರು."

—ಭಕ್ತಿ ಭಂಡಾರಿ ಬಸವಣ್ಣ

# ಮೂರನೆಯ ಸಂಧಿ

## ಕೈಲಾಸ ವರ್ಣನೆ

ಸೂಚನೆ :—ಧವಳಶೈಲದಿ ದೇವಸಭೆಯೊಳು
ಭುವಿಯಭಾರವ ಕಳೆವ ಗುರುವಿಗೆ
ಶಿವನು ವೀಳ್ಯವನೀಯೆ ಪುಳುಕಿತವಾಯ್ತು ಕೈಲಾಸ ॥

ಧವಳಶೈಲವು ರಜತಶಿಲೆಯೊಳು
ಶಿವನ ವಾಮಾಂಕದೊಳು ಶೋಭಿಪ
ಶಿವೆಯ ಚಾರಕ ಯಕ್ಷ ಗಂಧರ್ವಾದಿ ಸತಿಯರ್ಗೆ ।
ಹವಳ ಮುತ್ತಿನ ಕೋದ ಮುಕುರವು
ದವರ ರಾಸಕ್ರೀಡೆಯಂಗಣ
ದಿವಿಜರೂರಿಗೆ ಪರಮ ಪೂಜ್ಯಮದಾಗಿ ಶೋಭಿಪುದು ॥ ೧ ॥

ಬೇವು ಬಕುಲಮಶೋಕ ಮಂದರ
ಮಾವು ಬೆಳವಲ ಬಿಲ್ವವೃಕ್ಷವು
ಹಾವಿನಂದದಲಪ್ಪಿ ಹಬ್ಬಿಹ ಮೊಲ್ಲೆ ಜಾಜಿಗಳು ।
ಜಾವಜಾವಕು ಕಂಪು ಬೀರುವ
ಪೂವ ಮುತ್ತಿಹ ಭೃಂಗ ಸಂಕುಲ
ಹೇವವಿಲ್ಲದೆ ಬಂಡಿನಾಸೆಗೆ ಮೊರೆವ ವೋಂಕಾರ ॥ ೨ ॥

ಕೆಂಪು ಸಂಪಿಗೆ ದಾಸವಾಳದ
ಕಂಪು ಧೂಳಲಿ ಮಿಂದ ಮಾರುತ
ನಿಂಪುಸೂಸುವ ಮತ್ತಕೋಕಿಲ ಮಧುರವಾಣಿಯನು ।
ತಂಪುಮಾಡದೆ ಪಾಡ್ವ ಕಿನ್ನರಿ
ಝುಂಪೆತಾಳದ ಗಾನಮಾಧುರಿ
ಪೆಂಪು ಮಾರ್ಧನಿಗೊಡುವ ಗಹ್ವರಕೊಯ್ದು ಮುಟ್ಟಿಸುವ ॥ ೪ ॥

ಧ್ಯಾನ ಧಾರಣ ಮೌನಿ ಮುಖ್ಯ
ಪ್ರಾಣಯಾಮದೆ ಬಂಧಿಯಾಗಲು
ಜಾಣ ಮಾರುತನಂಜಿ ಸಾನಂದಾದಿ ಮುನಿಗಣಕೆ ।
ಪ್ರಾಣದೇವರು ಕಂಪಿನಿಂಪಿನ
ಕಾಣಿಕೆಯ ತಾನಂತು ಸಲಿಸಿ
ಪ್ರಾಣಭಿಕ್ಷೆಯ ಬೇಡುತಿಹನಾ ಗಿರಿಯಗಹ್ವರದಿ ॥ ೪ ॥

ಮಿಸುಪ ಹೊಂದಾವರೆಯ ಸೂಸುವ
ರಸದಿ ತುಂಬಿದ ಸರಸಿ ಮಾನಸ
ದೆಸೆವ ತೆರೆಯಂ ತೀರನಾಗಿಸಿದರಸ ಹಂಸಾಳಿ ।
ಬಿಸಜನೇತ್ರೆಯು ಕುಂಭಪೂರದ
ಲೆಸೆವ ಗಂಗಾಜಲವ ಪೂಜೆಗೆ
ರಸನೆ ಮಂತ್ರವ ನುಡಿಸೆ ನಡೆವಳು ಶಿವನ ಮಂದಿರಕೆ ॥ ೫ ॥

ಉನ್ನತೋನ್ನತ ರನ್ನಗಂಭದ
ಪೊನ್ನಮಂದಿರ ಮಹದಬಾಗಿಲು
ತನ್ನುಭಯದೆಶೆಯಲ್ಲಿ ರಾಜಿಪ ಶಂಖಪದ್ಮನಿಧಿ ।
ಮುನ್ನ ಮಾಡದ ಪಂಚಗಳಸದಿ
ಚನ್ನ ಕೆತ್ತನೆ ಸಾಲಭಂಜಿಕೆ
ಪೊನ್ನಮಾಣಿಕಮಣಿಯ ತೋರಣ ಕಳೆಯಿನೆಸೆಯುವುದು ॥ ೬ ॥

ತೋರ ಮುತ್ತಿನಹಾರವಲ್ಲಿಯ
ತಾರೆ ನೀಹಾರಿಕೆಯು ರವಿ ಶಶಿ
ಚಾರು ನಿರ್ಮಲ ವರವಿತಾನವದೂರ್ಧ್ವದಾಕಾಶ ।
ತೋರದಿಹುದೇ ಭಿತ್ತಿ ದಿಗ್ಗಜ
ವೀರ ಶಿವಗಣ ಕುಣಿವ ಮಂಟಪ
ವಾರುಮರಿಯದ ನಾಟ್ಯರಾಜನ ಹೃದಯಮಂದಿರವು ॥ ೭ ॥

ಉನ್ನತೋಂಕಾರುಗ್ಗಡಣೆಯೊಳು
ಚೆನ್ನಪರಶಿವನಂಘ್ರಿಗೆರಗಿದ
ಮಾನ್ಯದೇವರ ಜಟೆಯ ಮಕುಟದೆ ಮುಡಿದ ಮಂದಾರ ।
ತನ್ನ ಸುಮಧುರ ಕಂಪ ಬೀರಿರ
ಲುನ್ನತೋನ್ನತ ಸಿಂಹ ಪೀಠದಿ
ಚೆನ್ನಪಾರ್ವತಿ ತೊಡೆಯನೇರಲು ಮೆರೆದ ಪರಮೇಶ ॥ ೮ ॥

ವೇದ ಕಮಲಾರಣ್ಯದೆಸೆಯುವ
ಮೋದವೀಯುವ ರಾಜಹಂಸನು
ಸಾದರಂ ಮಿಗೆ ಸರ್ವಮಂಗಲ ಸತಿಯ ಸೌಭಾಗ್ಯಂ ।
ಆದಿಮಂತ್ರದ ಮೂಲ ಓಂಕಾ
ರ್ವೋದುವವರಿಗೆ ತಾನುದಾರಿಯು
ಸೌಧತಾ ಸೌಭಾಗ್ಯ ಮಂಗಳದಾದಿ ಗುಣಗಣಕೆ ॥ ೯ ॥

ಹುಟ್ಟುಸಾವಿನ ಚಕ್ರಗತಿಯಲಿ
ಕಟ್ಟ ಮೂರ್ಛಿತ ಜೀವಕೋಟಿಗೆ
ನೆಟ್ಟನವ್ಯಯ ನಿತ್ಯನಿರ್ಮಲ ಚಿರದ ನಿಲುಗಡೆಯು ।
ದಿಟ್ಟ ಮೂರಲಿ ದಿವ್ಯ ಕಳೆಯ
ನ್ನಿಟ್ಟು ಮೆರೆಯುವ ದೇವದೇವನು
ಸುಟ್ಟುರುಬುವಂ ತ್ರಿಪುರದಂತೆಯೆ ಕರ್ಮಕೋಟಲೆಯಂ ॥ ೧೦ ॥

ಚಿರದ ನಂದನ ಪುಷ್ಪದೆದೆಯಿಂ
ಪರಮ ಮಂಗಳ ಮಧುವನೀಂಟುವ
ಪರಮ ಪರತರನದ್ವಿತೀಯ[1]ದ ಭೃಂಗ ಮಧುಮತ್ತ ।

---

[1] ಏಕೋಹಿರುದ್ರೋನದ್ವಿತೀಯಾಯತಸ್ಥುರ್ಯ ಇಮಾಲ್ಲೋಕಾನೀಶತ ಈಶನೀಭಿಃ ಪ್ರತ್ಯಜ್ ಜನಾಸ್ತಿಷ್ಠತಿ ಸಂಚುಕೋಚಾಂತ ಕಾಲೇ ಸಂಸೃಜ್ಯ ವಿಶ್ವಾಭುವನಾನಿಗೋಪಾಃ।

—ಶ್ವೇತಾಶ್ವತರ ಉಪನಿಷತ್.

ಚಿರಕು ಶಕ್ತಿಯ ಮಧುರ ಸಂಗದಿ
ಪೊರೆವ ಲೋಕತ್ರಯವ ನೆಲ್ಲವು
ಮರಳಿ ತಾನೇ ಲಯದಲಡಗಿಸಿಕೊಳುವನೆಲ್ಲವನು[1] ॥ ೧೧ ॥

ಅಂಡ ಪಿಂಡಾಂಡಂ ಬ್ರಹ್ಮಾಂಡವ[2]
ನಂಡಲಯದಂತೊಂದುಮಾಡುವ
ಪಂಡಿತೋತ್ತಮ ಪಂಚಮುಖನಾ ಪಾರ್ವತೀಪತಿಯು ।
ಉಂಡು ನಂಜನು ನೀಲಕಂಠನು
ಚಂಡ ದೈತ್ಯರ ಶಿರವ ಕಡಿದಾ
ಚಂಡಿ ಚಾಮುಂಡಾಂಬೆಯೊಲಿದಿಹ ನಿರುಪಮಾಧಿಕನು ॥ ೧೨ ॥

---

ಕಂದ ॥ ಒರ್ವನದಲ್ ರುದ್ರಂ ಪೆರ । ತೊರ್ವಂ ದೇವಂಸಟೆ ಪೊರೆವಂ ಶಕ್ತಿಗಳಿಂ ॥
ಸರ್ವ ಜಗತ್ತಿದನಾಳ್ವಂ । ಸರ್ವಾಂತರ್ಯಾಮಿ ಸೃಷ್ಟಿಲಯಗಳ ಕರ್ತಂ ॥

ಅರ್ಥ:— ಯಃ-ಯಾರು, ಇಮಾನ್‌ಲೋಕಾನ್–ಈ ಲೋಕಗಳನ್ನು, ಈಶನೀಭಿಃ–ತನ್ನ ಶಕ್ತಿಗಳಿಂದ, ಈಶತೇ–ಆಳುತ್ತಾನೋ, ರುದ್ರಃ–ಆ ರುದ್ರನು, ಏಕಃ–ಅದ್ವಿತೀಯನು, ನದ್ವಿತೀಯಾಯತಸ್ಥುಃ–ಎರಡನೆಯವನು ಯಾರೂ ಇಲ್ಲ, ಜನಾಃ–ಎಲ್ಲ ಮನುಷ್ಯರೇ ಪ್ರತ್ಯಙ್‌ತಿಷ್ಠತಿ–ಎಲ್ಲರೊಳಗೆ ಅಂತರ್ಯಾಮಿಯಾಗಿದ್ದಾನೆ, ವಿಶ್ವಾ ಭುವನಾನಿ–ಎಲ್ಲಾ ಲೋಕಗಳನ್ನು, ಸಂಸೃಜ್ಯ–ಸೃಷ್ಟಿಸಿ, ಗೋಪಾಃ–ಪಾಲಕನೂ ಆಗಿದ್ದಾನೆ, ಅಂತಕಾಲೇ–ಪ್ರಲಯ ಕಾಲದಲ್ಲಿ, ಸಂಚುಕೋಚ–ತನ್ನೊಳಗೇಲಯಗೊಳಿಸಿಕೊಳ್ಳುತ್ತಾನೆ.

(ವಚನೋಪನಿಷತ್ ಪು. ೩೭)

[1] (i) ಯತೋವಾ ಇಮಾನಿ ಭೂತಾನಿ ಜಾಯಂತೇ, ಯೇನ ಜಾತಾನಿ ಜೀವಂತಿ
ಯತ್ ಪ್ರಯಂತ್ಯಭಿಸಂವಿಶಂತಿ ಯದ್‌ವಿಜಿಜ್ಞಾಸ ಸ್ವತದ್ ಬ್ರಹ್ಮೇತಿ '
—ಯಾವುದರ ಆಧಾರದಿಂದ ಜೀವಿಸುವುವೋ ಯಾವುದರ ಕಡೆಗೆ ಹೋಗಿ ಅದರಲ್ಲಿ ಲಯವಾಗುವುವೋ ಅದೇ ಬ್ರಹ್ಮವೆಂದು ವಿಚಾರಮಾಡಬೇಕೆಂದು ತೈತ್ತಿರೀಯ ಉಪನಿಷತ್ತಿನಲ್ಲಿ ಹೇಳಿದೆ.

(ii) ಉಮೈವಹಿಮವತೋದುಹಿತಾ ಹೈಮವತೀ ನಿತ್ಯಮೇವ ಸರ್ವಜ್ಞೇನೇಶ್ವರೇಣ ಸಹವರ್ತತ ಇತಿ ಜ್ಞಾತುಂ ಸಮರ್ಥಾ, ಇತಿಕೃತಾಂ ಉಪಜಗಾಮ "

—ಕೇನೋಪನಿಷತ್ ಶ್ರೀ ಶಂಕರಭಾಷ್ಯ.

[2] "ಪಿಂಡ ಬ್ರಹ್ಮಾಂಡ ಯೋರೈಕ್ಯಂ"—ಎಂಬ ಸಿದ್ಧಾಂತ ಬ್ರಹ್ಮಾಂಡದಲ್ಲಿರುವುದೆಲ್ಲವೂ ಪಿಂಡಾಂಡದಲ್ಲಿರುವುದು. ಬ್ರಹ್ಮಾಂಡವನ್ನೆಲ್ಲ ವ್ಯಾಪಿಸಿಕೊಂಡಿರುವ ಶಕ್ತಿಯು ಪಿಂಡಾಂಡದಲ್ಲಿ ಕುಂಡಲಿನೀ ರೂಪದಲ್ಲಿರುವಳು.

ಹತ್ತುಸಾವಿರ ಚಂದ್ರಕಳೆಯನು
ಪತ್ತುಪಟ್ಟುಂ ಮೀರ್ವತೇಜನು
ಸುತ್ತುವರಿದಾದೇವ ಮಕುಟದ ರತ್ನಕಾಂತಿಯಲಿ |
ಚಿತ್ರಚಿತ್ರಾಂಬರದ ಶೋಭೆಯು
ಹೊತ್ತು ಜಟೆಯಲಿ ಗಂಗೆ ಮೆರೆಸಿಹ
ಮತ್ತೆ ಬಾಲೇಂದುಧರ ಭೂಷಿತನಮಲ ವಿಭೂತಿ || ೧೩ ||

ತೋರಮುತ್ತಿನ ಹಾರದಂದದ
ವೀರಭಕ್ತರ ರುಂಡಮಾಲೆಯು
ಚಾರುಚಂದ್ರನ ಪೂರ್ಣಕಾಂತಿಯಮೀರ್ವಮುಖತೇಜಂ |
ವೀರ ನಂದಿಯ ವೇಗವಾಹನ
ವೇರಿ ಬರುತಿಹ ಭಕ್ತಬಂಧುವು
ವೀರಪುಂಗವ ಯೋಗಿರಾಜನು ಕರುಣ ಶಂಕರನು || ೧೪ ||

ಉದಯ ಸೂರ್ಯನ ಕರುಣ. ಕಿರಣವು
ಮುದದಿ ಬಿರಿಸಿದ ಕಮಲದೋಪರಿ
ಮಧುರಚನ್ನನ ನಯನಮೂರುಂ ಮುಗುಳು ನಗುತಿರಲು |
ಅಧರ ಪಲ್ಲವದಿಂದಲತಿಮೃದು
ಮಧುರವಾಣಿಯು ಕೇಳ್ದ ಸಭೆ ತಾ
ಸುಧೆಯು ನೀಂಟಿದವೋಲು ನಿಬ್ಬೆರಗಾಗಿ ಮೆರೆದಿಹುದು || ೧೫ ||

ಕಾಲಕೂಟದ ವಿಷವನೀಂಟಿದ
ನೀಲಕಂಠನು ಬಾಲಚಂದ್ರನ
ಶೀಳೆಗಂಗೆಯ ಮುಡಿದ ಕೆಂಜೆಡೆ, ಮಕರ ಕುಂಡಲವು |
ಲೀಲೆಯಾಡಿರೆ ಶಿವ ಕಪೋಲದಿ
ಬಾಲೆಯುಮೆಯಾ ಕಣ್ಣಲಾಡಿದ
ಮೂಲವಿಗ್ರಹ ಶೂಲಪಾಣಿಯು ಚಲ್ವಿನಾಕರನು || ೧೬ ||

ಕರದಕಂಕಣ ಭುಜದ ಭೂಷಣ
ಹರಿಸೆ ಮಿಂಚಿನ ಕಿರಣ ಮಣಿಯಿಂ
ಸುರರ ಮಂದರ ಶಾಖೆಯಂತಿರೆ ನಾಲ್ಕು ಬಾಹುಗಳು।
ಗಿರಿಜೆ ಕುಚದಾಲಿಂಗನಾರ್ಥಿಯ
ಸುರಪ ತೋಳಿನ ಸಾಲು ರಾಜಿಸೆ
ಮೆರೆದ ಶಂಕರ ಸೋಮಶೇಖರ ಶಿವೆ ಮನೋಹರನು ॥ ೧೭ ॥

ಹೊನ್ನ ಖಚಿತಂ ಬ್ರಹ್ಮಸೂತ್ರವು
ಚನ್ನಕಾಯಕ್ಕೊಪ್ಪಿದಂತಿರೆ
ಚಿನ್ಮಯಂ ಶಿವನುಟ್ಟ ಕಾವಿಯವಸ್ತ್ರ ಶೋಭಿತನು।
ತನ್ನ ನಾಭಿಸ್ಥಾನಲಂಬಿತ
ಚನ್ನಮೌಕ್ತಿಕಮಾಲೆ ಗಂಗೆಯೆ
ತನ್ನ ಮೌಲಿಯಿನಿಳಿದು ಬಂದಿರುವಂತೆ ಮೆರೆಸಿಹನು ॥ ೧೮ ॥

ಶರದಚಂದ್ರನ ಬೆಳಗಿನಂತಿರೆ
ಹರನು ಕುಳಿತಾ ಪೀಠ ಕಾಂತಿಯು
ಚರಣನೂಪುರ ರತ್ನಕಾಂತಿಯ ಪಾದಪಲ್ಲವವು।
ಶರಣ ಶಿವಗಣ ಹೃದಯ ತುಂಬಿರೆ
ವಿರಜೆ ಗೌರೀವರನು ಮೆರೆದನು
ಸುರರ ಸಭೆಯಲಿ ಪರಮ ಪೂಜ್ಯನು ಲೋಕ ಗುರು ಶಂಭು ॥ ೧೯ ॥

ಪ್ರೇಮವೇಷಿಣಿ ಕಾಮರೂಪಿಣಿ
ವಾಮದೇವನ ವಾಮಪಾರ್ಶ್ವಿನಿ
ಸೋಮನಾಥನ ಸೃಷ್ಟಿಕಾರ್ಯದಿ ನಿರುತ ಭಾಗಿನಿಯು।
ಸ್ವಾಮಿಭಕ್ತರ್ಗಮೃತದಾಯಿನಿ
ತಾಮಸಾಧಮ ರಾಕ್ಷಸಾಂತಿನಿ
ಸಾಮವೇದಾಗಮಗಳಾದಿಯ ಜ್ಞಾನದಾಯಿನಿಯು ॥ ೨೦ ॥

ವ್ಯಕ್ತ ಬಹುವಿಧ ರೂಪಧಾರಿಣಿ
ಯುಕ್ತದಿಚ್ಛಾಭಜ್ಞಾನ ಕ್ರಿಯೆಯಿಂ
ಮುಕ್ತಿದಾಯಕದಾತ್ಮವಿದ್ಯಾ ಜ್ಞಾನದಾಯಿನಿಯು ।
ಮುಕ್ತಿಮಂದಿರದಾದಿ ದೇವನ
ಭಕ್ತವತ್ಸಲ ಭಾವನಾತ್ಮನ
ಶಕ್ತಿದೇವಿಯು ನಿತ್ಯನಿಯಮದಿ ಕೂಡಿಕೊಂಡಿಹಳು ॥ ೨೧ ॥

ಮುಡಿದ ಮಲ್ಲಿಗೆ ಕುಸುಮ ಕಂಪಿಗೆ
ನುಡಿಯುವೋಂಝೋಂಕೃತಿಯ ನಾದದೊ
ಳಿಡಿದ ಮುಕ್ತಿಯ ಭೃಂಗಸಂಕುಲ ಮಾಲಲೋಲೆಯುತಾ ।
ಬಿಡದೆ ಕಾಡುವ ವಿಷಮ ಸಂಸಾ
ರ್ಸುಡುವ ಕಾಡಿನ ಕಿಚ್ಚಿನಂದದಿ
ಮೃಡನ ಮಂಗಳದಂಕದಾಸನದಲ್ಲಿ ಮೆರೆದಿಹಳು ॥ ೨೨ ॥

ಪದ್ಮಸಂಭವ ರಚಿಸೆ ದೇವಿಯ
ಪದ್ಮಮುಖದಿಂ ಪೂರ್ಣಚಂದ್ರನ
ಪದ್ಮನಾಸಿಕ ಮುಕುರ ಮುತ್ತಿನ ತಾರಗಣಗಳನು ।
ಪದ್ಮ ನಯನಂ ಮುಗುಳುನಗೆಯಿಂ
ನಿದ್ದೆ ಜಾಗರ ಜಗಕತೀತನ
ಗೆದ್ದವೋಲಿರೆ ಸರ್ವಮಂಗಳೆ ಮೆರೆದಳಂಕದಲಿ ॥ ೨೩ ॥

ತನ್ನ ಶಿವಪದವನ್ನು ಪೂಜಿಸೆ
ರನ್ನೆ ಶಿವೆತಾ ಮುನ್ನ ಮುಡಿಸಿದ
ಚನ್ನ ನೈದಿಲೆ ಪುಷ್ಪವೆರಡೆಂಬಂತೆ ಶೋಭಿಸಿದ ।
ಕನ್ಯೆ ನಯನದ ಹೊಳೆವ ಕಾಂತಿಯು
ರನ್ನದೋಲೆಯ ರಂಗಮಂಟಪ
ವನ್ನು ಬೆಳಗುವ ನಂದದೀಪದವೋಲು ರಾಜಿಪುದು ॥ ೨೪ ॥

ಕುಸುಮಶರತಾ ತನ್ನ ಶರವನು
ಕಸುವಿನಿಂದೆಸೆದಾಗ ಬಾಗಿದ
ಕುಸುಮದಂಡವೆ ಬಾಗಿದುಬ್ಬಿನ ಲಾಸ್ಯವಿಭ್ರಮವು ।
ಎಸೆವ ಮುತ್ತಗ ಕುಸುಮ ಕಾಂತಿಯ
ತುಸುವೆ ನಗುವಾ ತೊಂಡೆ ತುಟಿಯೊಳು
ಮಿಸುಪ ಧವಳದ ದಂತಪಂಕ್ತಿಯ ಕಾಂತಿ ಚಿಮ್ಮುವುದು ॥ ೨೫ ॥

ನೀಳ ಕೋಮಲ ಬಾಹುಯುಗಳವು
ನೀಲಕೋತ್ಪಲ ಮಾಲೆಯಂತಿರೆ
ಶೀಲೆ ಕಂಠವನಂಗ ಶಂಖಧ್ವನಿಯ ಮೀರಿರಲು ।
ಕಾಲ ನಿಯತಿಯ ನಿಯಮವಿರದಿಹ
ಬಾಲ ಯೌವನ ಗೌರಕಾಯದಿ
ಶಾಲೆ ಬಿಗಿದಿಹ ಕಠಿಣ ಕುಚಗಳಮೃತದ ಕುಂಭಗಳು ॥ ೨೬ ॥

ಕಮಲವಳ್ಳಿಯ ತಂತುವೋಲಿಹ
ವಿಮಲದಂಗದ ಮಧ್ಯೆಯುತೆಗಂ
ಕಮಲ ಜಘನಂ ರಾಸಕೇಳಿಯ ನದಿಯ ದಂಡೆಗಳು ।
ಅಮರದೊಲುವಿನ ಹೊನಲಹೊಳೆಯೋ
ಆಮಮ ಶಂಕರನೀಜು ಕಲಿತನು
ಮಿಮಲ ದೊಲವಿಗೆ ಸರ್ವಲೋಕವೆ ಮಾರುಪೋಗ್ವಂತೆ ॥ ೨೭ ॥

ಶಾಮಲಾಂಬರ ವಸ್ತ್ರ ಶೋಭೆಯು
ಕಾಮಹರ ನಿಶ್ಶೀಮ ಶಿವನಿಗೆ
ಕಾಮಕೇಳೋದ್ಯಾನ ರಂಭಾಸ್ತಂಭ ತೊಡೆಯುತೆಯು ।
ಪಾವನಾತ್ಮೆಯ ಪಾದಕಮಲವು
ಮಾವು ಚೈತ್ರದಿ ಚಿಗುರಿದಂತಿರೆ
ಸಾವಯುವದಾಲಂಕೃತೆಯುತಾ ಮಂಗಳಾಂಗಿನಿಯು ॥ ೨೮ ॥

ಕುರ್ರುಳು ತಡೆಯಾ ಸ್ವರ್ಣಸರಪಳಿ
ಹರಳಿನೋಲೆಯು ವಜ್ರನಾಗರ
ಕೊರಳಹಾರದ ಗೆಜ್ಜೆ ತೀಕಿಯ ನಾಗಮಣಿ ಮಾಲೆ ।
ಕರದಕಂಕಣ ತೋಳಬಂದಿಯು
ಬೆರಳಿನುಂಗುರ ಕಾಲನೂಪುರ
ಧರಿಸಿ ಮಲ್ಲಿಗೆ ಮರುಗ ಮುಡಿದಿಹ ಮಾತೆ ಮಂಗಳೆಯು ॥ ೩೯ ॥

ನೋಡಿದರಿಗಾನಂದ ನೀಡುವ
ಬೇಡಿದರಿ ಸೌಭಾಗ್ಯವೀಯುವ
ಕಾಡಿ ಬೇಡಲಮೃತದ ವಿದ್ಯೆಯನಿತ್ತು ರಕ್ಷಿಸುವ ।
ಕೂಡೆ ಶಂಕರನಂಕವೇರಿಡ
ನಾಡೆ ವಿಶ್ವದಜಾಲೆ ಲೋಲೆಯಲ
ನೋಡಿ ಗಣಪತಿ ಭಕ್ತಿಭಾವದಿ ತುಂಬಿ ತುಳುಕಿದುದು ॥ ೪೦ ॥

ಕಂತುಪಿತನಿಂದೋಡಿ ಲಕ್ಷ್ಮಿಯು
ಕಂತುಹರನೋಲಗದಿ ಪಿಡಿದಳು
ನಿಂತ ಮನದಿಂ ಪೂರ್ಣಚಂದ್ರನ ಪೋಲ್ವ ಬೆಳ್ಗೊಡೆಯ ।
ತಂತಿವಾದ್ಯದ ಮಧುರ ಗಾನವ
ನಂತ ಭಾವವಮಿಡಿಯೆ ಶಾರದೆ
ಯಂತು ಕುಣಿಸಿರೆ ಭಕ್ತಿಗೀತೆಯ ಹಾಡಿ ವಿಧಿಯನ್ನೆ ॥ ೪೧ ॥

ಎಣಿಸೆ ನಾಲಿಗೆ ವೇದ ಮಂತ್ರವ
ಝಣಿರ ಝಣಿರೆನೆ ಕೈಯ್ಯಕಂಕಣ
ಮಣಿದುಪನಿಷದ್ವನ್ಯತಾನೋಂಕಾರ ಪಂಕದಲಿ ।
ಗಣನೆಗತಿಶಯ ಶಿವನ ಕೀರ್ತಿಯ
ಸೆಣಸಿ ಪಾಡುತ ಬೀಸುತಿಹಳೈ
ಮಣಿದು ಮೂಜಗ ಪುಣ್ಯಗತಿಯನು ಪಡೆಯಲೆಂಬಂತೆ ॥ ೪೨ ॥

ರನ್ನ ಕಂಕಣ ಝುಣರುಝುಣರೆನೆ
ರನ್ನಪಿಡಿಯಿನ ಬಿಳಿಯ ಚಾಮರ
ವನ್ನು ಚಂದದಿ ಬೀಸುತಿಹರ್ಕೈ ದೇವಕನ್ಯೆಯರು ।
ಮಿನ್ನುತಾಡುವ ಚಾಮರಾಳಿಯೆ
ಚನ್ನಶಿವಮುಖ ಪೂರ್ಣತೇಜದ
ಪೊನ್ನಪಂಕಜವನ್ನು ಮುತ್ತಿದ ರಾಜಹಂಸಾಳಿ ॥ ೩೩ ॥

ಭಕ್ತ ವಿಭೂತಿಯನು ಮಂತ್ರಿಸಿ
ಮುಕ್ತಮಸ್ತಕಕಿಡುವ ತೆರದೊಳು
ಭಕ್ತಿಯಂಗನೆ ಮುಕ್ತಿಚೂಡಾಮಣಿಯ ಮುಡಿದಂತೆ ।
ಮುಕ್ತಿ ಮಂತ್ರದ ಘೋಷ ಮಾಡುತ
ಭಕ್ತಿಪೂರ್ವಕ ಸೇವೆಗೈವರು
ಭಕ್ತವೇದರು ಸಾಮಗಾನದ ವೇದಪಾಠದೊಳು ॥ ೩೪ ॥

ಅಂತೆ ನಿಶಿತಾಸ್ತ್ರವನು ಧರಿಸಿದ
ರಂತೆ ಶಾಂತಾತೀತ ಪದಯುತ
ರಂತೆ ಭೈರವ ಭಾವಭೂಷಣವಾಂತ ಭಾಮೆಯರು ।
ಸಂತತಂ ಮಿಗೆ ಸೇವೆಮಾಡುತ
ಲಿಂತು ವೇಷಾಂತರದಿ ಮೆರೆದಿಹ
ರಂತು ಶಿವನೇ ಸೇವ್ಯ ಸೇವಕನಾದ ತೆರದಂತೆ ॥ ೩೫ ॥

ಲೋಕಕೇಕ ಶಿಖಂಡಿ ಡಾಂಭಿಕ
ನೇಕನೇತ್ರನನಂತ ಸೂಕ್ಷ್ಮ
ನ್ನೇಕರುದ್ರ ಶಿವೋತ್ತಮ ಶ್ರೀಕಂಠಮೂರ್ತಿಗಳು ।
ಲೋಕವಂದ್ಯತ್ರಯರು ಶಿವನಂ
ಸಾಕುಸಾಕೆನೆ ಸೇವೆಸಲಿಸಿಹ
ರೇಕನಿಷ್ಠಾದಷ್ಟವಿದ್ಯೇಶ್ವರರು ವಿನಯದೊಳು ॥ ೩೬ ॥

ಕಾಲಯಮು ವರನಂದಿ ಭೃಂಗಿ ಕ
ಪಾಲಿ ಚಂಡನು ಪುಷ್ಪದಂತನು
ಶೂಲಪಾಣಿಯು ವೀರಭದ್ರಕ ಘಂಟಕರ್ಣಾರ್ಯ |
ಫಾಲನೇತ್ರನು ಕಾಲಕಾಲನು
ಮೂಲಸತ್ತ್ವ ಪ್ರಮಥಗಣಗಳು
ಮೂಲ ಮಾಹೇಶ್ವರನ ಸೇವೆಯ ನೋಂತು ಗದ್ದಿಹರು || ೩೭ ||

ಯಾರಿಗಣಿತಿಮಾದಷ್ಟಸಿದ್ಧಿಯು
ಭಾರಿ ಹಗುರೆಂಬೆಣಿಯಿಕೆಹುದೋ
ಯಾರನುಜ್ಞೆಯ ಮೀರೆ ಬೊಮ್ಮಾದಿಗಳಿಗಸದಳವೊ |
ಯಾರಿಗೀಜಗ ಸೃಷ್ಟಿಲಯುಗಳು
ತೋರಿಯಡಗುವ ನೀರಗುಳ್ಳೆಯೊ
ಯಾರು ತುಷ್ಟರೊ ಮೋಕ್ಷಪದದೊಳಗಾತ್ಮರತಿಯೊಳಗೆ || ೩೮ ||

ಜರೆಯು ಮರಣದ ಭಯವಿದೂರರು
ವರ ಶಿವಾದ್ವೈತಾತ್ಮಶಾಂತರು
ಹರಿವಿರಂಚಿಗಳಾದಿ ಸಂಪದವನ್ನೆ ಬಯಸದರು |
ಹರನ ಸೇವೆಯನೊಂತುಗೈದರು
ನಿರುತವಾತ್ಮಾನಂದ ರತಿಗಳು
ಪರಮಪದವನು ಶಿವನ ಯೋಗದೊಳಿರಿತ ಶಿವಗಣವು || ೩೯ ||

ಯಾರಕಾಂಕ್ಷೆಯ ಫಲವೆ ಸುರದ್ರುಮ
ಯಾರ ವಿಕ್ರಮ ಮೃತ್ಯು ಮಾರಕ
ಯಾರು ಕರ್ಮದ ಮೇಣು ಕಾಲದ ಮಿತಿಯ ಮೀರಿಹರೊ |
ಯಾರು ಶಿವಸಾರೂಪ್ಯ ಸಾಯುಜ
ರಾರು ದಿವ್ಯ ಪ್ರಮಥಗಣಗಳೊ
ಭೂರಿಮಹಿಮೆಯ ಶಿವನಸೇವೆಯಲವರೆ ಮೊದಲಿಗರು || ೪೦ ||

ಸುರರು ರುದ್ರರು ಯಕ್ಷ ವಿದ್ಯಾ
ಧರರು ಸಿದ್ಧರು ದೈತ್ಯ ದಾನವ
ರರರೆ ಯಾದಿತ್ಯಾದಿ ವಸುಗಳು ಶ್ರೇಷ್ಠಸೈನಿಕರು ।
ಸುರರರಾಜನು ಹರಿವಿರಂಚಿಯು
ಭರದಿ ಸಾಯುಧರಾಗಿ ಬಂದರು
ಹರನ ವೊಡ್ಡೋಲಗಕೆ ಗೌರವರಕ್ಷೆ ನೀಡಲ್ಕೆ ॥ ೪೧ ॥

ಮುನಿಯ ತಿಲಕಂ ವಾಮದೇವರು
ಶುನಕ ವಿಶ್ವಾಮಿತ್ರನತ್ರಿಯು
ವಿನತ ಗೌತಮ,ಶುಕ ವಸಿಷ್ಠರು ನಾರದಾದಿಗಳು ।
ಚಿನುಮಯಂ ಸಾನಂದ ಯೋಗಿಯು
ವಿನುತ ಭೃಗುಮೇಣ್ ವ್ಯಾಸ ಋಷಿಗಳು
ವಿನಯ ಸೇವೆಯ ಸಲಿಸುತಿಹರ್ಕೈ ಸರ್ವ ಮುನಿವರರು ॥ ೪೨ ॥

ತನ್ನ ಸುತ್ತಂ.ಸೇವೆ ಸಲಿಸಿಹ
ಚನ್ನ ಭಕ್ತರ ಹೃದಯಬಿಂಬಿಸಿ
ಚನ್ನಶಿವತಾ ಚೆಲ್ಲುತಿಹನ್ಯೈ ದೃಷ್ಟಿಮಲ್ಲಿಗೆಯ ।
ಉನ್ನತಾಸನದಲ್ಲಿ ಮಂಡಿಸಿ
ಚನ್ನ ಪಾರ್ವತಿಪತಿಯು ದರ್ಶನ
ವನ್ನು ಪಡೆದವರೆಲ್ಲರಾತ್ಮದಿ ತಾನೆ ಬೆಳಗಿಹನು ॥ ೪೩ ॥

ಚನ್ನ ಪರಶಿವ ದೇವನಿಕರ
ಕ್ಕೊಮ್ಮೆಯಾದೇಶವನು ನೀಡುವ
ನೊಮ್ಮೆ ಗಾಂಧರ ದೊರೆಯು ಪಾಡುವ ಗಾನವಾಲಿಸುವ ।
ಒಮ್ಮೆ ವಿಷ್ಣು ಬ್ರಹ್ಮರೊಂದಿಗೆ
ಸುಮ್ಮನಾಲಾಪನವ ಮಾಡುವ
ನೊಮ್ಮೆ ನೋಡುವ ನೃತ್ಯವೈಭವ ದೇವಕನ್ಯೆಯರ ॥ ೪೪ ॥

ಒಮ್ಮೆ ಗೌರವಿಸುವನು ವ್ಯಾಸರ
ನೊಮ್ಮೆ ವೇದೋಚ್ಚಾರ ಕೇಳುವ
ನೊಮ್ಮೆ ದೇವಿಯ ಪದ್ಮಮುಖದೊಳು ದೃಷ್ಟಿಯಾಡಿಸುವ ।
ಒಮ್ಮೆ ಭೃಂಗಿಯ ಹಾಸ್ಯನರ್ತನ
ವನ್ನು ನೋಡುತ ನಗೆಯಬೀರುವ
ನೊಮ್ಮೆ ತನ್ನೊಳುತಾನೆ ನೋಡುವ ಸರ್ವರಾತ್ಮಗಳ ॥ ೪೫ ॥

ಶಿವನು ಪಾರ್ಶ್ವದ ದಂಡಧಾರಿಗೆ
ಶಿವನ ಭಂಟಗೆ ನಂದಿನಾಥಗೆ
ಜವದೊಳಾಜ್ಞೆಯನೀಯೆ ಕೆಲರುದ್ದಂಡಬೀಳುವರು ।
ಶಿವನೆ ಕಣ್ಣಿಂಗಿತದಿ ಕೆಲರನು
ಜವದಿ ಕಳುಹಿಸಿಕೊಡುವ ಕೆಲರೊಡ
ನವನು ನಲುನುಡಿಯಾಡಿ ನಗಿಸುವ ಕೆಲರ ಬಂಧಿಸುವ ॥ ೪೬ ॥

ಹತ್ತುನಾಲ್ಕುಂ ಲೋಕಪತಿಗಳು
ಸುತ್ತುವರಿದಿಹ ಶಕ್ತಿ ಸಂಯುತ
ನತ್ಯಧಿಕ ಲಾವಣ್ಯ ಲಲಿತಾಕೃತಿಯ ವಿಗ್ರಹನು ।
[1] ನಿತ್ಯ ಸಂಬಂಧದೊಳು ನೆಲೆಸಿಹ
ಸತ್ಯ ಸುಂದರ ಶುಭಗೆ ಶಕ್ತಿಯ
ನೆತ್ತಿ ತೊಡೆಯೊಳಿರಿಸಿ ತೃಪ್ತನು ವಿಶ್ವನಾಥ ಶಿವ ॥ ೪೭ ॥

ಚಿರದ ನಿಲುಗಡೆ ಸಹಜದೈಸಿರಿ
ಯರುವಿನಾಗರ ಪರಮಸತ್ತ್ವನು
ನಿರುಮಿಸಿರ್ಪಾನಂತ ವಿಗ್ರಹ ನಿಷ್ಕಲಂಕ ಶಿವ ।
ಶರಣ ಸಜ್ಜನ ರಕ್ಷ ಶಿಕ್ಷಕ
ದುರುಳ ದುರ್ಜನ ದುರಿತ ಸಂಹರ
ಪರಮ ಪಾವನಚರಿತ ಚಿಂತಾಮಣಿಯು ಶಿತಿಕಂಠ ॥ ೪೮ ॥

---

[1] "ಇಂಗಡಲೊಳಿಂಪು, ಬೆಳದಿಂಗಳೊಳು ತಂಪು, ಕುಸುಮಂಗಳೊಳು ಕಂಪು ಬೆರದಂತೆ ಪರಮನೊಳು ಬೆರದಿಹ ಅಗಜಾತೆ"—ನಿಜಗುಣ ಶಿವಯೋಗಿ

ದೇವದೇವನ ದಿವ್ಯಸಭೆಯಲಿ
ದೇವಗಣಪತಿ ಮಧ್ಯೆ ಶೋಭಿಪ
ಶೈವಗಣಗಳ ಮುಖ್ಯರೇಣುಕರನ್ನು ಶಿವನೋಡಿ ।
ಶೈವ ವೀರರ ತತ್ತ್ವಸಾರುವ
ಶಾವ ಗುರುವಿಗೆ ವೀಳ್ಯವೀಯಲು
ದೇವಸಭೆಯೊಳು ಮುಂದೆ ಕರೆದಿಂತಾಜ್ಞೆ ನೀಡಿದನು ॥ ೪೯

ಮೂರುಲಿಂಗಜ್ಯೋತಿ ಬೆಳಗುವ
ಮೇರುಸಾದೃಶ ಶೈಲಗಿರಿಯು
ತ್ತಾರ ದಿಕ್ಕಿನದೇಶ ಭೂಕೈಲಾಸ ಭಾಗದೊಳು ।
ವೀರಗೋತ್ರದ ವೀರವೃತ್ತಿಯ
ವೀರಮಾಹೇಶ್ವರರು ನೆಲಸಿಹ
ಚಾರುತರವಹ ಕುಲ್ಯಪಾಕಾ ಕ್ಷೇತ್ರ ಮೆರೆದಿಹುದು ॥ ೫೦।

ಅಲ್ಲಿಗಧಿಪತಿ ಸೋಮನಾಥಂ
ಗೆಲ್ಲ ನನ್ನಯ ಕಳೆಯು ತುಂಬಿಹು
ದಲ್ಲಿಯಾವಿರ್ಭವಿಸು ತೇಜೋರೂಪ ಧಾರಣದಿ ।
ಸಲ್ಲಲಿತ ಶಿವಲಿಂಗ ಸಂಭವ
ನೆಲ್ಲ ಭಕ್ತರ ಪೊರೆವ ಗುರುವೆಂ
ದೆಲ್ಲಲೋಕವು ನಿನ್ನ ಸೇವಿಪುದೆನ್ನನುಜ್ಞೆಯೊಳು ॥ ೫೧।

ಬನ್ನಬಡುತಿಹ ಭಕ್ತರುನ್ನತಿ
ಗೆನ್ನ ಪರದದ್ವೈತ ಶಾಸ್ತ್ರವ
ನಿನ್ನು ಮರ್ತ್ಯದಿ ಸರ್ವಮಾನ್ಯವ ಮಾಡು ಮುದದಿಂದ ।
ನನ್ನ ಮಹಿಮೆಯ ಮರ್ತ್ಯಲೋಕದೆ
ಚನ್ನ ಶರಣರ ಹೃದಯ ಹದಮಾ
ಡಿನ್ನು ಬಿತ್ತುತ ವಿಸ್ತರಂಗೈ ವೇದ ಮಾರ್ಗದೊಳು ॥ ೫೨ ।

ಇಂತು ಪೇಳಿದ ಶಂಭುಶಂಕರ
ಕಂತುಪಿತನಂ ಬ್ರಹ್ಮರಾದಿಯ
ನಂತ ದೇವರ್ಕಳನು ಬೀಳ್ಕೊಡುತುನ್ನತಾಸನವ ।
ಸಂತಗಣದಭಿಮತವನಾನುತ
ಲಂತು ಬಿಟ್ಟೇಕಾಂತಕಾಗಿಯೆ
ಚಿಂತೆಯಿರದಿಹ ಶಾಂತಿಧಾಮಕೆ ಪೋದ ಪರಮೇಶ ॥ ೫೩ ॥

ಶಿವನ ಹರಕೆಯನಾಂತು ರೇಣುಕ
ಭುವನಪಾವನ ಭರತಖಂಡದೆ
ಶಿವನಭಕ್ತರ ಪೂಜ್ಯ ಸೋಮೇಶ್ವರನ ಲಿಂಗದೊಳು ।
ಜವದಿಯಾವಿರ್ಭವಿಸೆ ಹರ್ಷದಿ
ದಿವಿಜರೂರಿಂ ಪುಷ್ಪ ಸುರಿದರು
ಭುವಿಯಭಾರವ ಕಳೆವ ಗುರುವಿನ ಚರಣಗೌರವಕೆ ॥ ೫೪ ॥

ಇಂತು ರೇಣುಕಗೀತೆ ಬೋಧಿಪು
ದೆಂತು ಕೈಲಾಸಪತಿ ಶಂಕರ
ಸಂತ ಶಿವಗಣವೆರಸಿ ದೇವತೆಯಿಂದ ಪೂಜಿತನು ।
ಎಂತು ಭಕ್ತೋದ್ಧಾರ ಗೈವನು
ಸಂತ ಶಿವಗಣಕಿತ್ತು.ತನ್ನಾ
ನಂತ ತೇಜದ ಕಳೆಯನೆಂಬೀ ಸಂಧಿ ಸಂಪೂರ್ಣಂ ॥ ೫೫ ॥

ಮೂರನೇ ಸಂಧಿ ಸಂಪೂರ್ಣಂ

ಅಂತು ಸಂಧಿ ನಾಲ್ಕಕ್ಕಂ ಪದನು ನೂರಿಪ್ಪತ್ಮೂರಕ್ಕಂ
ಮಂಗಳಮಸ್ತು.

———

# ನಾಲ್ಕನೆಯ ಸಂಧಿ

## ರೇಣುಕಾಗಸ್ತ್ಯ ಸಮಾಗಮ

ಸೂಚನೆ :—ಕುಲ್ಯಪಾಕಾಲಿಂಗ ಸಂಭವ ।
ಮಲಯಪರ್ವತ ಮೌನಿಯಾಶ್ರಮ ॥
ದಲ್ಲಿಯಾಗಸ್ತ್ಯಂಗೆ ದರ್ಶನಮಿತ್ತು ಹರಸಿದನು ॥

### ಲಿಂಗಾವತಾರ

ಮೂರು ಲಿಂಗಜ್ಯೋತಿ ಬೆಳಗುವ
ಚಾರುತರವಹ ತೆಲಗುದೇಶದ
ಸಾರ ಮಹಿಮೆಯ ಕುಲ್ಯಪಾಕಾಕ್ಷೇತ್ರದಾಲಯದೋಳ್ ।
ವೀರ ರೇಣುಕರಂದವತರಿಸೆ
ಭೂರಿಬೆಳಗಿನಪುಂಜ ಬೆಳಗಿತು ಪತ್ತುದೆಸೆಯನ್ನು ॥ ೧ ॥

ತೆಲಗುದೇಶದ ಜೀವಕೋಟಿಗೆ
ಪುಲಕವುಣ್ಮಲು ನಿಂತನಿಲವಿಂ
ಕುಲಜ ಭಕ್ತರು ಕಲೆತರಾಕ್ಷಣಮೀಶ್ವರೇಚ್ಛೆಯೊಳು ।
ಚಲುವಿನಾಕರ ಲಿಂಗಮೂರ್ತಿಯ
ನಿಲವ ನಿಬ್ಬೆರಗಾಗಿ ನೋಡುತ
ಲೊಲೆದು ಕೆಡೆದರು ಚರಣತಳದೊಳು ಭಾವಪರವಶದಿಂ ॥ ೨ ॥

ಯೋಗಿಗೊಪ್ಪಿದ ಜಟೆಯ ಮಕುಟವು
ರಾಗವಿರಹಿತ ಭಸ್ಮಭೂಷಣ
ನಾಗಮೋಕ್ತದ ಸಾರ ರುದ್ರಾಕ್ಷಗಳ ಧಾರಣನು ।
ಯೋಗ ದಂಡವು ಕರಕಮಂಡಲ
ಚಾಗ ಕುರುಹಿನ ಕಾವಿವಸ್ತ್ರವು
ಯೋಗಿ ಫಣೆಯೊಳು ಮೂರುಬೆರಳಿನ ಭಸ್ಮ ರಂಜಿಪುದು ॥ ೩ ॥

ಆವಗಂ ಶಿವಪಾದ ನೆನೆವೀ
ರೇವಣನು ಭವಪಾಶರಹಿತನು
ಸೇವ್ಯನೈ ಶಿವಯೋಗಪೂರ್ಣಾನಂದ ಸಾಗರನು ।
ಭಾವಪೂರ್ಣಾಚಾರಚಂದ್ರನು
ದೇವ ಶಿವನಿಂದುಕ್ತ ತತ್ತ್ವದ
ಭವ್ಯಶರಧಿಯನ್ನೈದೆ ಪುಳುಕಿಪನಾಗಸಂಬರವು ॥ ೪ ॥

ಸಿದ್ಧರೆಲ್ಲರ ಮುಖ್ಯಮಣಿ ತಾ
ಬದ್ಧನಲ್ಲದ ಕರ್ಮಕೌಶಲಿ
ಸಿದ್ಧಿದಂ ಶಿವಯೋಗತಂತ್ರಜ್ಞಾನ ಪರಿಪೂರ್ಣಂ ।
ಬದ್ಧಕರ್ಮಿಗಳೆಲ್ಲ ಪಾತಕ
ಬಿದ್ದು ಕಳೆವುದು ಕರುಣದೃಷ್ಟಿಗೆ
ಭದ್ರಪಟ್ಟನು ವೀರ ಸಿದ್ಧಾಂತವನು ನೆಲೆಗೊಳಿಸೆ ॥ ೫ ॥

ಪರಮಯೋಗಿಯ ನೋಡಿ ವಿಸ್ಮಿತ
ನೆರೆದ ಭಕ್ತಸ್ತೋಮ ಮುಖ್ಯರು
ವರದ ಗುರುವಿಗೆ ನಮಿಸಿ ಕೇಳಲ್ ಸ್ವಾಮಿ ತಾವಾರು ? ।
ಪರಮ ರುದ್ರನ ಪಾರ್ಶ್ವವರ್ತಿಯು
ಸರುವ ಗಣಗಳ ಮುಖ್ಯ ರೇಣುಕ
ಪರಶಿವಾದ್ವೈತಾತ್ಮ ಮುದದೊಳು ಪೇಳ್ದರಿಂತೆಂದು ॥ ೬ ॥

ಶಿವನನುಗ್ರಹದಾಜ್ಞೆಯಾಗಲು
ಭುವಿಗೆ ಲಿಂಗೋದ್ಭವದೆ ಬಂದೆನು
ಭುವನದೊಳು ಶುಭನಾಮ ರೇವಣಸಿದ್ಧನೆಂದೆನಗೆ ।
ಜವದೆ ಶಿವಸಿದ್ಧಾಂತ ರಕ್ಷಿಪ
ಶಿವಗಣಂಗಳ ಸಿದ್ಧನಾಯಕ
ಭುವನವರಿಯಲ್ಕಾನು ಜಗದಾಚಾರ್ಯನಿರುತಿಹೆನು ॥ ೭ ॥

ವರದರೇಣುಕನಿಂತು ಪೇಳುತ
ಲಿರದೆ ಭಕ್ತರನೆಲ್ಲ ಹರಸಲು
ನೆರೆದರನಿಮಿಷ ನೇತ್ರರಾಗೀಕ್ಷಿಸಿರೆ ಮಲಯಾದ್ರಿ।
ಮೆರೆವದಿಕ್ಕಿಗೆ ಗಗನಮಾರ್ಗದಿ
ಸರಿದನಂಜೆಯು ನೀಲಗಗನದಿ
ಭರದಿ ಹಾರುತಲಿರದೆ ಕಣ್ಮರೆಯಾಗುವಂದದೊಳು ॥ ೮ ॥

## ಮಲಯಾದ್ರಿ ವರ್ಣನೆ

ದಾರು ಬೂರುಗ ಸಾಗವಾನಿಯು
ನೇರ ಬೆಳದಿಹ ನಂದಿ ನೀಲವು
ಬೇರು ಬಿಳಲಿನೊಳರಹಿದುನ್ನತದಾಲಮರ ಮೆರೆಯೆ।
ತಾರೆ ತೇಗವು ಹೊನ್ನೆ ಹೊಂಗೆಯು
ಭಾರಿ ಮೆಳೆ ಹೆಬ್ಬಿದಿರು ದಿಂಡುಗ
ತೋರ ತೊಗಟೆಯು ಕರಿಯಮರಮಿಹ ಮಲೆಯು ರಂಜಿಪುದು ॥ ೯ ॥

ಗಿರಿಯ ಮೇಲ್ಗಿರಿಸಾಲು ಸಲಗನು
ಕರಿಯು ಕೋರೆಯಹಂದಿ ಕರಡಿಯು
ಕಿರುಬವಾರ್ಭಟದೇಳು ಮೆಟ್ಟಿನ ಹುಲಿಯು ಮಾರ್ಮಲೆತು।
ಕೆರೆವ ಗೊರಸೊಳು ಥಿರಿಕೆಹೊಡೆಯುವ
ಹಿರಿಯ ಮುಡುವಿನ ಹೋರಿಗೂಳಿಯು
ಕರಿಯಪುಮ್ಮೆಯ ಹಿಂಡಿನೋಳಿರೆ ಮಲೆತ ಕಾಡ್ಕೋಣ ॥ ೧೦ ॥

ಆನೆ ಘೀಂಕೃತಿ ಸಿಂಹಘರ್ಜನೆ
ಕೋಣ ಹೊಙ್ಕೃತಿ ಪುಲಿಯದಾರ್ಭಟಿ
ಶೇನ ಸಿಳ್ಳುಲಿ ಸರ್ಪಹಿಸ್ಸನ ಹಂದಿ ಹೂಂಕೃತಿಯು।
ಜೇನುಹುಟ್ಟಿಗೆ ಪರಜಿ ಜಾಂಬವ
ಝೀನು ಕೃತಿರವದೆರಗೆ ಹೆಜ್ಜೇನ್
ಕಾನು ಕಣಿವೆಯು ಮೊಳಗಿ ಮಾರ್ದನಿಯಿಂದ ಕೂಡಿಹುದು ॥ ೧೧ ॥

ಕರಿಯಮರಿ ಚಿನ್ನಾಟಕರದೊಳು
ಮುರಿದವೇಲಕಿ ಗಿಡವು ! ಏಲವೊ
ಸರುವ ಪರಿಮಳವುಂಡ ಮಾರುತ ! ಮಲೆಯ ಮಾರುತಗೆ |
ಮರುಸವಾಲನು ಕೊಟ್ಟುಗಹ್ವರ !
ಗಿರಿಯಗಹ್ವರವೆಲ್ಲ ವಾಸನೆ
ಹರಿಯೆ ಜೇಕಿನಗಡ್ಡೆ ಕೋರೆಯಹಂದಿಯಾರ್ಭಟೆಗೆ ‖ ೧೨ ‖

ಅಂದುಚಂದನದೆಲೆಯ ಮಂಚದೆ
ಬಂದು ಮಲಗಿರೆ ಬೇಡದಂಪತಿ
ಚಂದಕೆಂದೆನೆ ಮುಡಿದ ಮುಡಿಯೊಳು ಮೊಲ್ಲೆ ಮೆರೆದಿತ್ತು |
ಅಂದಚಂದದ ಕೆಂಡಸಂಪಿಗೆ
ಯಿಂದ ಮಾಧವಿಯನ್ನು ಜೋಡಿಸಿ
ತಂಪ ಹಾರಂ ಜಾಜಿ ಕುಸುಮದೆ ಕಂಪು ಸೂಸಿತ್ತು. ‖ ೧೩ ‖

## ಆಶ್ರಮ ವರ್ಣನೆ

ಇರುಬು ಮಲೆಯನು ಹಾದು ಬರುತಿರೆ
ಗಿರಿಯ ಸಾನೊಳು ಕಣಿವೆ ಬಯಲೊಳು
ಮೆರೆವ ತಾಪಸರಿರುವ ಪುಣ್ಯಾಶ್ರಮದೆ ಹೊಳೆಯಿತ್ತು |
ತೆರೆಯ ತೀರನ್ನೀರದಂಚೆಯು
ಗಿರಿಯ ಝರಿಯೊಳ್ನೀರು ಕುಡಿಯುವ
ಹರಿಣಿಯೊಂದಿಗೆ ಚಿಗುರುಗೊಂಬಿನ ಹೋರಿ ಮೆರೆದಿತ್ತು ‖ ೧೪ ‖

ತೊರೆದ ಕೆಚ್ಚಲ ಕರುವಿಗೂಡಿದ
ಕಿರಿದುಗೊಂಬಿನ ಕಪಿಲೆ ಪೊದೆಯೊಳು
ಗರಿಕೆ ಮೇಯುವ ಮೊಲವು ಬಣ್ಣದ ಗರಿಯನರಳಿಸಿದ |
ವಿರಹ ನಾಟ್ಯದ ನವಿಲು ಮಾಮರ
ದರೆಯ ಮೇಲ್ಸರವಿಟ್ಟ ಕೋಗಿಲೆ
ಮರಕೆ ಮರದಿಂ ಪಾರ್ವಗಿಳಿಯಿಂ ಬನವು ನಲಿದಿತ್ತು ‖ ೧೫ ‖

ಅಂದು ವರಶಿವಯೋಗಿ ಬರುವನು
ಚಂದನ ಶ್ರೀ ಗಂಧವನದೊಳು
ಮಂದಮಾರುತ ಕಾಣುತೋರಗ ರಾಣಿಯೊಲವಿಂದ |
ಬಂದು ಪಾಡುವ ರಾಗರಸದೊಳು
ಮಿಂದು ಪೂಜ್ಯರ ಸೇವೆಗೈಯಲು
ಬಂದನೆನಲಾ ಮಲಯ ಪರ್ವತ ಪುಣ್ಯನೆಲೆಯಲ್ತೆ ? || ೧೬ ||

ಸರ್ವ ಋತುವಿಗು ಪೂತಪುಷ್ಪದ
ವರ್ಷಸುರಿಪಾಗಸ್ತ್ಯರಾಶ್ರಮ
ವಿರ್ಷತಾಣದೆ ಜಗದ ವರಗುರು ರೇಣುಕಾಚಾರ್ಯ |
ಹರ್ಷನೋಟದೋಳೀಕ್ಷಿಸಿದರೈ
ಸರ್ವವೇದದ ಸಾರವುಂಡಿಹ
ಸರ್ವಯಜ್ಞದ ಕುಂಡರಚನೆಯ ಶಾಂತಿಯೆಲೆಮನೆಯ || ೧೭ ||

ಮಂಡಿಸಿದ ಜಡೆ ಹೊತ್ತರಂಪದೆ
ಕಂಡುಬರುತಿಹ ದುಂಡುಮರ ಸಿರಿ
ಖಂಡಚಂದನದಾದಿ ಗಿರಿಮಂದರದ ವೃಕ್ಷಗಳು |
ಬಂಡಿಡಿದರಳ್ಮೊಗ್ಗು ತಾರಾ
ಮಂಡಲೋಪಂ ಕಣ್ಗೆತೋರ್ಪುವು
ತಂಡತಂಡದಿ ಶಿಖರ ಶಾಖಾಗ್ರದೊಳಗಾಶ್ರಮದಿ || ೧೮ ||

ಮಂದಗಮನೆಯರೆರೆಯಲೊಲವಿಂ
ತಂದು ನೀರನು ಕುಂಭಪೂರದೊ
ಳಂದಚಂದದಿ ಬೆಳೆದುನಿಂದಿಹ ಬನದ ಸಿರಿಸೊಬಗು |
ನಿಂದು ತಿಳಿದಿಹ ಪಾತಿಜಲವ
ನ್ನಂದುಕುಡಿದಾಸ್ವಾಧಿಸುವ ಮೃಗ
ವೃಂಧದಾನಂದದೊಳು ಸಾಸಿರ್ಮಡಿಯೆ ಪೆರ್ಚಿದುದು || ೧೯ ||

ಪೊನ್ನಪಂಕಜ ಸುರಿಸೆ ಸುಮಧುರ
ತನ್ನ ಮಧುವನುಸರಸಿವಾರಿಗೆ
ಚನ್ನಪರಿಮಳವೆರಸಿ ತೆರೆಯನು ತೆರೆಯುಬೆನ್ನಟ್ಟಿ ।
ಮುನ್ನವೇರಿದ ರಾಜಹಂಸನು
ತನ್ನ ಪಕ್ಕದ ರಾಣಿಯಂಚೆಗೆ
ತನ್ನಯೆದೆಯಿಂಗಿತವನೋದುವ ಮಧುರದುಲುಹಿಂದ ॥ ೨೦ ॥

ನೀಲಗಗನವೆ ಕರಗಿದಂತಿರೆ
ನೀಲಕಮಲಾಕರದ ಕಾಂತಿಯು
ನೀಲಕಂಠನ ಕೊರಳ ಕಾಂತಿಯ ನೆನವುಗೊಡುತಿರಲು ।
ಶೀಲೆ ಲೋಪಾಮುದ್ರೆ ಸರಸಿಯ
ಹಾಲಮಣಿಸಮುದಗ್ಗವಣಿಯನು
ಲೀಲೆಯೊಳುತರೆ ಚರಣ ಮುದ್ರಿತ ತಟಿಯು ಶೋಭಿಪುದು ॥ ೨೧ ॥

ಸರಸಿ ಪೆರ್ದೆರೆ ಘೋರ್ಗರೆವ ರವ
ಹರನ ಹಾಸದ ಪರಿಯು! ಮತ್ತಿರೆ
ದರೆಗೆ ಬಡಿದಾ ತೆರೆಯು ಚಿಮ್ಮಲು ಶುಭ್ರಹನಿಗಳನು ।
ಕರುಣ ಕಿರಣವ ಬೀರಿ ದಿನಮಣಿ
ಕೊರೆವ ಕಾಮನಬಿಲ್ಲು ಮುತ್ತಿನ
ಸರದಿ ಬಿಗಿದಿಹ ಸಪ್ತರಾಗದ ಹರಳಿನಂದವನು ॥ ೨೨ ॥

ಸರಸಿ ಸಲಿಲವು ನಿಸ್ತರಂಗದೊ
ಳಿರಲು ಕಪ್ಪುರ ಹಲಗೆ ಹಾಸದು
ಗಿರಿಯ ಶಿಖರದ ಹಿಮದರಾಶಿಯ ಹರಹಿನಂದವದು ।
ಬರುವ ತಾಪಸನಿಕರ ನಿತ್ಯವು
ಹರನ ಕೆಂಜೆಡೆ ಗಂಗೆಯಂ ನೆನೆ
ದೆರೆದುಕೊಳ್ಳುವ ಪರಮ ತೀರ್ಥಮದಾಗಿ ರಂಜಿಪುದು ॥ ೨೩ ॥

ವೇದಮಾರ್ಗಾಚಾರ ನಿಷ್ಠರ
ಸಾಧುಸಂತರ ತಪದ ನೆಲೆಯೊಳು
ಮೇದಿನಿಗೆ ಮಿಗಿಲಾದ ಭದ್ರೆಯ ಪುಣ್ಯತೀರ್ಥದಲಿ ।
ಬಾಧಿಸುವ ಬಾಯರಿಕೆ ನೀಗಲು
ಸಾದರದೆ ಜೊತೆಗೂಡಿ ಬರುವುದು
ಭೇದಭಾವದ ಜಾತಿವೈರವ ಕಳೆದ ಖಗಮೃಗವು ॥ ೨೪ ॥

ಬೊಮ್ಮರಿಷಿಯಾಗಸ್ತ್ಯರಾಶ್ರಮ
ಬೊಮ್ಮಲೋಕದ ನೆನಪುಗೊಡುವುದು
ಘಮ್ಮಘಮ್ಮನೆಯಾಜ್ಯದಿಂದುತ್ಪನ್ನವಹ ಧೂಮಂ ।
ಬೊಮ್ಮಲೋಕಾಂತರವು ಪಸರಿಸೆ
ಸಮ್ಮುದದೆ ಗಿಳಿವಿಂಡು ಶಾಸ್ತ್ರದ
ಸಮ್ಮತಂ ಶೃತಿಯರ್ಥಗೈವವು ಸಂಗಮಹಿಮೆಯೊಳು ॥ ೨೫ ॥

ಮುನಿ ವರ್ಣನೆ

ಆರ್ಯಕುಲದಾಗಸ್ತ್ಯ ಋಷಿಗಳು
ಸೂರ್ಯತೇಜದ ಮೌನಿವರ್ಯರು
ಸೂರ್ಯತಾಪಕೆ ಛತ್ರಿವಿಡಿದಿಹ ವೃಕ್ಷಚಂದನದಿ ।
ಸೂರ್ಯರಶ್ಮಿಯು ತೂರಿ ಬರೆಯಲ
ಪೂರ್ವಚಿತ್ರವ ವೃಕ್ಷಮೂಲದಿ
ಮೂರ್ತಮಾಡಿಹರಾದಿ ಗುರುವಿನ ಬರವು ಹಾರೈಸಿ ॥ ೨೬ ॥

ಮಿಂಚುಬಳ್ಳಿಯ ಪೋಲ್ವ ಜಟೆಯಂ
ಗಂಚೆ ಪುಷ್ಪಳದೋಳ್ ತ್ರಿಪುಂಡ್ರವು
ಕಂಚುಕಾಯದೆ ಭಸ್ಮ ರುದ್ರಾಕ್ಷಿಗಳ ಭೂಷಣವು ।
ಸಂಚರಿಸುತ್ತೈತಂದ ಮುನಿಗಣ
ಮಿಂಚೆ ಬಳಸಿರಲೋಂತು ನೋಂಪಿಯ
ಪಂಚಮುಖ ಗಣನಿಕರದೋಳ್ಮೆರೆವಂತೆ ಶೋಭಿಪನು ॥ ೨೭ ॥

ಏರಲಸದಳ ಹಿಮದ ಗಿರಿಯೊಳು
ಮೂರು ಧಾರೆಯಗಂಗೆ ಜಾರುವ
ಭಾರಿ ಹರೆಯನು ಪೋಲ್ವಭಾಳದಿ ಭಸ್ಮ ರಂಜಿಸಲು ।
ನಾರುಮಡಿಯನ್ನುಟ್ಟು ಮುನಿವರ
ತೋರದಂಗಕು ಭಸ್ಮ ಬಳಿದಿರೆ
ತೋರುತಿಹನ್ನೈ ಸೂರ್ಯಚಂದ್ರರು ಧರೆಗೆ ಬಂದಂತೆ ॥ ೨೮ ॥

ಸರ್ವವೇದದ ಸಾರ ಸಂಗ್ರಹಿ
ಸರ್ವವಿದ್ಯಾ ಮಾತೃಮಂದಿರ
ನಿರ್ಪವಡಬಾಗ್ನಿಯನು ಒಳಗೊಂಡಿರ್ಪ ಕಡಲಂತೆ ।
ಸರ್ವ ಹಮ್ಮುಮಿಕೆಯನು ವರ್ಜಿಸಿ
ಸರ್ವಪಾವನ ಶೈವಭಾವದಿ
ಸರ್ವ ಸಿದ್ಧಿಗಳುದಯ ತಾಣಕ್ಕೇರಿಸಿದ ಧೀರ ॥ ೨೯ ॥

ಯಜ್ಞಕಾಜ್ಯವ ಸುರಿಯೆ ದಳ್ಳುರಿ
ವಗ್ನಿಯೋಜ್ವಲ ಜಟೆಯಜಾಲದೊ
ಳಗ್ನಿರಾಜನ ಪರಿಯೆ ಶೋಭಿಪ ಮೌನಿಯೋತ್ತಮನ ।
ಅಗ್ನಿನೇತ್ರದಿ ಸುಟ್ಟು ಕಾಮನ
ನಗ್ನಕಾಯಕೆ ಭಸ್ಮ ಬಳಿದಿಹ
ಯಜ್ಞಸಂಹರ ರುದ್ರನೋಪರಿಯಿರುವ ಗುರು ಕಂಡ ॥ ೩೦ ॥

## ಶ್ರೀ ಗುರು ದರ್ಶನ

ವೋದ ವೋಹದ ಕತ್ತಲಿಗೆ ರವಿ
ಬೋಧಮೂಲಕೆ ಕಲ್ಪದ್ರುಮ ಕಲ
ಶೋದ್ಭವಂಗಾಚಾರ್ಯವರ್ಯ ಧ್ಯಾನದೊಳು ತೋರೆ ।
ಬೋಧಮಾದುದು ಶಿವನ ಯೋಗವ
ಬೋಧಿಸುವ ಗುರು ಬರುವನೆಂಬರಿ
ವಾದರಂ ಮಿಗೆ ವಿನಯ ಸಂಭ್ರಮದಿಂದೆದುರ್ಗೊಂಡ ॥ ೩೧ ॥

ಎರೆಯೆ ಲೋಪಾಮುದ್ರೆ ಪಾವನ
ಕರದಿ ಕಲಶದ ನಿರ್ಮಲೋದಕ
ವರದ ಗುರುವಿನ ಚರಣಯುಗಳವ ತೊಳೆದನಾಗಸ್ತ್ಯ ।
ಕರುಣದೃಷ್ಟಿಯ ಬೀರಲಾರ್ಯನು
ಭರದಿ ಪೂಜೆಯ ಶಾಸ್ತ್ರವಿಧಿಯೋ
ಸರಿಯೆಗೈದರು ಭಕುತಿ ವೈವೆತ್ತಂತೆ ಸತಿಪತಿಯು ॥ ೩೨ ॥

ಪರಮ ಹರ್ಷವನಾಂತ ಗುರುವರ
ವಿರಚಿದುಚ್ಛಾಸನವ ನೇರಲು
ಚರಣಕಮಲಕ್ಕೆರಗಿ ಜಯಜಯಕಾರ ಮಾಡಿದರು ।
ಗುರುವಿನಪ್ಪಣೆಯಾಂತ ಮುನಿವರ
ತರಿಸಿದುಚಿತಾಸನದಿ ಮಂಡಿಸೆ
ವರದ ರೇಣುಕರಿಂತು ಪೇಳ್ದರು ಶಾಂತವಾಣಿಯೊಳು ॥ ೩೩ ॥

ಕಲಶಸಂಭವ ಕುಶಲವೇ ಪೇಳ್ ?
ಕೆಲಸ ಕಾರ್ಯಕೆ ಪೂಜೆ ತಪಕುಂ
ವಿಲಯ ವಿಘ್ನಗಳೇನಿಹವೆ ಪೇಳೆತ್ತಣಿಂದಾನುಂ ? ।
ಮಲಯಪರ್ವತ ನಿನ್ನ ತೇಜದ
ಕಳೆಯ ಬೆಳಗುತಲಿಹನು ವಿಂಧ್ಯನ
ಗಳಿತ ಗರ್ವನ ಮಾಡಿದುರುತರ ತಪದ ಮಹಿಮೆಯೊಳು ॥ ೩೪ ॥

ಎರಗೆ ನಿನ್ನಯ ಕೋಪವಣಮುಂ
ವುರಗರೂಪವ ತಳೆದನಹುಷನು
ಶರಧಿಯೆಲ್ಲವ ಕುಡಿದೆ ಪೂರ್ವದಿ ಕೆಸರು ತಾನುಳಿಯೆ ।
ಕರಗಿಪೋದನು ಜಠರದಗ್ನಿಗೆ
ಪರಮನೀಚನು ಪೋತರೂಪವ
ಧರಿಸಿ ಭೂಸುರರನ್ನು ಕಬಳಿಸಿ ತಿಂದ ವಾತಾಪಿ ॥ ೩೫ ॥



ಶ್ರೀಕೊನಲುಪಾಕಕ್ಷೇತ್ರವಿರಾಜಮಾನ ಶ್ರೀಸೋಮನಾಥಲಿಂಗದಿಂದ
ಶ್ರೀಜಗದ್ಗುರುರೇಣುಕಾಚಾರ್ಯರ ಅವತಾರ

ಲೋಕಕತಿಶಯವಮಾದುವೆನಿತೋ
ಲೋಕಹಿತವಹ ಘನದಕಾರ್ಯವ
ಲೋಕಮಾಯೆಯ ಮೀರಿಗೈದವರಾರು ನಿನ್ನಂತೆ ।
ಲೋಕ ನಿನ್ನನು ಪೊಗಳುತಿದೆ ನೀ
ನೇಕನೆಂದೇ ನೀನೆ ಯೋಗ್ಯನು
ಲೋಕಲೋಕಕು ಪರಶಿವಾದ್ವೈತವನು ಬೆಳಗಲ್ಕೆ ॥ ೩೬ ॥

ಪ್ರೇಮದೊಳು ಶಿವನಿಂದ ಕೇಳಿದ
ಹೈಮವತಿಸುತನಾರುಮೊಗ ನಿ
ಸ್ಸೀಮ ಶಿವಧರ್ಮೋತ್ತರವನುಪದೇಶವೀಯುತಲಿ ।
ಸೋಮಶೇಖರ ಶಿವನ ಭಕ್ತಿಯು
ನಾಮಶೇಷದಿ ಸುಟ್ಟುರುಬುತಿದೆ
ಕಾಮಪೂರಿತ ಘೋರ ಸಂಸಾರ್ಭಯವ ಪರಿಹರಿಸಿ ॥ ೩೭ ॥

ಸಿದ್ಧರೇಣುಕರಿಂತು ಪೇಳಲು
ವೃದ್ಧತಾಪಸಿ ಶಾಂತಭಾವದೊ
ಳಿದ್ದು ಕೇಳ್ದನು ಮೇಣು ಭಕ್ತಿಯೊಳೆದ್ದು ಬಿನ್ನಪವ ।
ಬದ್ಧಕಟಿಯೊಳು ಮುಗಿದಕರದೊಳು
ಶುದ್ಧಶಾಂತನ ಸಿದ್ಧತಿಲಕನ
ಮುದ್ದುಮೊಗದಿಂ ಕಳೆಯನೀಂಟುತ ಪೇಳ್ದನಿಂತೆಂದು ॥ ೩೮ ॥

ನನ್ನ ಹೊರತಿನ್ನಾರಿಗುಂಟೀ
ಸನ್ನಿಧಾನದ ಸುಖದ ಸಂಪದ
ವಿನ್ನು ನಾನೇ ಧನ್ಯ ಮೌನೀಂದ್ರರೊಳು ಸನ್ಮಾನ್ಯ ।
ಸನ್ನಿಧಿಯು ಬರೆ ಶಿವನಯೋಗವು
ನನ್ನಲಿಂದೇ ಸ್ಥಿರವುಗೊಂಡಿತು
ನನ್ನ ನಿಡುತಪವಿಂದು ಪೂರ್ಣವು ನಾನೆ ಮುನಿರಾಜ ॥೩೯॥

ವಿಷಯಸರ್ಪವು ಕಚ್ಚಿಕಾರಿದ
ವಿಷದಿ ಮೂರ್ಛಿತ ಜೀವಕೋಟಿಂ
ಗಸಮನಯನನ ಕರುಣದೃಷ್ಟಿಯ ತೆರದಿ ತವಕೃಪೆಯು ।
ಭಿಷಗ ಸಂಜೀವನವು ಸೋಂಕಲು
ರಸನೆಗೀ ಚರಣಾಭಿಷೇಕವು
ವಿಷಮ ಸಂಸಾರ್ಸುಡುವ ತಾಪತ್ರಯವನಣಗಿಪುದು ॥ ೪೦ ॥

ಗುರುವೆ ರೇಣುಕ ! ವರಗಣೇಶ್ವರ
ಹರನ ನೆಚ್ಚಿನ ಕುವರನಹುದೈ
ಹರಸಲೆಂದವತರಿಸಿ ಬಂದಿಹೆ ಈಶ್ವರೇಚ್ಛೆಯೊಳು ।
ಧರಣಿಯೊಳು ತವಚರಣ ಸಂಚರ
ಮರಣ ಮಾಯಾಬಂಧ ಭಯಹರ
ಪರಮಶಿವದಂವಿಹದಿ ಬೆಳಗಲು ಶಿವನನುಗ್ರಹವು ॥ ೪೧ ॥

ವರದರೇಣುಕ ತಮ್ಮ ಮುಖದಿಂ
ಪರಮ ವೇದಾಗಮದೆ ಸಂಸ್ತುತ
ಮಿರುವ ಸಿದ್ಧಾಂತವನು ಕೇಳಲು ಪೂರ್ಣವೆನ್ನ ತಪ ।
ಪರಮಬೋಧಿಯೆ ! ಕರುಣದಿಂದೊರೆ
ಪರಮಸಿದ್ಧಿಯನಿರದೆ ಕುರುಣಿಪ
ವರಶಿವಾದ್ವೈತಾತ್ಮ ತತ್ತ್ವದ ಜ್ಞಾನಬೋಧೆಯನು. ॥ ೪೨ ॥

ಇರುವ ತತ್ತ್ವಾಗಮಗಳೆಲ್ಲವ
ನಿರದೆ ಕೇಳುತ ಶಂಕೆಗೊಂಡೆನು
ಪರಮಯೋಗಿಯೆ ! ಕರುಣದಿಂದೊರೆ ನಿಜದ ನಿಲುಗಡೆಯ ।
ಪುರುಷಸಿದ್ಧಿಯನಿರದೆ ದೊರಕಿಪ
ಸರುವ ಯೋಗಿಗಳಿಂದ ಸೇವಿತ
ಪರಮ ವೇದವುಜ್ಞಾನಿಮಾನಿತ ಪರಶಿವಾತ್ಮೈಕ್ಯ ॥ ೪೩ ॥

ಇಂತು ರೇಣುಕಗೀತೆ ಬೋಧಿಪು
ದಂತು ಸೋಮೇಶ್ವರನ ಲಿಂಗದೆ
ಕಂತುಹರ ಶಿವನಾಜ್ಞೆಯಿಂತುದ್ಭವಿಸಿದಾಚಾರ್ಯ ।
ಸಂತಸಂಬರೆ ಕಂಡು ಪೂಜಿಸಿ
ದಂಥ ಮುನಿಯಾಗಸ್ತ್ಯ ಬೋಧಿಸು
ವಂತೆ ಬೇಡಿದ ವರಶಿವಾದ್ವೈತಾತ್ಮವಿದ್ಯೆಯನು ॥ ೪೪ ॥

ನಾಲ್ಕನೇಯ ಸಂಧಿ ಸಂಪೂರ್ಣಂ

ಅಂತು ಸಂಧಿ ಐದಕ್ಕಂ ಪದನು ನೂರಾ ಅರವತ್ತೇಳಕ್ಕಂ

ಮಂಗಳಮಸ್ತು.



# ಐದನೇ ಸಂಧಿ

## ತತ್ತ್ವೋಪದೇಶ

ಸೂಚನೆ:—ಧರೆಯೊಳಿರುವೀ ತತ್ತ್ವರಾಶಿಯ
ನರದೆ ಪರಿಕಿಸಿ ತಾರತಮ್ಯದೊ
ಳೊರೆದನೈ ಪಿರಿದೆಂದು ಶಿವಮತತತ್ತ್ವಸಿದ್ಧಾಂತ ॥

ಕುಂಭಸಂಭವ ಮಾಡೆ ಬಿನ್ನಪ
ತುಂಬುಹೃದಯದಿ ಸಿದ್ಧರೇಣುಕ
ಶಂಭುಶಾಂಭವಿಯನ್ನು ನೆನೆದಿಂತಿತ್ತನುಪದೇಶ ।
ಕುಂಭಸಂಭವ ನೀನು ಭುವಿಯೊಳು
ತುಂಬಿದಾಗಮಶಾಸ್ತ್ರಕೋವಿದ
ನಂಬಿಕೇಳೈ ವರಶಿವಾದ್ವೈತಾತ್ಮಸಿದ್ಧಾಂತ ॥ ೧ ॥

ಭಿನ್ನಭಿನ್ನದ ಭೋಧಗೊಡುತಲಿ
ಭಿನ್ನಭಿನ್ನಾಚಾರದಾರ್ಯರು
ನನ್ನಿಯಿಂ ಬಹುವಿಧದಿ ಸಿದ್ಧಾಂತವನು ಮಾಡಿಹರು ।
ಮುನ್ನಕಪಿಲರು ಸಾಂಖ್ಯಶಾಸ್ತ್ರವ
ನಿನ್ನುಯೋಗವ ಮುನಿಪತಂಜಲಿ
ಚೆನ್ನವೈಷ್ಣವದೀಕ್ಷೆ ಪೇಳ್ದರು ಪಂಚರಾತ್ರದಲಿ ॥ ೨ ॥

ಚಿದಚಿದೀಶ್ವರರೂಪ ಮೂರನು
ವಿಧಿಸಿ ವೈಷ್ಣವ ದೀಕ್ಷೆಗೊಡುವುದು
ಮುದದಿ ಕೃತಿಸಿದ ವಾಸುದೇವನ ಪಂಚರಾತ್ರದಲಿ ।
ವಿಧಿವಿಧಾನದಿ ಶೈವಪರಮುದು
ಮುದದಿ ಶಿವನೇ ಪೇಳ್ದ ಪಶುಪತ
ಚದುರತನದಿವ ಜರಿಯಬಾರದು ಪೂರ್ವಮೀಮಾಂಸ ॥ ೩ ॥

ವೇದತತ್ವದ. ಬೋಧವಿಾಯುವ
ವೇದಪರಹವ ಶಾಸ್ತ್ರಮಿಂತಿವು
ಮೇದಿನೀಯೊಳ್ ಸರ್ವಮಾನ್ಯಾಧಾರಶಾಸ್ತ್ರಗಳು ।
ವೇದದೋಳೊಂದೊಂದು ತತ್ತ್ವವ
ಬೋಧೆಗೊಡುವೀ ಶಾಸ್ತ್ರಕಿಂತಲು
ವೇದಮಯವಹ ಶೈವಶಾಸ್ತ್ರಕೆ ಪಿರಿಯಮಾನ್ಯತೆಯು ॥ ೪ ॥

ಶಿವನೆ ಪೇಳ್ದೀ ಶೈವತಂತ್ರವೆ
ಭುವನದೊಳು ಸಿದ್ಧಾಂತಶಾಸ್ತ್ರವು
ವಿವಿಧ ಪರಿಯೊಳು ವೇದಸಮದಾಧಾರಶಾಸ್ತ್ರಮಿದು ।
ಶಿವನು ಪೇಳ್ದಾಗಮವು ಬಹುವಿಧ
ವವರೊಳಿರುವೀಶೈವ ಪಶುಪತ
ವಿವಕೆ ಲಾಕುಳ ಸೋಮಸೇರುತ ನಾಲ್ಕುಭೇದಗಳು ॥ ೫ ॥

ಶೈವತಂತ್ರಪ್ರಾಜ್ಞರೀತೆರ
ಶೈವತಂತ್ರದೆ ನಾಲ್ಕುಬಗೆಯನು
ಶೈವರಂತವೆ ವಾಮದಕ್ಷಿಣ ಮಿಶ್ರಸಿದ್ಧಾಂತ ।
ಶೈವಶಕ್ತಿಯ ಭಕ್ತ ವಾಮಂ
ಶೈವ ಭೈರವ ಭಕ್ತ ದಕ್ಷಿಣ
ಶೈವದೇವತೆ ಯೇಳುಮಾತೃಕೆಯಾಗೆ ಮಿಶ್ರಮದು ॥ ೬ ॥

ಶೈವವೀರರ್ವೇದಸಮ್ಮತ
ಶೈವ ಶಿವ–ಜೀವೈಕ್ಯಸಾಧನೆ
ಶೈವದೊಳಗೇ ಶ್ರೇಷ್ಠಮಾದುದು ವೀರಸಿದ್ಧಾಂತ ।
ಶೈವಧರ್ಮಾಚಾರದಾಶ್ರಯಿ
ಗೋವಿ ಯಷ್ಟಾ[1] ವರಣ ರಕ್ಷೆಯ
ಶೈವ ಸಾಂಬನಿಗೆಲ್ಲವರ್ಪಿಸೆ ನಿಯಮ ಪೇಳುವುದು ॥ ೭ ॥

---

[1] ಅಷ್ಟಾವರಣಗಳು :— ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ ಎಂಬಿವೆಂಟೂ ರಕ್ಷೆಗಳು.

ವೇದಬಾಹಿರ ಮತವ ಖಂಡಿಸಿ
ವೇದಸಮ್ಮತ ವೀರಶೈವಗೆ
ಬೋಧಗೊಡುವುದು ವೀರಶಿವಜೀವೈಕ್ಯ ಸಿದ್ಧಾಂತ ।
ವೇದಸಿದ್ಧಾಂತಂಗಳೆರಡರ
ಸಾದೃಶಂಗಳು ಸಪ್ರಮಾಣವು
ಭೇದಮಿಲ್ಲದೆ ಮಾನ್ಯಮಾಡುವರೆಲ್ಲ ಪಂಡಿತರು ॥೮॥

ಸ್ವಾಮಿ ಶಿವನೇ ಪೇಳ್ದ ತಂತ್ರದೆ
ಕಾಮಿಕಾದಿಯು ವಾತುಲಾಂತ್ಯದ
ಕಾಮಿತಾರ್ಥವನೀವ ಸಿದ್ಧಾಂತೋತ್ತರೋತ್ತಮವು ।
ಸಾಮ್ಯಗರ್ಪಿಸುತೆಲ್ಲ ಗಯ್ಮೆಯ
ಸಾಮ್ಯ ಶಿವನೊಳೈಕ್ಯಪೊಂದುವ
ಸಾಮ್ಯಮಿಲ್ಲದ ವೀರಶಿವಮತಮಾರ್ಗ ಪೇಳಿಹುದು ॥೯॥

ವೀರಶಬ್ದದ " ವೀ " ಯು ಪೇಳ್ವುದು
ವೀರ " ಶಿವಜೀವೈಕ್ಯ " ವಿದ್ಯೆಯ
ವೀರಶೈವರು " ರ " ಮಿಪರಂತಹ ವಿದ್ಯೆಯಾರ್ಜಿಸಲು ।
ಯಾರದರಿವದು ವೇದಮೂಲವೊ
ಯಾರು ರಮಿಪರೊ ವೀರಮಾರ್ಗದಿ
ಧೀರರವರೇ " ವೀರಶೈವರು " ಎಂಬುದಿದು ಮತವು ॥೧೦॥

ಯಾರು ರಮಿಸುವ ಶಿವನರೂಪದೊ
ಳಾರುಪಡೆವ ಶಿವಾನುಭವವನು
ಯಾರ ಹೃದಯವು ಶಿವನ ಮಂದಿರ ವೀರಶೈವನವ ।
ಯಾರು ಶಿವಜೀವೈಕ್ಯದರಿವೊಳು
ದೂರಮಾಡುವ ನಾಯಿಮಾಯೆಯ
ನಾರನಿಷ್ಠೆಯದಿಷ್ಟಲಿಂಗದೊಳಾತ ಮಾಹೇಶ ॥೧೧॥

ಶೈವ ಪೂಜುವನಂತರಂಗದಿ
ಗೈವ ಮಾಹೇಶ್ವರನು ಬಾಹ್ಯದಿ
ಶೈವ ಮಾಹೇಶ್ವರರ ಭೇದವು ಕರ್ಮಮಾತ್ರದೊಳು ।
ಶೈವ ಮಾಹೇಶ್ವರರಲಂತರ
ದೈವ ಮಾಹೇಶ್ವರನು ಮೇಣ್ ಶಿವ
ಗೈವ ಶಬ್ದಾರ್ಥಂಗಳೊಂದಾದಂತೆ ಬೇರಿಲ್ಲ ॥ ೧೨ ॥

ಶೈವರತನ್ನೈ ಜ್ಞಾನಯಜ್ಞದಿ
ಗೈವ ಪೂಜೆಯನ್ನೈದೆ ಬಾಹ್ಯದಿ
ದೈವ ಶಿವನಾಶ್ರಯವ ಪಡೆದಿಹ ಶೈವ ಮಾಹೇಶರ್ ।
ಶೈವ ಮಾಹೇಶ್ವರರು ನಿರುತವು
ಗೈವ ಯಜ್ಞಂ ಜ್ಞಾನಕರ್ಮವು
ದೈವ ಶಿವನೋಳೈಕ್ಯಪೊಂದಲು ನೋಂತನೋಂಪಿಯವು ॥ ೧೩ ॥

ವೀರಶೈವಸ್ಥಲದ ಧರ್ಮದೊ
ಳಾರುವರ್ಗವನ್ನೈದೆ ಮಾಡಿದೆ
ವೀರಭಕ್ತನು ವರಮಹೇಶ್ವರ ಸುಪ್ರಸಾದಿಗಳು ।
ಪಾರಮಾರ್ಥಂ ಪ್ರಾಣಲಿಂಗಿಯು
ಧೀರ ಶರಣನು ಶಿವನೊಳೈಕ್ಯನು
ಚಾರು ಷಟ್‌ಸ್ಥಲವಿಂತುಗೈದರು ಶಾಸ್ತ್ರಪಾರಗರು ॥ ೧೪ ॥

ಸ್ಥಲದ ಭೇದಗಳಾರು[1]ಮವರೊಳು
ನೆಲೆಯನರಿತಾಚರಿಪ ಧರ್ಮಿಯು
ಫಲದೊಳೇರಾರೂಢ ಶಿವಜೀವೈಕ್ಯ ಸಾಯುಜ್ಯ ।

---

1 ಷಟ್‌ಸ್ಥಲ—ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ.

ಫಲಮನುಣ್ಣಲು ನೂರುವೊಂದುಂ[1]
ಸ್ಥಲಗಳೇಣಿಯನೇರಿಗೆಲ್ಲುವ
ಕುಲಜನಾಗಲು ವೀರಶೈವದ ಶಾಸ್ತ್ರಸಾರುವುದು ॥ ೧೫ ॥

ಅಂಗಷಟ್‌ಸ್ಥಲಂಗಳು

ಮೊದಲು ಭಕ್ತಸ್ಥಲದಿ ನಡೆದವ
ಮುದದಿ ಮಾಹೇಶ್ವರನೆಯಾಗುವ
ನದರ ಮೇಲ್ಪ್ರಸಾದಿ ಮೇಣು ಪ್ರಾಣಲಿಂಗಸ್ಥ ।
ಮಧುರದಾತ್ಮಾರ್ಪಣೆಯೆ ಶರಣ
ನ್ನದಿದನಳಿಸಲ್ಲೈಕ್ಯ ಶಿವನೊಳು
ಬುಧರು ಸಮ್ಮತದುಕ್ತ ಷಟ್‌ಸ್ಥಲವಿಂತು ತಿಳಿನೀನು ॥ ೧೬ ॥

ಭಕ್ತಸ್ಥಲಂ

ಕಲಶಸಂಭವ ಮುನಿಯೆ ಭಕ್ತ
ಸ್ಥಲವನದರಂತರದ ಭೇದವ
ಪುಲಕವುಣ್ಮುವತೆರದೆ ಬೋಧಿಪೆ ಕೇಳು ಸಮತೆಯೊಳು ।
ಛಲಿಗೆ ಶಿವನೊಳ್ ಪ್ರೀತಿಯುದಿಸಿದ
ಫಲಮೆ ಭಕ್ತಿಯು ಭಕ್ತಧರ್ಮದ
ನಿಲವನೊರೆಯುವ ಬೋಧೆ ಭಕ್ತಸ್ಥಲವು ಭಾವಿಪುದು ॥ ೧೭ ॥

ಪಿಂಡದಾಸ್ಥಲಿ ಪಿಂಡ ಜ್ಞಾನಿಯು
ಕಂಡುದುಸ್ಸಂಸಾರ ಹೇಯದೊ
ಳಂಡಲೆದು ವರದೀಕ್ಷೆಯೀಯುವ ಕರುಣ ಗುರುವಿಂಗೆ ।
ದಂಡವತ್ತೆರಗುತಲೆ ಗುರುಕೃಪೆ
ಗೊಂಡು ದೀಕ್ಷೆಯನೀಯೆ ಲಿಂಗದೊ
ಳುಂಡು ಪಂಚಾಕ್ಷರಿಯ ಧರಿಸುವ ಭಸ್ಮರುದ್ರಾಕ್ಷಿ ॥ ೧೮ ॥

---

[1] ಅಂಗಷಟ್‌ಸ್ಥಲ—೪೪ (ಪಿಂಡಸ್ಥಲದಿಂದ ಸಹಭಾಜನಸ್ಥಲದವರೆಗೆ) ಮತ್ತು ಲಿಂಗ ಷಟ್‌ಸ್ಥಲ ೫೭ (ದೀಕ್ಷಾಗುರುಸ್ಥಲದಿಂದ ಜ್ಞಾನಶೂನ್ಯಸ್ಥಲದವರೆಗೆ) ಒಟ್ಟು ೧೦೧.

ತ್ರಿವಿಧಸಂಪದಮುಭಯದರಿವೊಳು
ಸವಿದು ವರಗುರು ಲಿಂಗಜಂಗಮ
ವಿವರನೊಂದೇಯೆಂಬ ಭಾವದೆ ಸುಪ್ರಸಾದವನು ।
ಕವಿವ ಮಾಯಾ ಮದವ ಮುರಿಯಲು
ವಿವಿಧ ದಾನಂಗಳನು ಕೊಡುವುದು
ಶಿವನ ಭಕ್ತರುಪಾದಿ ನಿರುಪಾದಿಯೊಳು ಸಹಜನೊಳು ॥ ೧೯ ॥

ಇಂತು ಭಕ್ತನು ಹತ್ತುಮೈದುಂ
ಹಂತದಾಗರದಲ್ಲಿ ಬಾಳಲು
ಸಂತಚಿಂತನಗೈದು ಪೇಳ್ದರು ಶಾಸ್ತ್ರಪಾರಗರು ।
ಕಂತುಹರ ಶಿವಭಕ್ತ ಪೂರ್ವದೊ
ಳಿಂತೆ ನಡೆದಂತವರಪರಿಯೊಳು
ನಿಂತು ಭಕ್ತಸ್ಥಲದಿ ಸಾಧನೆ ಮಾಡಲೇಬೇಕು ॥ ೨೦ ॥

(೧) ಪಿಂಡಸ್ಥಲಂ

ಸುಮ್ಮನಾಗಲು ಪಾಪತಾಪವು
ಜನ್ಮಜನ್ಮಾಂತರದ ಪುಣ್ಯದಿ
ಜನ್ಮವೆತ್ತುವ ಶುದ್ಧಜೀವಿಯೆ ಪಿಂಡನೆಂದಿನಿಪ ।
ಚೆನ್ನಶಿವನಿಂ ಶಕ್ತಿಸಂಗದಿ
ಪುಣ್ಯಭೂಮಿಯು ಸೃಷ್ಟಿಯಾಗಿರೆ
ಮುನ್ನಮಾಡಿದ ಪುಣ್ಯಫಲದೊಳು ಪಿಂಡನವತರಿಪ ॥ ೨೧ ॥

ಸರುವದೇವರ ದೇವನೊಬ್ಬನೆ
ಕರುಣಿ ಪರಮಾನಂದ ದಾಯಕ
ನಿರವಿಕಲ್ಪನು ನಿರ್ಗುಣಪ್ರಭು ನಿಷ್ಪ್ರಪಂಚಕನು ।
ಸರುವಜೀವಿಯ ಹೃದಯಸಂಸ್ಥಿತ
ಗರುವದೇವನು ಕರ್ತವರ್ತಿಪ
ಕರುಮವಶದೊಳು ಸುತ್ತುವರಿವೀಜೀವಕೋಟಿಯೊಳು ॥ ೨೨ ॥

ಎಂತುಮನಲಂ ಸೂರ್ಯಕಾಂತದೊ
ಳೆಂತು ತೋಯಂ ಚಂದ್ರಕಾಂತದೊ
ಳಂತೆಯಂಕುರ ಬೀಜಗರ್ಭದಿ ಸಹಜದಿರ್ಪಂತೆ ।
ಅಂತರಾತ್ಮದಿ ಶಿವನೆ ಕುಳಿತು ಚಿ
ರಂತ ಸಾಕ್ಷೀಭೂತನಾಗಿಹ
ಜಂತು ಜಡಕುಂ ದೇವ ದಾನವ ಮಾನವಾದ್ಯರಿಗೆ ॥ ೨೩ ॥

ಬ್ರಹ್ಮನಿಷ್ಠಾ ಶಿವೆ ಸನಾತಿನಿ
ಹಮ್ಮುರಾಜಸ ಸತ್ತ್ವಗುಣ ವೈ
ಷಮ್ಯದಿಂದುತ್ಪನ್ನವೀಯುವ ವಸ್ತುವೀಜಗವು ।
ಬ್ರಹ್ಮಮಯಮಾ ಸೃಷ್ಟಿಸರ್ವಂ
ಬ್ರಹ್ಮಭೋಕ್ತೃಂ ಭೋಜ್ಯ ಮತ್ತಾ
ಬ್ರಹ್ಮದಿಂದಲೆ ಸೃಷ್ಟಿಸರ್ವಕು ಚಿರದೆ ಚೇತನವು ॥ ೨೪ ॥

ಇಂತು ರಾಜಸ ಸತ್ತ್ವಗುಣದ
ತ್ಯಂತ ತಾಮಸಗುಣದುಪಾಧಿ ಚಿ
ರಂತಚೇತನ ಪರಮಶಿವನಂ ವಸ್ತುಮೂರೆಂದು ।
ಚಿಂತನಸ್ಮೃತಿಮತದಿ ಸಕ್ರಮ
ದಿಂತು ಪೇಳ್ದರು ತತ್ತ್ವವೇತ್ತರ
ಏಂತು ಭೋಕ್ತೃಂ ಭೋಜ್ಯಮತ್ತಾ ಪ್ರೇರಕಂ ಶಿವನು ॥ ೨೫ ॥

ಶುದ್ಧಶಂಭುವು ಚಿರದ ಚೇತನ
ಬದ್ಧಕರ್ಮಿಯು ಭೋಕ್ತೃಪಶುವುಳಿ
ದದ್ದು ತಾಮಸರೂಪ ಭೋಜ್ಯವದಿಂತುಮವ್ಯಕ್ತಂ ।
ಶುದ್ಧಬೊಮ್ಮೋಪಾಧಿ ಶಿವನೈ
ಶುದ್ಧಿಗೆಟ್ಟಾ ಪಶುವು ಜೀವಿಯು
ಶುದ್ಧ ತಾಮಸ ಜಡವು ಜಗದೊಳು ಕಾಣದಂತಿಹುದು ॥ ೨೬ ॥

ಮಾಯೆ ಶುದ್ಧಾಶುದ್ಧೆಯಿಬ್ಬಗೆ
ಮಾಯೆ ಶುದ್ಧೋಪಾಧಿಮೋಕ್ಷಕು
ಮಾಯೆಯಾಗಲಶುದ್ಧೆ ಬಂಧಕು ಮೂಲಕಾರಣವು ।
ತೋಯ ಗಂಗಾ ಮೋಕ್ಷಕಾರಿಣಿ
ಮಾಯೆ ಶಿವನಾಶ್ರಯದಲೂರ್ಧ್ವೆಯು
ಮಾಯೆ ಮೋಹಿನಿ ಜೀವಜಡದಾಶ್ರಯವ ಪಡೆಯುವಳು ॥ ೨೭ ॥

ಏಕಶಿವಕಳೆ ಹೊಳೆವುದಾದರು
ಮೂಕ ಜಡಚೇತನದಿ ಜೀವವ
ನೇಕವಿಧದೊಳಿಹುದವಿದ್ಯಾಮಾಯೆಯಾವರಿಸಿ ।
ಏಕಶಿವನೇ ಶಕ್ತಿವಶದೊಳ
ನೇಕ ಮಂಗಳರೂಪ ಧರಿಸುವ
ನೇಕನಾಥಂ ! ಸರ್ವಕರ್ತಂ ! ಜ್ಞಾನಿ ! ಚಿರಮುಕ್ತಂ ! ॥ ೨೮ ॥

ಬದ್ಧಕಿಂಚಿತ್ಕರ್ತನಲ್ಲದ
ಶುದ್ಧದಲ್ಪಜ್ಞಾನಿ ಜೀವನು
ಶುದ್ಧಶಿವದರಿವನ್ನು ವರ್ಜಿಸಿ ಮಾಯೆಮೋಹಿತನು ।
ಬದ್ಧ ಭವಸಂಸಾರಚಕ್ರದೊ
ಳಿದ್ದುಗೈದಿಹ ಕರ್ಮಭೋಗಿಪ
ಹೊದ್ದು ಮಾನವ ದೇವ ದಾನವರಾದಿದೇಹಗಳ ॥ ೨೯ ॥

ಹುಟ್ಟುಸಾವಿನ ಚಕ್ರಗತಿಯಲಿ
ಕಟ್ಟಿ ಮೂರ್ಛಿತ ಜೀವಕೋಟಿಯ
ಹುಟ್ಟು ಜಾತಿಯು ಸುಖವು ದುಃಖಗಳಾಯು ಮೊದಲಾಗಿ ।
ಕಟ್ಟುವಡೆದಿವೆ ಕರ್ಮಪಾಶಕೆ
ನೆಟ್ಟನವ್ಯಯ ನಿತ್ಯನಿರ್ಮಲ
ದಿಟ್ಟಮೂರರ ದೇವದೇವನು ಸೂತ್ರ ಪಿಡಿದಿಹನು ॥ ೩೦ ॥

ಭೂರಿ ಶುದ್ಧಾಚರಣ ಕರ್ಮದೆ
ಜಾರಿಬೀಳ್ವವು ಮೂರು ಮಲಗಳು
ಕಾರುಣಿಕ ಶಿವಕೃಪೆಯು ದೊರಕಿದ ಶುದ್ಧಮಾನಸಿಗೆ ।
ಪ್ರೇರಕಂ ಪ್ರಭುಶಂಭು ಕರುಣದಿ
ತೋರುವನು ಹಿತಮಾರ್ಗ ಜೀವಿಗೆ
ದಾರಿವರಿಯಲು ಮೋಕ್ಷಪದವನ್ನಿತ್ತು ಪೊರೆಯುವನು ॥ ೩೧ ॥

ಶುದ್ಧಮಾನಸಿ ಬಿಡದೆಮಾಡುವ
ಶುದ್ಧಕರ್ಮಾಚರಣೆ ಪಡೆಯುವ
ಶುದ್ಧಭಕ್ತಿಯ ಬೆಳೆಯು ಸಿರಿಯನು ಶಿವನ ಕರುಣದೊಳು ।
ಶುದ್ಧ ಭಕ್ತಿಯು ಶಿವನೊಳುದಿಸಲು
ಬಿದ್ದು ಕಳೆವುದು ದೇಹವಾಸನೆ
ಶುದ್ಧದೇಹಿಯು ಪಿಂಡನೆಂಬಭಿಧಾನದಿಂ ಮೆರೆವ ॥ ೩೨ ॥

## (೨) ಪಿಂಡಜ್ಞಾನಿಸ್ಥಲಂ

ದೇಹವಾತ್ಮವದೆಂದು ಚಾರ್ವಕ
ಬಾಹ್ಯಸಿರಿಸೊಬಗೆಂದು ಲೌಕಿಕ
ದೇಹದೊಳಗಣ ಹರಣವಾತ್ಮವದೆಂದು ಕೆಲರಮತ ।
ಸ್ನೇಹಬುದ್ಧಿಯದಾತ್ಮಬುದ್ಧಗೆ
ಮೋಹಿಪೇಂದ್ರಿಯವಾತ್ಮಕೆಲರಿಗೆ
ದೇಹವಾತ್ಮವಿವೇಕಿ 'ಪಿಂಡಜ್ಞಾನಿ' ಶಿವಮತಿಗೆ ॥ ೩೩ ॥

ಇರುವ ದೇಹೇಂದ್ರಿಯದಹಂಗಳು
ನಿರುಪಿಸುತ್ತಿವೆ ಸುಖವು ದುಃಖಗ
ಳಿರದೆ ಮರಣಕೆ ಸಲುವ ದೇಹವದಾತ್ಮವೆಂತಹುದು ।
ಮೆರೆವಕರಣೇಂದ್ರಿಯಗಳಾದಿಗೆ
ಬೆರೆಯದೊಲಿದ್ದಾತ್ಮಬೋಧಕ
ನಿರವ ಬೇರೆಯೆ-ಎಂಬ ಪಿಂಡಜ್ಞಾನಿಯಾತ್ಮರತಿ ॥ ೩೪ ॥

ದೇಹನಶ್ವರ ಮೇಣು ನಾನಾ
ದೇಹರೂಪವಧರಿಸಿ ನಾನಾ
ದೇಹಕರ್ಮಾದಿ ನಿರುತನಾಗಿದೆ ಪೂರ್ವದಾರ್ಜಿತದಿ ।
ದೇಹದೇಗುಲ ಬೆಳಗುವಾತ್ಮನು
*ದೇಹಮಸ್ಥಿರವಾತ್ಮನಮರನು
ದೇಹಭಾವವನೀಗಿ ಶಿವನಾಗೆಂದು ಬೋಧಿಪನು ॥ ೩೫ ॥

ಜೀವ ಬೇರೆಯು ದೇಹ ಬೇರೆಯು
ಜೀವಿಯಾತ್ಮಕೆ ಗೇಹ ದೇಹವು
ಜೀವದೇಹವು ಶಿವನನರಿತ ವಿವೇಕಿ ಪಿಂಡಜ್ಞ ।
ಜೀವಕಾಶ್ರಯ ದೇಹಮಸ್ಥಿರ
ಜೀವ ದೇಹದ ಮೋಹವಂ ಬಿಡೆ
ಕಾವ ಶಿವನಿಂದಾತ್ಮಬೋಧೆಯ ಪಡೆದು ಪಿಂಡಜ್ಞ ॥ ೩೬ ॥

## (೩) ಸಂಸಾರ ಹೇಯಸ್ಥಲ

ಜನ್ಮಜನ್ಮಾಂತರದ ಪುಣ್ಯವು
ಜನ್ಮಕಂಟಿದ ದೋಷ ಕಳೆಯಲು
ಪುಣ್ಯವಾಸನೆಯಿಂದ ನಿತ್ಯಾನಿತ್ಯ ವರಿತಂಗೆ ।
ಚಿನ್ಮಯಾನಂದಾತ್ಮ ಶಿವನೊಲ
ವುಣ್ಮೆ ಸಂಸಾರದಲಸಾರವು
ಕಣ್ಣು ತೆರೆವುದು–ರಾಗವಿರದೈ ಬಣ್ಣದೀಜಗದಿ ॥ ೩೭ ॥

---

[1] ಜೀವೋಬ್ರಹ್ಮೈವನಾಪರಃ,— ಶಾಂಕರಸಿದ್ಧಾಂತ.
ಜೀವನು ' ಬ್ರಹ್ಮ 'ನೇ ಆದರೂ ಅಜ್ಞಾನದಿಂದ ತಾನು ಬೇರೆಯೆಂದು ತಿಳಿದಿರುವನು.
ಜ್ಞಾನೋದಯದಿಂದ ತಾನೇ ಬ್ರಹ್ಮನೆಂಬರಿವಾಗುವುದು.

ಧರೆಯು ಸತಿಸುತರಾದಿ ಸಂಪದೆ
ಹರಿವನೀರಿನ ಮೇಲಗುಳ್ಳೆಯು
ಪರದ ಸಗ್ಗವು ಪುಣ್ಯತೀರ್ವೆಯು ಬಯಸ ಸುವಿವೇಕಿ ।
ಮರಣನಿಶ್ಚಯ ಜನನಮುಖದೊಳು
ಮರಳಿ ಜನನವು ಮರಣನಂತರ
ಸರುವಜೀವಿಗೆ ಜನನ ಮರಣದ ಚಕ್ರಸುತ್ತಿಹುದು ॥ ೩೮ ॥

ಮತ್ಸ್ಯ ಕೂರ್ಮ ವರಾಹ ನರಹರಿ
ಮತ್ತೆ ರಾಮನು ಕೃಷ್ಣ ಜನ್ಮವ
ನೆತ್ತಿಬಂದಾವಿಷ್ಣು ಪರಮಗೆ ತಪ್ಪಿತೇ ಮರಣ ।
ಸುತ್ತುವರಿವೀ ಹುಟ್ಟುಸಾವಿನ
ಬಿತ್ತು ಜೀವಿಯು ಕರ್ಮವಶದೊಳು
ದತ್ತತಾಪತ್ರಯದಿ ಬೇಗುದಿಗೊಂಡು ಚಿಂತಿಸುವ ॥ ೩೯ ॥

ಕರ್ಮಫಲದಿಂ ಜನ್ಮವೆತ್ತಿಹ
ಧರ್ಮದಿಂ ಚ್ಯುತದೇಹಿ ದಹಿಸುತ
ಲಿರ್ಪ ತಾಪತ್ರಯದವಹ್ನಿಯೊಳೆಲ್ಲಿ ವಿಶ್ರಾಂತಿ ? ।
ಹಿರ್ಮೆ ದುಃಖವದಾಧಿಯಾತ್ಮಿಕ
ದೊರ್ಮೆ ದುಃಖವದಾಧಿಭೌತಿಕ
ದೊರ್ಮೆ ದುಃಖವಿದಾಧಿದೈವಿಕ ಬೆನ್ನುಬಿಡದಿರಲು ॥ ೪೦ ॥

ಆಧಿಯಾತ್ಮಿಕ ದುಃಖವಿಬ್ಬಗೆ
ಬಾಧೆ ಬಾಹ್ಯವು ಮೇಣದಂತರ
ಬಾಧೆ ದೈಹಿಕ ರೋಗ್ಯ ರುಜನಿಗಳಾಗೆ ಬಾಹ್ಯವನು ।
ಬಾಧೆ ರಾಗದ್ವೇಷ ಕಾರಣ
ಭೇದಿಸಲ್ಲೆದೆಯಿರಿದದಂತರ
ಭೇದ ದೈಹಿಕ ಮಾನಸಿಕಮೆಂಬೆರಡು ತೆರನಾಯ್ತು ॥ ೪೧ ॥

ಬಾಧೆಗರಸಂ ಮೂಲಕಾರಣ
ಮಾಧಿಭೌತಿಕಮೆಂಬ ದುಃಖವು
ಬಾಧೆ ಭೂತ ಪಿಶಾಚ ಯಕ್ಷರೊಳಾಧಿದೈವಿಕವು
ಭೇದಬುದ್ಧಿಯ ಕರ್ಮಬದ್ಧಗೆ
ಮೇದಿನಿಯೊಳಗೆ ಮೇಣುಸಗ್ಗದೆ
ಬಾಧೆ ತಪ್ಪದು ಲೇಶಮಾತ್ರದ ಸೌಖ್ಯಮಿರದಂತು ॥ ೪೨ ॥

ಹೊಳೆದಡಗುವೀ ಮಿಂಚುಬಳ್ಳಿಯು
ಹೊಳೆಯೊಳೇಳುವ ವೀಚಿಮಾಲೆಯು
ಕಳೆದುಪೋಗುವ ದೀಪಶಿಖೆಯಂತಸ್ಥಿರವು ಸಿರಿಯು ।
ಮಲದಕೋಶಕು ಮೇಣು ದುಃಖಕು
ಬಿಲದಪರಿಯೋಳಿರುವ ದೇಹ
ಕ್ಕೊಲಿದುಮೋಹಿಪನೆಂತು ಪಂಡಿತರಾಗವಿರಹಿತನು ॥ ೪೩ ॥

ಹೇಸಿಗೆಯ ಮಲಭಾಂಡದೇಹವು
ನಾಶಶೀಲವು ದುಃಖಮೂಲವು
ರೋಶಿಪೋದ ವಿವೇಕಿರತನ್ನೆಯಾತ್ಮತತ್ತ್ವದೊಳು ।
ಈಶಿಗೆಲ್ಲುವ ನಿಚ್ಚಯಾತ್ಮನು
ತೋಷಗೊಳ್ಳುವ ಶುದ್ಧ ಹೃದಯನು
ತೋಷಗೊಳ್ಳನು ಕೆಡುವದೇಹದಿ ಸತಿಯು ಸುತರಲ್ಲಿ ॥ ೪೪ ॥

ಸ್ವಾನುಭಾವಿಯು ಬಂಧುಬಾಂಧವ
ಗೇನು ಸಕಲೈಸಿರಿಯು ಕುಲಮದ
ಕೇನು ಮನವಂಗೊಡದೆ ವೈರಾಗ್ಯವನೆಯಾಧರಿಪ ।
ತಾನು ತಾನಾದಾತ್ಮರಾಗಿಯು
ಸ್ವಾಮಿ ಶಿವನೋಳೈಕ್ಯಪೊಂದಲು
ಮೌನದೋಳ್ ಸಂಸಾರಪಾಶದ ಛೇದಕೆತ್ನಿಸುವ ॥ ೪೫ ॥

ಯಾರು ನಿತ್ಯಾನಿತ್ಯವರಿತವ
ನಾರು ಸುಕೃತಿಯೊ ಮೇಣು ಶುದ್ಧನೊ
ಯಾರು ಬ್ರಹ್ಮೋಪೇಂದ್ರ ವೈಭವಮಚಿರವೆಂದಿಹನೊ ।
ಧೀರ ಪಿಂಡಜ್ಞಾನಿಯವನೇ
ವೀರಭಕ್ತಿಯ ಭವದನಾಶಕ
ಚಾರು ಶಶಿಧರ ನಿತ್ಯಪದಯುತ ಸಾಂಬನಲ್ಲಿಡುವ ॥ ೪೬ ॥

ಇಂತು ರೇಣುಕ ಗೀತೆಯೊಳು ಸಾ
ದ್ಯಂತ ತತ್ತ್ವಮನೆಲ್ಲ ಪರಿಕಿಸು
ತೆಂತು ಶೈವದಿ ವೀರಶೈವಮತೋಚ್ಚತಮವೆಂದು ।
ಸಂತರೇಣುಕ ಸಿದ್ಧಮಾಡುತ
ಚಿಂತೆಯೋಳಿಹ ಮುನಿಗೆ ಪೇಳಿದ
ನಿಂತು ಭಕ್ತಸ್ಥಲದಿ ಮೂರನು ಸಂಧಿಸಂಪೂರ್ಣಂ ॥ ೪೭ ॥

ಐದನೆಯ ಸಂಧಿ ಸಂಪೂರ್ಣಂ

ಸಂಧಿ ಆರಕ್ಕಂ ಪದನು ಇನ್ನೂರಹದಿನಾಲ್ಕಕ್ಕಂ ಮಂಗಳಮಸ್ತು

---

ಆಗಮಗಳು—ಶೈವ, ಪಾಸುಪತ, ಲಾಕುಳ, ಸೋಮ—ಎಂದು ನಾಲ್ಕು ವಿಧ ಶೈವಾಗಮಗಳು—ವಾಮ, ದಕ್ಷಿಣ, ಮಿಶ್ರ, ಸಿದ್ಧಾಂತಂಗಳೆಂದೂ, ಇವನ್ನನುಸರಿಸುವವರು—ಶಾಕ್ತೇಯರು, ಭೈರವರು, ಸಪ್ತಮಾತೃಕರು ಶಿವಾದ್ವೈತಿಗಳೆಂದೂ ಕರೆವರು. ಶಿವಾದ್ವೈತ—ಷಟ್‌ಸ್ಥಲಸಿದ್ಧಾಂತದಲ್ಲಿ ಎರಡು ಪ್ರಕಾರಗಳಿವೆ. ಅವು (೧) ಅಂಗಷಟ್‌ಸ್ಥಲ (೨) ಲಿಂಗಷಟ್‌ಸ್ಥಲ ಎಂದು, ಒಂದನೆಯದು ಭಕ್ತಿ, ಕರ್ಮ, ಜ್ಞಾನಗಳೆಂಬ ಕ್ರಿಯಾಪ್ರಧಾನ ಜ್ಞಾನಯೋಗ ಮತ್ತೊಂದು ಜ್ಞಾನಪ್ರಧಾನ ಲಯಯೋಗ. ಅಷ್ಟಾವರಣ ರಕ್ಷೆಯಲ್ಲಿದ್ದು ಸರ್ವಾರ್ಪಣ ಭಾವದಿಂದ ಜೀವ ಶಿವನಾಗುವುದೇ—ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬೀಷಟ್‌ಸ್ಥಲಗಳ ಗುರಿ.

# ಆರನೆಯ ಸಂಧಿ

## ಶ್ರೀ ಗುರುಕಾರಣ್ಯ ಮತ್ತು ಲಿಂಗಧಾರಣಸ್ಥಲ ನಿರೂಪಣಂ

ಸೂಚನೆ—ವರದ ರೇಣುಕ ಬೋಧಿಸಿದರಂ
ತರದ ಭಕ್ತಸ್ಥಲದಿ ಮುಂದಿನ
ವೆರಡು ಗುರುಕಾರುಣ್ಯವನು ಮೇಣ್ ಲಿಂಗಧಾರಣವ ॥

### (೪) ಗುರುಕಾರುಣ್ಯಸ್ಥಲಂ

ದುರಿತ ಸಂಸಾರೋರ್ಮಿಷಹರ ಶಿವ
ನರಿಯಲಿಚ್ಛಿಪ ಶುದ್ಧಮಾನಸಿ
ವರವಿವೇಕದೆ ವೀರವೈರಾಗ್ಯವನೆಯಾಧರಿಸಿ ।
ಚರಿಪ ಸತ್ಸಂಗದೊಳು ಮಂಗಳ
ದರಿವುಬೋಧಂಗೊಡುವ ಸದ್ಗುರು
ಚರಣ ಸನ್ನಿಧಿಗಾಗಿ ನಿಡುತಪಗೈದು ಹಾರೈಪ ॥ ೧ ॥

ಯಾರು ಮೋಹವಿಭಂಗನಾತ್ಮವಿ
ಚಾರಪರ ಸತ್ಕೀರ್ತಿಲೋಭವಿ
ದೂರ ಮೇಣ್ ದುರ್ವಿಷಯ ವಿಭ್ರಮ ಮುಕ್ತಿಪದಯುತನೊ ।
ಯಾರು ಶಿವಸಿದ್ಧಾಂತ ತತ್ತ್ವದ
ನಾರು ನಿಸ್ಸಂದೇಹಿ ಧಾರ್ಮಿಕ
ನಾರು ನಿಜನುಡಿ ನಡೆದು ತೋರಿಸಬಲ್ಲ ತಂತ್ರಜ್ಞಂ ॥ ೨ ॥

ಯಾರು ದುರಿತಾಚಾರವರ್ಜಿತ
ನಾರು ವಂಶಪರಂಪರಾಗತ
ದಾರಿ ಬಿಡದಾಚರಿಸಿ ಸನ್ನಡೆ ನಡೆದು ತೋರುವನೋ ।
ಯಾರು ಮಾನಿಯೊ ಯಾರು ಮೌನಿಯೊ
ಯಾರು ಶಾಂತನೊ ಶಿವನ ನೆನೆಯು
ತ್ತಾರು ನಿತ್ಯಾನಿತ್ಯದರಿವಿನ ಪರಮತಾತ್ತ್ವಿಕನೋ ॥ ೩ ॥

ಮೂರು ಬೆರಳೊಳು ಭಾಳದಾದಿಯೊ
ಳಾರು ಭಸಿತವನರಿತುಧರಿಸುವ
ನಾರು ಪುರಹರ ರುದ್ರದಕ್ಷಿಯ ಮಾಲೆಧರಿಸುವನೊ ।
ಯಾರು ಪೂಜಿಪ ಲಿಂಗ ಶಿವನನು
ಯಾರದಂಗವು ಲಿಂಗಸುಯುತ
ನಾರು ಲಿಂಗಾಂಗದಸುಭಾವಾದ್ವೈತ ಯೋಗಜ್ಞಂ ॥೪॥

ನೂರುವೊಂದರ ಲಿಂಗದಂಗದ
ಚಾರು ಷಟ್‌ಸ್ಥಲ ಭೇದವರಿತವ
ನಾರು ಮಂಗಲವಚನವಾಡುವ ವರದ ವಾಗೀಶಂ ।
ಯಾರು ಕರುಣಾದೃಷ್ಟಿ ಬೀರಲು
ಜಾರಿ ಬೀಳ್ವವೊ ಮೂರುಮಲಗಳು
ಕಾರುಣಿಕನಾ ಗುರುವು ಕರುಣಂದೋರಲಾಶ್ರಯಿಪಂ ॥೫॥

ಮುಕ್ತಿದೋರುವ ಪರಮಗುರುವನು
ಭಕ್ತಿಭಾವದಿ ಭಯದಿ ವಿನಯದೊ
ಳುಕ್ತಶಾಸ್ತ್ರದ ವಿಧಿಗೆ ತಪ್ಪದೊಳರ್ಥವರುಷಾಂತ್ಯಂ ।
ಯುಕ್ತವಾಗಲು ವರುಷಪೂರ್ಣವು
ಭಕ್ತಿಪೂರ್ವಕ ಸೇವೆಮಾಡುವ
ಭಕ್ತಿಪೂರ್ಣವು ಕರುಣಭಿಕ್ಷೆಯ ಗುರುವು ದಯಕರಿಸೆ ॥೬॥

ಕರುಣೆಗೊಂಡಾಚಾರ್ಯವರ್ಯನ
ಚರಣತಲದೊಳ್ಕೆಡೆದ ಶಿಷ್ಯನು
ಕರವಜೋಡಿಸಿ ಕಟಿಯಬಂಧಿಸಿ ಬೇಡಬೇಕಿಂತು ।
ಶರಣಗುರುವೆ ಕಲ್ಪತರುವೇ
ನರಳುತಿಹನ್ಯೆ ಭವದರೋಗದಿ
ಪೊರೆಯೊಬೇಗದಿ ಶಿವನನರಿತಾನಂದಸಾಗರನೇ ॥೭॥

ಇಂತು ಪ್ರಾರ್ಥಿಪ ಶುದ್ಧ ಶಿಷ್ಯನ
ಚಿಂತೆಯೊಂತಿಹ ವಿನಯಭಕ್ತನೊ
ಳಂತರಂಗದಿ ಶಕ್ತಿಪಾತವ ಕಂಡ ಗುರುವರನು ।
ಚಿಂತೆಗಾಕರ ಮಾಯಬಂಧವ
ನಂತ್ಯಗೊಳಿಸಲು ಶಿವನಯೋಗವ
ನಂತರಂಗಕೆ ಬೋಧಗೊಡುವನು ದೀಕ್ಷೆ ಮೂರರೊಳು ॥ ೮ ॥

ದುರಿತ ಮಾಯಾಪಾಶ ಬಂಧಂ
ಹರಿಯೆ ಶಿಷ್ಯನ ಮೂರುಮಲಗಳ
ನಿರದೆ ತೊಳೆಯಲು ಗುರುವು ಪರಶಿವನರಿವ ಮರ್ಮವನು ।
ಕರುಣದೀಯುವ ಪರಿಯೆ ದೀಕ್ಷೆಯು
ಪರವಬೆಳಗಲು ಬೆಳಗನೂಡುವ
ನರಿವಿನಾಗರನಾದ ಗುರುವರ ಕರುಣಸಾಗರನು ॥ ೯ ॥

ವೇಧರೂಪಂ ವೇಧದೀಕ್ಷೆಯು
ಬೋಧರೂಪಂ ಮಂತ್ರದೀಕ್ಷೆಯು
ಬಾಧೆಹರಣಂ ಕ್ರಿಯೆಯದೀಕ್ಷೆಯ ಕಟ್ಟುಪಾಡಿಂಗೆ ।
ವೇಧಿಸಲು ಗುರುಕರುಣದೃಷ್ಟಿಯು
ಭೇದಿಪುದು ಭವ ! ಶಿರದಿ ಕರವಿಡೆ
ಬಾಧೆಪಡುತಿಹ ಶಿಷ್ಯನೆದೆಯೊಳು ಶಾಂತಿ ನೆಲೆಸುವುದು ॥ ೧೦ ॥

ಮಂತ್ರಮಾತ್ರದ ಬೋಧೆಯದುವೆ
ಮಂತ್ರದೀಕ್ಷೆಯು ಕರ್ಣಮೂಲದಿ
ಮಂತ್ರಸಿದ್ಧಿಯ ಪಡೆದ ಗುರುವುಪದೇಶ ನೀಡಲ್ಕೆ ।
ತಂತ್ರಶಾಸ್ತ್ರದ ವಿಧಿವಿಧಾನದಿ
ಮಂತ್ರಸಿದ್ಧನು ಕುಂಡಮಂಡಲ
ಯಂತ್ರಸೀವಾ ದೀಕ್ಷೆತಾಕ್ರಿಯೆಯೊತ್ತರದ ದೀಕ್ಷೆ ॥ ೧೧ ॥

ಶುಭದಮಾಸದಿ ಶುಭವದಿನದೊಳು
ಶುಭವಕಾಲದಿ ಶುಭದ ತಿಥಿಯೊಳ
ಗಭವಭಕ್ತರಿಗಿತ್ತು ಭಸ್ಮವ ವೀಳ್ಯಪೂರ್ವಕದಿ ।
ಶುಭ್ರಗಂಗಾಸ್ನಾನನಂತರ
ಶುಭ್ರದಂತನ ಶುಭ್ರದೇಹಿಯ
ಶುಭ್ರಶುಕ್ಲಾಂಬರವ ಧರಿಸಿದ ವಟುವು ಕಾದಿರಲು ॥ ೧೨ ॥

ಬರೆದು ಮಂಡಲ ಪಂಚಗಳಶದೊ
ಳೆರದು ಮಂತ್ರೋದಕವ ವಟುವ
ನ್ನಿರಿಸಿ ಪೂರ್ವಾಭಿಮುಖ ಗುರುವುಂ ಕುಳಿತು ಬಡಗಣ್ಗೆ ।
ಹರನ ಸಂಕೀರ್ತನವಪಾಡಿಸಿ
ಪರಮ ಶಿವಚಿಂತನದಿ ಮುಳುಗಲು
ಗುರುವು ಶಿಷ್ಯಂಗಿತ್ತು ಚೋದನೆ ಹರಸಬೇಕಯ್ಯ ॥ ೧೩ ॥

ಭಸ್ಮಧಾರಣವಿಧಿಯ ಸಮ್ಮತ
ಭಸ್ಮಧಾರಣ ಮಾಡಲೋದಿಸಿ
ಭಸ್ಮಧರಿಸಲು ದೇಹದಾಯಾಸ್ಥಾನದೊಳು ಮುದದಿ ।
ಭಸ್ಮಭೂಷಿತ ವಟುಗೆ ಮೂರ್ಸಲ
ಭಸ್ಮಮಿಶ್ರಿತ ಕಲಶದುದಕವ
ಭಸ್ಮಭೂಷಣದುಳಿದ ಋತ್ವಿಜರೆರೆಯಬೇಕಯ್ಯ ॥ ೧೪ ॥

ಮರಳಿಶುದ್ಧೋದಕದಿ ಮಿಂದೀ
ಗುರುವು ಶಿಷ್ಯರು ವಿಧಿವಿಧಾನದಿ
ಕರದ ಲಿಂಕಾರ್ಚನದನಂತರ ಕರ್ಣದಕ್ಷಿಣದೋಳ್ ।
ಗುರುವು ಪಂಚಾಕ್ಷರಿಯ ಮಂತ್ರವ
ನೊರೆದು ಭವಸಾಗರವ ದಾಂಟಲು
ಚಿರದನೌಕೆಯಿದೆಂದು ನಂಬುಗೆಗೊಡುವ ಶಿಷ್ಯಂಗೆ ॥ ೧೫ ॥

ಪರಮಪಂಚಾಕ್ಷರಿಯ ಗೋಪ್ಯದ
ಲೊರೆದ ಗುರುವರ ಮಂತ್ರಮನನದ
ಹಿರಿಯಮಹಿಮೆಯ ಪೇಳಿಮಂತ್ರಕೆ ಋಷಿಯಧುದಾರೆಂದು ।
ಪರಮದಧಿದೇವತೆಯದಾರೆಂ
ದೊರೆದು ಛಂದವ ಶಕ್ತಿಬೀಜವ
ಕರಶರೀರ ನ್ಯಾಸಮಾಡುವ ಮರ್ಮತಿಳಿಸುವನು ॥ ೧೬ ॥

ಅಂತೆಪೂಜಿಸುತಿಷ್ಟಲಿಂಗವ
ಮಂತ್ರಮೂಲವನರಿತು ನೆನೆಯಲು
ಕಂತುಹರ ಶಿವಕೃಪೆಯು ಸತತಂ ಹುಡುಕಿ ಬರುತಿಹುದು ।
ಇಂತು ಗುರುಕಾರಣ್ಯಪಡೆಯಲು
ಸಂತಶರಣರ ಮಾರ್ಗ ಪಿಡಿಯಲ
ನಂತಶಾಂತಿಯ ನೆಲೆಯಸೇರಲು ಶಿವನಕೃಪೆಬೇಕು ॥ ೧೭ ॥

## ಲಿಂಗಧಾರಣಸ್ಥಲಂ

ಶಿಲೆಯು ಬಾಣಂ ಸ್ಫಟಿಕ ಶೈಲಜ
ಶಿಲೆಯುಮಥವಾ ಚಂದ್ರಕಾಂತದ
ಶಿಲೆಯು ಹೊಳೆಯುವ ಸೂರ್ಯಕಾಂತದ ಶಿಲೆಯುದೊಂದರಲಿ ।
ಕಲೆಯುಪೂರ್ಣದ ಛಿದ್ರಮಿಲ್ಲದ
ಚಲುವಿನಾಕರಮಾಗಿ ರಚಿಸಿದ
ಸಲುವ ಲಿಂಗದೊಳಾಯ್ದುವೊಂದನು ವಿಧಿಯೊಳರ್ಚಿಪುದು ॥ ೧೮ ॥

ಜಂಗಮಾರ್ಯನು ಶೋಧಿಸಾರಿಸಿ
ಲಿಂಗವೊಂದನ್ನಿಟ್ಟು ಪೀಠದಿ
ಕಂಗಳಂದಮದಾಗೆ ಪೂಜಿಸಿ ಮಂತ್ರಪೂತದೊಳು ।
ಲಿಂಗ ಶಿವನೋಳುತ್ತಮಾಂಗದ
ಮಂಗಳಾತ್ಮಕ ಕಳೆಯನೆಬ್ಬಿಸಿ
ಸಂಗಮಿಸುವನು ಶಾಸ್ತ್ರವಿಧಿಯೊಳು ಶಿಷ್ಯಹರಣವನು ॥ ೧೯ ॥

ಲಿಂಗ ಶಿವಕಳೆ ಜೀವಕಳೆಯನು
ಸಂಗಮಿಸಿ ಗುರುಶಿಷ್ಯಹಸ್ತದಿ
ಲಿಂಗ ಶಿವನನ್ನಿಟ್ಟು ಕಟ್ಟ್ಯಾಣತಿಯನಿಂತೀವ ।
ಲಿಂಗವಿದನೇ ಪ್ರಾಣವೆಂದರಿ
ಲಿಂಗ ಶಿವನನ್ನಗಲಬೇಡವು
ಲಿಂಗಬಿಡ್ವೊಡೆ ತೊರೆಯೊಹರಣವ ಮೋಕ್ಷಸಂಪದಕೆ ॥ ೨೦॥

ಕರುಣ ಗುರುವಿನ ಶಾಸ್ತ್ರವೇದಿಯ
ಪರಮಬೋಧೆಯ ಶಿರದೊಳಾನುತ
ಚರಣಕಮಲಕ್ಕೆರಗಿ ಶಿಷ್ಯನು ಧರಿಪ ಲಿಂಗವನು ।
ಹರಣಪಕ್ಷಿಯು ಹಾರುವನ್ನಂ
ಭರಣಮಾಡುವ ಪರಮಲಿಂಗಿಯು
ತೊರೆಯೆ ಹರಣವ ಲಿಂಗಸಂಗದಿ ಪಡೆವ ನಿಜಪದವಿ ॥ ೨೧॥

[1] ಅಂಗದೊಳು ಶಿವಲಿಂಗಧಾರಣ
ಭಂಗಭವಭಯಪುಣ್ಯಪೋಷಣ
[2] ಲಿಂಗ ಧರಿಪರು ನಿಗಮವಾಗಮವರಿತ ಮುನಿವರರು ।
ಲಿಂಗ ಶಿವನನು ಬಾಹ್ಯವಂತರ
ಲಿಂಗಧಾರಣದೆರಡು ಬಗೆಯೊಳು
ಸಂಗದೂರರು ಮೋಕ್ಷಕಾಂಕ್ಷಿಪರಿರದೆ ಧರಿಸುವರು ॥ ೨೨॥

---

*[1] ಅಮಿತಿ ಬ್ರಹ್ಮಸಾನ್ನಾತ್ರಂ ಗಚ್ಛತೀತಿ ಗಮುಚ್ಯತೇ ।
ರೂಪತ್ವತ್ಸ್ಯಂಗಮಿತಿಪ್ರಾಜ್ಞೈಃ ರಂಗತತ್ತ್ವವಿಚಿಂತಕೈಃ ॥
ಅಂಗವೆಂಬ ಪದವನ್ನು ವಚನಕಾರರೂ ರೂಪಿಸಿಕೊಂಡಿದ್ದಾರೆ. 'ಅ'— ಎಂದರೆ ಪರಬ್ರಹ್ಮ. ಆದರತ್ತ ಗಮಿಸಿ ಲೀನಗೊಳ್ಳುವುದು 'ಅಂಗ'.

[2] ಲೀಯತೇಗಮ್ಯತೇ ಯತ್ರಯೇನಸರ್ವಂ ಚರಾಚರಂ ।
ತದೇ ತಲ್ಲಿಂಗಮಿತ್ಯುಕ್ತಂ ಲಿಂಗತತ್ತ್ವ ಪರಾಯಣೈಃ ॥—
ಆಗಮದಲ್ಲಿ ಜೀವಾತ್ಮನೇ ಮೊದಲಾದ ಚರಾಚರಗಳನ್ನೆಲ್ಲಾ ತನ್ನೊಳಗೆ ಲೀನ ಮಾಡಿಕೊಳ್ಳುವುದು 'ಲಿಂಗ' ಎಂದು ಹೇಳಿದೆ.

ಸಚ್ಚಿದಾನಂದಂ ಶಿವಾತ್ಮಕ
ದುಚ್ಚ ಲಿಂಗವು ವಿಶ್ವಕಾರಣ
ಮಿಚ್ಛೆಯೊಳದಂ ಧ್ಯಾನರೂಪದೆ ಧರಿಸಲಂತರವು ।
ಸಚ್ಚರಿತ್ರರು ಹೃದಯಮಂದಿರ
ದುಚ್ಚಪೀಠದೊಳಿಟ್ಟುಪೂಜಿಸಿ
ನಿಚ್ಚನೆನೆವರು ಸರ್ವಶುಭಕರ ಭಾವಲಿಂಗವನು ॥ ೨೩ ॥

ವರನಿರಂಜನ ವಿಭವ ಲಿಂಗವು
ಪರದತತ್ತ್ವಂ ತ್ರಿಜಗಕಾರಣ
ಪರಮಶಿವ ಚಿದ್ರೂಪನಿಷ್ಕಲ ನಿರ್ವಿಕಲ್ಪಕವು ।
ನಿರವಯವ ಶಿವನಪ್ರಮೇಯಂ
ಸ್ಫುರಿಪ ಪರಮಾನಂದಲಕ್ಷಣ
ಶರಣ ಪೂಜಿತ ದೇಶ ವಿರಹಿತ ಕಲೆಯಮಯ ಲಿಂಗ ॥ ೨೪ ॥

ಸರ್ವಭೂತದೊಳಡಗಿ ಕಾಣನು
ಸರ್ವಲೋಕಾತೀತ ಪರಶಿವ
ಸರ್ವಕಾಲಕು ಸರ್ವದೇಶಕು ಭಾಸನಾಗುವನು ।
ಸರ್ವಜೀವಿಯ ಹೃದಯಮೂಲದಿ
ಸರ್ವವೇದಾಗಮದೆ ಸಂಸ್ತುತ
ಶರ್ವನೊಬ್ಬನೆ ಭ್ರೂಮಮಧ್ಯದಿ ಹೊಳೆದು ಬೆಳಗುವನು ॥ ೨೫ ॥

ವ್ಯಕ್ತಮಲ್ಲದ್ದ ಪರಿ ಚಿನ್ನವ
ದುಕ್ತದಂತಃ ಬ್ರಹ್ಮವಾಚ್ಯವು
ಮುಕ್ತ ಶಾಶ್ವತ ಪರಮತತ್ತ್ವವು ಭಿನ್ನಭಿನ್ನಾಗಿ ।
ವ್ಯಕ್ತವಿಶ್ವದ ಜೀವಜಡವನು
ನೆಕ್ಕಿನೊಣೆಯುವ ಲಯದಿ ಲೀಲೆಗೆ
ಶಕ್ತಿಸಂಗವನಾಂತು ಸೃಷ್ಟಿಪ ಲಿಂಗವೈ ಬ್ರಹ್ಮ ॥ ೨೬ ॥

ಯಾವಲಿಂಗ ಬ್ರಹ್ಮವಾಚ್ಯವೊ
ಯಾವ ಲಿಂಗಾನಂದಸತ್ತ್ವಯೊ
ಯಾವ ಲಿಂಗದಮಹಿಮೆ ಮಹವನು ಕೂಡೆ ನಡೆಸುವುದೋ ।
ಭಾವಿಸಲ್ಕಾ ಪ್ರಾಣಲಿಂಗವ
ನೋವಿ, ಹೃದಯಾಧಾರ ಮತ್ತಾ
ಭ್ರೂನುಮಧ್ಯದಿ ಕೂಡಿ ಹೊಳೆವುದು ಯೋಗಸಾಧನೆ ॥ ೩೭ ।

ತ್ಯಾಗ ಹೃದಯದೆ ಹವಳಕಾಂತಿಯ
ಯೋಗಮೂಲದೆ ಹೊನ್ನಕಾಂತಿಯ
ಮೂಗಿನಗ್ರದೆ ಫಟಿಕಕಾಂತಿಯ ಯೋಗಿ ಭಾವಿಪುದು ।
ಯೋಗಿ ಧರಿಪಾಂತರದ ಲಿಂಗವು
ಕೂಗಿ ಕೀರ್ತಿತ ನಿರುಪಮಾಧಿಕ
ಮಾಗಿ ; ಹೃದಯಾಂತರದ ಲಿಂಗವು ಬಾಹ್ಯಕಿಂ ಮಿಗಿಲು ॥ ೩೮ ।

ಯಾರು ತನ್ನಯ ಹೃದಯಕಮಲದೆ
ಭೂರಿ ಬೆಳಗಿನ ಲಿಂಗ ಧರಿಪನೊ
ಘೋರ ಸಂಸಾರ್‌ಚಕ್ರ ಸುತ್ತುವ ವೃತ್ತಿಯಿಲ್ಲವಗೆ ।
ಯಾರದನುಸಂಧಾನ ಹೃದಯವೊ
ಸಾರ ವಿದ್ಯಾರ್ಜನೆಯೆ ಪರಶಿವ
ಧೀರಗುರುವರ ಸೇವವೆಂಬಿವು ಮೋಕ್ಷಕಾರಣವು ॥ ೩೯ ।

ವಿರತಯೋಗಿಗೆ ಸಮತಭಾವಿಗೆ
ಪರವನರಿತಗೆ ರುಚಿಪುದಂತರ
ಪರಮಲಿಂಗನಪೂಜೆ ಬಾಹ್ಯದಲಿಂಗದೊಳಲ್ಲ ।
ಹರಿ ವಿರಂಚಿಯು ಶಿವಗಣಂಗಳು
ಪರಮಯತಿಗಳು ಸಿದ್ಧ ಯಕ್ಷರು
ನಿರುತಶಾಂಬರು ಹೃತ್ಕಮಲದೊಳ್ ಜ್ಞಾನಲಿಂಗವನು ॥ ೪೦ ।

ಆದಿ ಸರ್ವರ್ಕು ಮೂಲಕಾರಣ
ಮಾದ ಪರಮಾನಂದಲಕ್ಷಣ
ಮಾದ ಪಂಚಕ್ಲೇಶನಾಶಕಮಾದ ಲಿಂಗಮಿದು ।
ಆದಿಮಧ್ಯಾಂತ ಗುಣ ವಿರಹಿತ
ನಾದ ಶಂಕರನಾತ್ಮಲಿಂಗಮಿ
ದಾದಕಾರಣ ಸರ್ವಯತ್ನದೆ ಭಾವಿಸಂತರದಿ ॥ ೩೧ ॥

ಸರಿಸಮಾನದ ಯೋಗಿಪುಂಗವ
ನಿರಲಿ ಮೇಣಿರದಿರಲಿ ಲಿಂಗಿಯು
ಧರಿಸೆ ದೇಹದೊಳಿಷ್ಟಲಿಂಗವ ಶಿವದಿ ಬೆರೆಯುವನು ।
ಕರುಣ ಗುರುವಿಂದಿತ್ತ ಲಿಂಗವ
ನಿರದೆಧರಿಸಲು ಶಿವನ ಭಾವದಿ
ನಿರುತದೋಳ್ ಶಿವರೂಪಪೊಂದುವ ಭಾವಮಂತಾಗಿ ॥ ೩೨ ॥

ವರದಲಿಂಗಂ ಸ್ಥೂಲಸೂಕ್ಷ್ಮವು
ಪರದಪರವುಂಮೆಂಬ ಮೂರ್ತಿರ
ಧರಿಸೆ ಭಕ್ತಂ ಸ್ಥೂಲದೇಹದೊಳಿಷ್ಟಲಿಂಗಮದು ।
ಭರಿಸೆ ಹೃದಯಂ ಪ್ರಾಣಲಿಂಗವ
ನೊರೆವರಂತದ ಸೂಕ್ಷ್ಮಮೆನುತಲಿ
ಭರಿಸೆ ಭಾವಂತೃಪ್ತಿಲಿಂಗವ ಪರದಪರವಯ್ಯ ॥ ೩೩ ॥

ಸ್ಥಿರದ ಚರದಂತರದಲಿರುತಿಹ
ಪರಮಪಾವನ ಭಾವಲಿಂಗವು
ನಿರವಯುವ ಶಿವಮಪ್ರಮೇಯವು ನಿರ್ಗುಣಬ್ರಹ್ಮ ।
ಹರನಶರಣರು ಬುಧರು ದೇಹದೆ
ಗುರುವುದಯಕರಿಸಿತ್ತಲಿಂಗವ
ಮರೆಯದೆಂದುಂ ಧರಿಪರಿಷ್ಟದನಿಷ್ಟ ಪರಿಹರಕೆ ॥ ೩೪ ॥

ಮೂರುಲಿಂಗಗಳಂತ ಯೋಗಿಗೆ
*ಆರುತೆರದೊಳು ವಿಭಜಿಸಿರುವರು
ಚಾರುಷಟ್‌ಸ್ಥಲ ಭಕ್ತಭಾವವನಿಂಬುಗೊಳ್ಳಂತೆ ।
ವೀರಭಕ್ತನ ಶುದ್ಧಿಮಾಡ್ವಾ
ಚಾರಲಿಂಗವು ನಾಶಿಕೇಂದ್ರಿಯ
ವೀರಮಾಹೇಶ್ವರನ ಜಪದೊಳು ಜಿಹ್ವೆ " ಗುರುಲಿಂಗ " ॥ ೩೫ ॥

ಸುಪ್ರಸಾದಿಯು ಸಕಲರೂಪದೊ
ಳುಂ ಪ್ರಸಾದವನಾತ್ಮಗರ್ಪಿಸೆ
ಸುಪ್ರಕಾಶದಮುಖವು ನಯನದ ದೃಷ್ಟಿ " ಶಿವಲಿಂಗ " ।
ಸುಪ್ರಸಿದ್ಧಾಂಬರವು ಚರ್ಮಂ
ಕ್ಷಿಪ್ರದೊಳಗೆ ಸ್ಪರ್ಶಸುಖದಿಂ
ಸುಪ್ರಸನ್ನತೆಯೀವ ಮಾರುತರೂಪಿ " ಚರಲಿಂಗ " ॥ ೩೬ ॥

ಕಿವಿಯೆ ಶರಣಗೆ ನಾದಬೊಮ್ಮನ
ಸವಿಯೆ ಸುಖವನು ಬೋಧಗೊಡುವುದು
ಕಿವಿಗೆ ಗುರುಮುಖದಿಂ ಪ್ರಸಾದಿಸೆ ಮಂತ್ರ " ವರಲಿಂಗ " ।
ಶಿವನೊಳೈಕ್ಯವ ಪಡೆವಮುನ್ನಂ
ವಿವಿಧಭಾವವನಿಂಬುಗೊಳ್ಳುದು
ಶಿವನಭಾವವು ತುಂಬಿದಾಕ್ಷಣ ಮನವು " ಮಹಲಿಂಗ " ॥ ೩೭ ॥

---

* ಶರಣನ ಶರೀರದ ಷಡ್ಲಿಂಗಗಳು :—೧. ಆಚಾರಲಿಂಗ (ನಾಶಿಕ) ೨. ಗುರುಲಿಂಗ (ನಾಲಿಗೆ) ೩. ಶಿವಲಿಂಗ (ಕಣ್ಣು) ೪. ಚರಲಿಂಗ (ಚರ್ಮ) ೫. ಪ್ರಸಾದಲಿಂಗ (ಕಿವಿ) ಮಹಾಲಿಂಗ (ಮನಸ್ಸು)

೧. ನಾಶಿಕ–(ಮೂಗು)=ಆಚಾರಲಿಂಗ (ಆಚಾರಶೀಲ=ದುರ್ವಾಸನೆ ಹಿಡಿಸುವುದಿಲ್ಲ)
೨. ಜಿಹ್ವೆ–(ನಾಲಿಗೆ)=ಗುರುಲಿಂಗ=(ಮಂತ್ರೋಪದೇಶ ಸಾಧನೆ)
೩. ನಯನ–(ಕಣ್ಣು)=ಶಿವಲಿಂಗ=(ಪ್ರಸನ್ನತೆಯನ್ನು ಸೂಚಿಪುದು ಕಣ್ಣು)
೪. ಚರ್ಮ–(ಮೈದೊಗಲು)=ಚರಲಿಂಗ=(ಸರ್ವವ್ಯಾಪಿಯಾದುದು)
೫. ಕರ್ಣ–(ಕಿವಿ)=ಪ್ರಸಾದಲಿಂಗ=(ಶಿವಾನುಗ್ರಹವನ್ನು ಸ್ವೀಕರಿಸುವ ಸಾಧನ)
೬. ಮನ–(ಮನಸ್ಸು)=ಮಹಾಲಿಂಗ=(ಸ್ಥಿರಮನಸ್ಸು ಧೀಮಂತವಾದುದು)

ಸ್ಥಲದೆ ಭಕ್ತನಿವೃತ್ತಿ ಕಲಯುತ
ಥಲಿ ಮಹೇಶಂಗೆ ಪ್ರತಿಷ್ಠಾ
ಕಲೆಯು ವಿದ್ಯಾ ಶಾಂತ ಶಾಂತಾತೀತವೋತ್ತಮದೀ ।
*ಕಲೆಗಳಾರನು ಲಿಂಗವಾರ
ನ್ನೊಲಿದ ನಿಜಗುಣ ಶಿವನುಪಾಸಕ
ಥಲದಿ ಧರಿಸುತ್ತೇರಿ ಬೆರೆವ ಬ್ರಹ್ಮ ಪರಶಿವನಂ ॥ ೩೮ ॥

ಶಿರದಿ ಕಂಠದಿ ಬಾಹುಮೂಲದಿ
ಕರದ ಮೇಲ್ಗಡೆಯುದರವೆದೆಯೋ
ಳಿರದೆ ಧರಿಸಲು ಲಿಂಗಶಿವನನು ಪರಮದ್ವೈಸಿರಿಯು ।
ಧರಿಸಬಾರದು ನಾಭಿಕೆಳಗಡೆ
ಶಿರದ ಕೇಶಾಗ್ರ, ಗುದ, ಬೆನ್ನಲಿ
ಧರಿಸಲಿಂತೀ ಕೀಳುದೆಶೆಯೊಳು ಪಾಪಕಾರಣವು ॥ ೩೯ ॥

ಲಿಂಗಧಾರಿಯು ನಿತ್ಯಶುದ್ಧನು
ಲಿಂಗಶಿವನನು ಪರಮನಿರ್ಮಲ
ಗಂಗೆಯಿಂದೆರೆದಷ್ಟವಿಧದಾರ್ಚನೆಯನಂಗೈಯೊಳ್ ।
'ಅಂಗ'-'ಲಿಂಗ'ದೊಳಾಗೆ ಗೈಯ್ಯುವ
ನಂಗಲಿಂಗಾರ್ಚನೆಯು ಗುಡಿಯೊಳ್
ಲಿಂಗದರ್ಚನೆಗಿಂತ ಮಿಗಿಲ್ಕೆ ವೀರಶೈವನಿಗೆ ॥ ೪೦ ॥

ಸುರರು ರುದ್ರರು ಹರಿವಿರಂಚಿಯು
ವರದಮುನಿಗಳು ಗೌತಮಾದ್ಯರು
ಪರಮಲಿಂಗವನುತ್ತಮಾಂಗದೊಳಿಟ್ಟು ಪೂಜಿಸರು ।

---

* ಷಟುಸ್ಥಲದಾರುಕಲೆಗಳು :—(೧) ಭಕ್ತ—(ನಿವೃತ್ತಿಕಲಾ). (೨) ಮಹೇಶ (ಪ್ರತಿಷ್ಠಾಕಲಾ) (೩) ಪ್ರಸಾದಿ—(ವಿದ್ಯಾಕಲಾ) (೪) ಐಕ್ಯ—(ಶಾಂತೋತ್ತರಕಲಾ).

ಸಿರಿಯದೇವತೆ ದುರ್ಗೆಸರಸತಿ
ಸುರವ ಮಂಗಳೆಯಾದಿ ಸರ್ವರು
ಹರನ ಭಾವದೊಳಿಷ್ಟಲಿಂಗವ ಹಣೆಯೊಳಿರಿಸಿಹರು ॥ ೪೧ ॥

ಆದಿಯಿಂ ನಿಗಮಾಗಮಂಗಳು
ವೇದಶಾಸ್ತ್ರವು ವರಪುರಾಣವು
ಬೋಧಗೊಡುವವು ವೀರಶೈವಗೆ ಲಿಂಗಧಾರಣವ।
ವೇದಋಕ್ಕಿನ ಮಂತ್ರಸಾರವು [1]
ದಾದಿಲಿಂಗವದುತ್ತಮೋತ್ತಮ
ದಾದಿಶುದ್ಧಬ್ರಹ್ಮರೂಪವು ಧರಿಸೆ ಶಿವನಹನು ॥ ೪೨ ॥

ತದ್ಧಿತಾಖ್ಯಮುತ್ತಮೋತ್ತಮ
ಶುದ್ಧಲಿಂಗಂ ಬ್ರಹ್ಮನೀಶ್ವರ
ಬದ್ಧಜೀವಿಯು ಶುದ್ಧನಾಗುವ ಲಿಂಗಸಂಗದೊಳು।
ಸಿದ್ಧ ಸುಕೃತಿಗೆ ಮಾತ್ರ ಗುರುಕೃಪೆ
ಬಿದ್ದಮಾತ್ರದೆ ದೀಕ್ಷೆ ದೊರೆಯುವುದು
ಬದ್ಧಜೀವಿಗೆ ತಪವಗೈಯ್ಯದೆ ದೊರೆಯ ಲಿಂಗಯ್ಯ ॥ ೪೩ ॥

ಲಿಂಗಧಾರಣ ದೀಕ್ಷೆಪಡೆವರು
ಲಿಂಗವಂತರು। ಪಾಪಮೋಚನ
ಲಿಂಗಧಾರಣ! ಮಂತ್ರಯಾತೇರುದ್ರ [2] ಶಿವಸಾಕ್ಷೀ।
ಲಿಂಗರುದ್ರನೆ! ಪಾಪಸಂಹರ
ದಂಗಶೀಲನೆ ಶಂತಮಯನೇ!
ಮಂಳಾತ್ಮಕ ಲಿಂಗಮೂರುತಿ। ಬೆಳಗು ಬೆಳಗಯ್ಯ ॥ ೪೪ ॥

---

[1] 'ಪವಿತ್ರಂತೇ ವಿತತಂ ಬ್ರಹ್ಮಸ್ಪತೆ'

[2] "ಯಾತೇರುದ್ರ ಶಿವಾತನೂರಘೋರಾಽಪಾಪಕಾಶಿನೀ
ತಯಾನಸ್ತನುವಾಶಂತಮಯಾ ಗಿರಿಶಂತಾಭಿಚಾಕಶೀಹಿ।"

ಅಂಗಲಿಂಗಿಯು ಶುದ್ಧ ಹೃದಯನು
ಲಿಂಗಪೂಜಾ ನಿರತಮಾನಸ
ನಂಗಸರ್ವಕು ಮಾಯ ಮಲಹರದಮಲ ಭಸ್ಮವನು ।
ಜಂಗಮಾರ್ಯನು ಪೇಳ್ದ ವಿಧಿಯೊಳು
ಲಿಂಗದಂಗಕೆ ಧರಿಸಲರಿತರೆ
ಭಂಗಗೊಳುವವು ಮಾಯ ಮಲಗಳು ! ಭಸ್ಮ ಧರಿಸಯ್ಯ ॥ ೪೫ ॥

ಇಂತು ರೇಣುಕಗೀತೆ ಬೋಧಿಪು
ದಂತರಂಗಕು ಬಾಹ್ಯದಂಗಕು
ಮೆಂತು ದೀಕ್ಷೆಯ ಗುರುವು ನೀಡುವನೆಂಬ ಮರ್ಮವನು ।
ಅಂತೆ ಲಿಂಗವಧರಿಸಿ ಪೂಜಿಸಿ
ಶಂತಮಯನನು ಸಾಂಬಶಿವನನು
ಸಂತತಂ ನೆನೆಯಲ್ ಪ್ರಬೋದಿಪ ಸಂಧಿ ಸಂಪೂರ್ಣಂ ॥ ೪೬ ॥

ಆರನೆಯ ಸಂಧಿ ಸಂಪೂರ್ಣಂ.

ಅಂತು ಸಂಧಿ ಏಳಕ್ಕಂ ಪದನು ಇನ್ನೂರರುವತ್ತೆಕ್ಕಂ

ಮಂಗಳಮಸ್ತು.

# ಏಳನೆಯ ಸಂಧಿ

## ಭಸ್ಮ ಮತ್ತು ರುದ್ರಾಕ್ಷಧಾರಣ ಸ್ಥಲನಿರೂಪಣಂ

ಸೂಚನೆ :—ಕರುಣದೊಳಾಚಾರ್ಯನೊರೆದನು
ಪರಮಪಾವನ ಭಸ್ಮಧರಿಸುವ
ನಿರುತ ರುದ್ರಾಕ್ಷಿಯನು ಧರಿಸುವ ವಿಧಿವಿಧಾನವನು ॥

### (೬) ಭಸ್ಮಧಾರಣಸ್ಥಲಂ

ಭಸ್ಮಧಾರಣ ಶುದ್ಧದೇಹನು
ಕಶ್ಮಲಾಪಹ ಹೃದಿಪವಿತ್ರನು
ನಿಶ್ಚಲಾಂತಃಕರಣನುತ್ತಮ ವೀರಶೈವರೊಳು ।
ಭಸ್ಮಭಸಿತವು ಶಿವನರೂಪವು
ಭಸ್ಮಧರಿಸೈ ಜ್ಯೋತಿರೂಪವು
ಭಸ್ಮಧರಿಸಲು ರುದ್ರನಾಗುವನೆಂಬ ಭಾವದೊಳು ॥ ೧ ॥

ಕರಶರೀರನ್ಯಾಸ ಮಂತ್ರದಿ
ಪರಮದಧಿದೇವತೆಯ ನೆನೆಯು
ತ್ತುರಿದು ಸಂಸ್ಕೃತ ಭಸ್ಮ "ಸೋಮಾಧಿಕ"ವು ಯೆನ್ನಿಪುದು ।
ಪರಮ ಭಾಸುರ ಶಿವನಭಾವದಿ
ಧರಿಸೆ ಭಸ್ಮವ ಯೋಗಿಪುಂಗವ
ನಿರದೆ ಕರೆವರು "ನಿರುಪಮಾಧಿಕ"ಮೆಂದು ತಾತ್ತ್ವಿಕರು ॥ ೨ ॥

ಭಸ್ಮದೊಳಿವೆ ಪಂಚ ಭೇದಂ
ಭಸ್ಮ ಭಸಿತಂ ಕ್ಷಾರ ರಕ್ಷಂ
ಭಸ್ಮದಲ್ಲಿ ವಿಭೂತಿಯಷ್ಟೈಸಿರಿಗೆ ಕಾರಣವು ।
ಭಸ್ಮಗೈವುದು ಪಾಪಸಂಹರ
ಭಸಿತಮೀವುದು ಶಿವನಭಕ್ತಿಯ
ಭಸ್ಮ ರಕ್ಷಾ ಭಕ್ತಕವಚಂ ಕ್ಷಾರಮಾಪದವು ॥ ೩ ॥

ಪಂಚಮುಖ ಪರಮೇಶ ತನ್ನಯ
ಪಂಚಮುಖದಿಂ ಗೋವ್ಗಳೈದನು
ಪಂಚಭೌತಿಕ ವಿಶ್ವಸಲಹಲು ಕರುಣದಿಂ ಕಳುಹೆ |
ಪಂಚಗೋವಳು " ನಂದ " ಸದ್ಯಜ
ಪಂಚಗೋವಳು " ಭದ್ರ " ವಾಮಜ
ಪಂಚದುಳಿದಾ ಮುಖದೆ ಸುರಭಿ, ಸುಶೀಲೆ, ಸುಮನಾಯ್ತು ‖ ೪ ‖

ಗೋವುನಂದಾ ಕಪಿಲ ವರ್ಣೆಯು
ಗೋವುಭದ್ರೆಯು ಕೃಷ್ಣವರ್ಣೆಯು
ಗೋವು ಸುರಭಿಯು ಧವಲೆ ಧೂಮ್ರಂ ರಕ್ತವರ್ಣೆಯರು |
ಗೋವುನಂದೆಯೊಳಾ ವಿಭೂತಿಯು
ಗೋವು ಭದ್ರೆಯ ಬೆರಣಿಭಸಿತವು
ಕಾವ ಭಸ್ಮಂ ಕ್ಷಾರ ರಕ್ಷೆಗಳಕ್ಕು ಮಿಕ್ಕವರಿಂ ‖ ೫ ‖

ಕಂದುಬಣ್ಣದ ನಂದ್ಯೆಬೆರಣಿಯ
ತಂದು ಸದ್ಯೋಜಾತದಿಂ ಸುಡೆ
ಬಂದ ಭಸ್ಮ ವಿಭೂತಿಯಷ್ಟೈಸಿರಿಗೆ ಕಾರಣವು |
ಸಂದ ಮಂತ್ರಂವಾಮದೇವದೆ
ತಂದು ಭದ್ರೆಯ ಬೆರಣಿಯಂ ಸುಡೆ
ಬಂಧ ಬೂದಿಯ ವಸ್ತ್ರಶೋಧಿಸೆ ಭಸಿತಮೆನಿಸುವುದು ‖ ೬ ‖

ನಿತ್ಯಕರ್ಮ ವಿಭೂತಿಯನು ನೈ
ಮಿತ್ತಿಕಂದೊಳು ಭಸಿತ ಧರಿಪುದು
ಮತ್ತೆ ಕಾಮ್ಯದ ಕರ್ಮಸಿದ್ಧಿ ಕ್ಷಾರವನು ಧರಿಸೆ |
ಚಿತ್ತಶುದ್ಧಿ ಪ್ರಾಯಶ್ಚಿತ್ತಕೆ
ಮತ್ತೆ ನೋಂಪಿಗೆ ಭಸ್ಮ ಧರಿಪುದು
ಸುತ್ತುವರಿವೀ ಭವದಿ ಮೋಕ್ಷವು ರಕ್ಷವನು ಧರಿಸೆ ‖ ೭ ‖

ಯಾವ ಶಿವಮುಖದಿಂದ ಗೋವೋ
ಯಾವ ಬಣ್ಣವು ಗೋವಿಗುಂಟೋ
ನಾವು ಧರಿಸುವ ಭಸ್ಮಕಾಯಾ ಬಣ್ಣಗುಣವುಂಟು ।
ಯಾವ ಕರ್ಮದೊಳಾವ ಭಸ್ಮವ
ನೋವಿಧಾರಣ ಮಾಡೆ ವಿಧಿಸಿದೆ
ಭಾವ ಶುದ್ಧಿಯೊಳಂಥ ಭಸ್ಮವ ಧರಿಸೆ ಶುಭಮುಂಟು ॥ ೮ ॥

ಕಲ್ಪವನುಕಲ್ಪ, ಮುಪಕಲ್ಪ,ವ
ಕಲ್ಪವೆಂದಾ ತಂತ್ರವೇತರು
ಕಲ್ಪಿಸಿಹರೈ ಭಸ್ಮದುತ್ಪಾದನವ ನಾಲ್ಕಾಗಿ ।
ಕಲ್ಪಭಸ್ಮಮದುತ್ತಮೋತ್ತಮ
ಕಲ್ಪಭಸ್ಮವು ದೊರೆಯದಿರ್ದೊಡೆ
ಕಲ್ಪದುಳಿದಾ ಮೂರು ಭಸ್ಮವ ಧರಿಸು ಶಾಸ್ತ್ರೋಕ್ತ ॥ ೯ ॥

ಮಂತ್ರ ಸದ್ಯೋಜಾತ ಪೇಳುತ
ಲಂತರದೊಳೇ ಪಿಡಿದ ಗೋಮಯ
ಮಂತ್ರ ಮಣಿಸುತ ವಾಮದೇವದೊಳುಂಡೆ ಮಾಡುವುದು ।
ಮಂತ್ರ ತತ್ಪುರುಷೋದುತೊಣಗಿಸು
ಮಂತ್ರಮಣಿ ಸಾಘೋರವಂ ಸುಡು
ಮಂತ್ರಮಿಾಶಾನದೊಳು ಬಿಲ್ವದ ಪಾತ್ರೆಯೊಳಿರಿಸು ॥ ೧೦ ॥

ಉಕ್ತಪರಿಯೊಳು ಪಡೆದ ಭಸ್ಮ ವಿ
ಮುಕ್ತಿಕಾರಣ ಕಲ್ಪಭಸಿತಾ
ವಿಕ್ಕಿಯೊಣಗಿದರಣ್ಯ ಬೆರಣಿಯ ಭಸ್ಮವನುಕಲ್ಪ ।
ರೊಕ್ಕತೆತ್ತಿದ ತಂದು ಶಾಸ್ತ್ರೋ
ಕ್ತಕ್ಕನುಸರಿಸಿ ಗೋವುಮೂತ್ರದೊ
ಳಿಕ್ಕಿಯುಂಡೆಯಕಟ್ಟಿಯೊಣಗಿಸಿ ವಸ್ತ್ರಶೋಧಿತದೋಳ್ ॥ ೧೧ ॥

ಪಡೆಯೆ ಭಸ್ಮೋಪಕಲ್ಪವಮ್ಮದು
ಪಡೆಯೆ ಮಂತ್ರವಿಹೀನ ಮಾರ್ಗದೆ
ಬಿಡದೆ ಕರಿವರಕಲ್ಪವೆಂದೀ ನಾಲ್ಕುವಿಧದೊಳಗೆ |
ಇಡುವುದಿಂತಿವ ಕಲಶಪಾತ್ರದೆ
ಮೃಡನ ನೆನೆದೀ ಭಸ್ಮವೊಂದನು
ಪಿಡಿದು ಸಂಧ್ಯಾಸ್ನಾನಗೈವುದು ಕೊನೆಗೆ ದಿನಕೊಮ್ಮೆ || ೧೨ ||

ಪಾದ ಕರಯುಗವನ್ನಮಲ ಗಂ
ಗೋದಕದಿ ತೊಳೆದಾಸನವ ಬಿಗಿ
ದೋದಿ ಮೌನದೊಳಾದಿ ಪಂಚಾಕ್ಷರಿಯನೆಂಟ್ಸಲವುಂ |
ನೋದದಿಂದೆಡಗೈಯೊಳಿಟ್ಟಾ
ಬಾಧೆಹರವಹ ಭಸ್ಮಗಟ್ಟಿಯ
ನಾದರಂ ಮಿಗೆಮುಚ್ಚಿ ಬಲಗೈಯ್ಯೊಳಭಿಮಂತ್ರಿಪುದು || ೧೩ ||

*ಶಿರವನೀಶಾನದೊಳು ಮುಖ ತ
ತ್ಪುರುಷದೊಳು ಮೇಣ್ ಹೃದಯದೆಡೆಯನ
ಘೋರಮಂತ್ರದಿ ಗುಹ್ಯವಂ ಶ್ರೀವಾಮದೇವದೊಳು |
ಎರಡು ಪಾದಂಗಳ್ಗೆ ಚಿಮುಕಿಸು
ಮೆರೆವ ಸದ್ಯೋಜಾತಮಂತ್ರದೆ
ಸರುವದೇಹಕು ಮೂಲವೋಂಕಾರೋದಿ ಸೇಚಿಪುದು || ೧೪ ||

---

* ಈಶಾನ ಸರ್ವ ವಿದ್ಯಾನಾಂ...... |
ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀ ಮಹಿ...... |
ಅಘೋರೇಭ್ಯೋ ಅಥಘೋರೇಭ್ಯೋ ಘೋರ ಘೋರತರೇಭ್ಯೋ...... |
ವಾಮದೇವಾಯ ನಮೋ ಜೇಷ್ಠಾಯ ನಮೋ...... |
ಸದ್ಯೋಜಾತ ಪ್ರಪದ್ಯಾಮಿ ಸದ್ಯೋಜಾತಾಯವ್ವೆ ನಮೋ ನಮಃ...... |
ಓಂ ಹರ ಹರ, ಓಂ ಶಿವಶಿವ, ಓಂ ಜಯಜಯ, ಓಂ ಶಿವಾಯ ನಮಃ...... |

ಸ್ನಾನದೊಳಗುಂ ಅಗ್ನಿಪೂತ
ಸ್ನಾನ ಸರ್ವೋತ್ತಮವು! ಭಸ್ಮ
ಸ್ನಾನ ಗಂಗಾನದಿಯ ಪುಣ್ಯಸ್ನಾನಕಿಂ ಮಿಗಿಲು |
ಸ್ನಾನವಂ ಪ್ರತಿನಿತ್ಯಗೈವಂ
ಗೇನುಮಾಡವು ಮಾಯಮಲಗಳು
ನೀನು ಶಾಸ್ತ್ರೋಪರಿಯೆ ಭಸ್ಮಸ್ನಾನ ಮಾಡಯ್ಯ || ೧೫ ||

ಬಾಹ್ಯಶುಚಿಗೈ ಗಂಗೆಮೀವುದು
ದಿವ್ಯದಂತಃಜ್ಞಾನ ಬೆಳಗಲು
ದಿವ್ಯಭಸ್ಮಸ್ನಾನಗೈವುದೆ ಯತಿಯ ಯೋಗಾಂಗ |
ಬಾಹ್ಯಗಂಗಾಸ್ನಾನ ಕಾಲದಿ
ಗೈಯಬೇಕ್ಕೆ ಜೀವನಾಶವ
ದಿವ್ಯಭಸ್ಮಸ್ನಾನವದರಿಂದುತ್ತಮೋತ್ತಮವು || ೧೬ ||

ಪ್ರಕೃತಿದತ್ತವು ಭುವಿಯ ಗಂಗಾ
ಪ್ರಕೃತಿ ಬಂಧಕೆ ಮೂಲಕಾರಣ
ಸುಕೃತಿ ಗಂಗಾಸ್ನಾನಕಿಂತೀಸ್ನಾನಭಸ್ಮದೊಳು |
ಪ್ರಕೃತಿಬಂಧವ ನಾಶಗೈಯಲು
ವಿಕೃತಿಗೊಳ್ಳದೆ ನಿತ್ಯಮಾಡುವ
ಸುಕೃತಿ ಬಂಧಚ್ಛೇದಕೆಂದೇ:ಜ್ಞಾನರತನಿಹನು || ೧೭ ||

ಬ್ರಹ್ಮ ವಿಷ್ಣು ಮಹೇಶದೇವರ್
ಬ್ರಹ್ಮಋಷಿಗಳು ನಾರದಾದ್ಯರ್
ಬ್ರಹ್ಮಮರಿತಾ ಸನಕರಂತಹ ಯೋಗಿಪುಂಗವರು |
ಬ್ರಹ್ಮಜ್ಞಾನಿಯು ಬಾಣದಾನವ
ರೊಮ್ಮತದಿ ಶಿವಭಕ್ತಿ ಸಾಧಿಸೆ
ಸಮ್ಮುದದಿ ನಿರ್ಮುಕ್ತದೋಷರು ಭಸ್ಮಮಿಂದಿಹರು || ೧೮ ||

ಕೇಳ ಮೂಲನಮಃಶ್ಶಿವಾಯವ
ನೇಳುಸೊಳಭಿಮಂತ್ರಿಸುವದೈ
ಯೇಳೆರಡರೋಳ್ ಭಸ್ಮಲೇಪನದೇಹಿಯೋತ್ತಮನು ।
ಕೇಳು ಲೇಪನಕಿಂತ ಮಿಗಿಲೈ
ಭಾಳನೇತ್ರನ ನೆನೆದ ಭಾವುಕ
ಭಾಳದೊಳಗುಂ ಮೂರುಬೆರಳಿನ ಭಸ್ಮಧರಿಸಲ್ಕೆ ॥ ೧೯ ॥

ಉದಕ ಮಿಶ್ರಿತ ಭಸ್ಮಧರಿಸೈ
ಚದುರತನದೊಳು ಪಂಚದಶದೆಡೆ[1]
ಬುಧರಮತದಿಂ ಭಸ್ಮಪೂಸುವ ಸಾಧಕೋತ್ತಮನು ।
ಉದಯಮಾದಿಯ ಸಂಧ್ಯಕಾಲದೆ
ಮುದದಿ ಲೇಪಿಸು ದೇಹಕೆಲ್ಲಂ
ವಿಧಿಗೆ ತಪ್ಪದೆ ಭಸ್ಮಧರಿಸೈ ಮೂರುಬೆರಳೊಳಗೆ ॥ ೨೦ ॥

ಉತ್ತಮಾಂಗದೆ ಭಾಳ ಕರ್ಣದೆ
ಮತ್ತೆಗಳದೋಳೆರಡು ಭುಜದೊಳು
ಹೃತ್ತು ನಾಭಿಯು ಪೃಷ್ಠವೆರಡುಂ ಬಾಹು ಹೆಗಲೊಳಗೆ ।
ಮತ್ತೆ ಮಣಿಕಟ್ಟೆರಡರೊಳಗುಂ
ಸತ್ತ್ವಚಿತ್ತಾನಂದದನುಭವ
ವಿತ್ತುವೊರೆಯುವ ಮೂಲಮಂತ್ರದೆ ಧರಿಸು ಭಸ್ಮವನು[2] ॥ ೨೧ ॥

---

[1] ಭಸ್ಮ ಧರಿಸುವ ಹದಿನೈದು ಶರೀರ ಸ್ಥಲಗಳು—
೧ ತಲೆ ೨ ಹಣೆ ೩–೪ ಎರಡು ಕಿವಿಗಳು, ೫ ಕಂಠ ೬–೭ ಎರಡು ಭುಜ ೮ ಹೃದಯ ೯ ಹೊಕ್ಕಳು ೧೦ ಪೃಷ್ಠ ೧೧–೧೨ ಎರಡು ಬಾಹುಗಳು ೧೩ ಹೆಗಲು ೧೪–೧೫ ಎರಡು ಮಣಿಕಟ್ಟುಗಳು

[2] ತಲೆ—ಓಂ ಶಿವಾಯ ನಮಃ ।
ಹಣೆ—ಓಂ ಮಹೇಶ್ವರಾಯ ನಮಃ ।
ಕಿವಿಗಳು—ಓಂ ರುದ್ರಾಯ ನಮಃ ।
ಕಂಠ—ಓಂ ಶ್ರೀಕಂಠಾಯ ನಮಃ ।

[ಮುಂದುವರಿದಿದೆ

ವಾಮಹಸ್ತದೊಳಿಟ್ಟ ಭಸ್ಮವ
ನೇಮದೊಳ್ಮುಚ್ಚುಳಿದ ಹಸ್ತದೆ
ಕಾಮಸಂಹರನಕ್ಷಿಸುಟ್ಟುದ 'ನಗ್ನಿರಿತಿ'[1]ಯೊಳಗೆ ।
ಸೋಮಭಾವದೆ ಮುಟ್ಟುತೇಳ್ಸಲ
ಮೌನಜಪದಿಂ ಗಂಗೆ ಚಿಮುಕಿಸಿ
ನೇಮದೋಳ್ಪದಿನೈದು ತಾಣದೆ ಸಜಲಭಸ್ಮವಿಡು ॥ ೨೮ ॥

ಇಂತು ನೇಮದಿ ಭಸ್ಮಧರಿಸಲು
ಕಂತುಹರ ಶಿವಭಕ್ತಿ ಬೆಳೆಸಿರಿ
ಶಂತಮಯನಂ ಸಾಂಬಶಿವನಂ ಕೂಡೆ ನಡೆಸುವುದು ॥
ಸಂತಚಿಂತನಮಚಲಮಾಗ
ಲ್ಲಂತ್ಯಕಾಲಕೆ ಶಾಂತಶಿವನಾ
ನಂತಕಳೆಯೊಳು ಬೆರೆದು ಬಯಲಹನಿದುವು ಶತಸಿದ್ಧ ॥ ೨೯ ॥

ನಿನ್ನಬಲಗೈಮಧ್ಯ ಮೂರ್ಬೆರ
ಳನ್ನು ಷಷ್ಠಾಂಗುಲದವರೆಗೆಳೆ
ಚೆನ್ನಭಸ್ಮವ ಧರಿಸೆ ಹಣೆಯೊಳು ನೇತ್ರಸಮಸವಕೆ ।

---

೨ ಭುಜಗಳು—ಓಂ ಶಂಭುವೇ ನಮಃ ।
ಹೃದಯ—ಓಂ ಈಶ್ವರಾಯ ನಮಃ ।
ನಾಭಿ—ಓಂ ಮಹಾದೇವಾಯ ನಮಃ ।
ಬೆನ್ನು—ಓಂ ಪಶುಪತಯೇ ನಮಃ ।
೨ ಬಾಹುಗಳು—ಓಂ ಶಂಕರಾಯ ನಮಃ ।
ಹೆಗಲು—ಓಂ ವೃಷಭಧ್ವಜಾಯ ನಮಃ ।
೨ ಮಣಿಕಟ್ಟು—ಓಂ ಪರಮಾತ್ಮನೇ ನಮಃ ।

ಶ್ಲೋಕ—"ಅಗ್ನಿರಿತಿ ಭಸ್ಮ, ವಾಯುರಿತಿ ಭಸ್ಮ ಜಲಮಿತಿಭಸ್ಮ ವ್ಯೋಮೇತಿ ಭಸ್ಮ ಭಸ್ಮೇತಿ ಭಸ್ಮ ಸರ್ವಗಂ ಹವಾಇದಂ ಚಕ್ಷೂಂಷಿ ಭಸ್ಮಾನಿ ಚಕ್ಷೂಂಷಿ ॥

ನಿನ್ನಮಧ್ಯಂ ಮೇಣನಾಮಿಕ
ವನ್ನಳಿವುದನುಲೋಮದಂಗುಟ
ವನ್ನಳಿ ವಿಲೋಮದೊಳು ಭಸ್ಮಾಂಕಿತಕೆ ನಿತ್ಯದೊಳು ॥ ೨೪ ॥

ಧರಿಸಲಿಂತೀತೆರದೆ ಭಸ್ಮವ
ನಿರದೆ ರುದ್ರನ ಪಡೆವೆ ನಿಶ್ಚಯ
ಸರಳ ಶುಭ್ರಂ ನಿಬಿಡನುಣುಪಿಂ ವಿಧಿಸಿದಂತರಕೆ ।
ಧರಿಸೆ ಸಲ್ಲಕ್ಷಣದೆ ಭಸ್ಮವ
ಸುರುವಸಿದ್ಧಿಯ ಪಡೆವೆ ನಿಶ್ಚಯ
ಹರನ ಬೆರೆಯುವೆ ಧರಿಸೆ ಸಂಧ್ಯಾಸಮಯದೊಳಗೊಮ್ಮೆ ॥ ೨೫

ಮೂರು ಬೆರಳೊಳು ಭಸಿತ ಧರಿಸಲು
ಮೂರುವೇದಜ್ಞಾನಿ ಸರಿಸಮ
ಮೂರುಯಾಗ್ನಿಕ ಮೂರು ತೀರ್ಥಸ್ನಾನಿಯೋತ್ತಮನು ।
ಸಾರಿತೈ ಶ್ರುತಿಯಿಂತು ಫಲವನು
ವೀರಶೈವನು ಧರ್ಮನಿರತನು
ಮಾರಸಂಹರ ರುದ್ರರೂಪನು ಭಸ್ಮಧರಿಸಲ್ಕೆ ॥ ೨೬ ॥

ಹರಿಯು ಬೊಮ್ಮೋಪೇಂದ್ರ ಸುರತತಿ
ಪರಮ ರುದ್ರಾದ್ಯಾದಿ ಗಣತತಿ
ಹರನು ಮೊದಲಾಗಿಂತು ಭಸ್ಮೋದ್ಧೂಳನಾನ್ವಿತರು ।
ಪರಮಶಿಷ್ಟ ವಸಿಷ್ಠಮುನಿವರ
ಪರಮವೇದಿಯು ಜ್ಞಾನಕೋವಿದ
ರಿರದೆ ದೇಹಕೆ ಭಸ್ಮಧರಿಪರು ಮೂರು ಬೆರಳೊಳಗೆ ॥ ೨೭ ॥

ಸರ್ವಮಾನ್ಯಾಧಾರ ಕಲ್ಪವು
ಸರ್ವವೇದ ಶಿವಾಗಮಂಗಳು
ಸರ್ವಪರವಹ ಶ್ರುತಿಯು ಚರಿತೆ ಸ್ಮೃತಿ ಪುರಾಣಗಳು ।

ಸರ್ವಕಿಲ್ಬಿಷ ದೂರಮಾಡುವ
ಸರ್ವಕುತ್ತಮ ಭಸ್ಮಧಾರಣ
ಸರ್ವಕಾಲದೆ ಸರ್ವಯತ್ನದೆ ಮಾಡೆ ಪೇಳಿಹವು ॥ ೨೮ ॥

ಸಾತಿಶಯದೊಳು ಭಸ್ಮಧರಿಸಲು
ನೇತಿ ನೇತಿಯನೋದಲೇತಕೆ
ನೀತಿವಿದರಾಗುವರು ಮನುಜರು ಭಸ್ಮಮಹಿಮೆಯೊಳು ।
ನಾಸ್ತಿಕನುತಾನಪ್ಪನಾಸ್ತಿಕ
ಜಾತಿಯಿಂಚ್ಯುತ ಜಾತನೈ ಕು
ಖ್ಯಾತನುಂ ಸುಖ್ಯಾತನಾಗುವ ಭಸ್ಮಧರಿಸಲ್ಕೆ ॥ ೨೯ ॥

ಕಶ್ಮಲಾಪಹದೂರ್ಧ್ವಪುಂಡ್ರಕ
ಭಸ್ಮಧಾರಣ ವಿಹಿತಮಾಗಿದೆ
ವಿಶ್ವದೆಲ್ಲಾ ಶೈವಪಂಥದ ಶರಣ ಸಂತತಿಗೆ ।
ಭಸ್ಮಧಾರಣ ವಿಧಿಯ ಸಮ್ಮತ
ಭಸ್ಮವಿಾಯಲ್ಲಂಗ ಸರ್ವಕು
ಭಸ್ಮಧರಿಸಲು ಮೂರುಜೆರಳೊಳು ಮುಕ್ತರಾಗುವರು ॥ ೩೦ ॥

## (೪) ರುದ್ರಾಕ್ಷಿಧಾರಣ ಸ್ಥಲಂ

ನಿತ್ಯ ಭಸ್ಮಸ್ನಾನ ನಿರತನು
ಮತ್ತೆ ಫಣೆಯೊಳೂರ್ಧ್ವಪುಂಡ್ರನು
ನಿತ್ಯಶಿವಲಿಂಗಾರ್ಚನಾರತ ಧರಿಪ ರುದ್ರಾಕ್ಷ ।
ಸತ್ಯದೂರನು ಮಿಥ್ಯಪರನುಂ
ಚಿತ್ತಚಂಚಲ ದುಷ್ಟಬುದ್ಧಿಯು
ದತ್ತಕರ್ಮದ ಪಾಪನೋಚಿಪ ಧರಿಸೆ ರುದ್ರಾಕ್ಷ ॥ ೩೧ ॥

ಕಣ್ಣುಮೂರರ ಕರುಣಶಂಕರ
ಕಣ್ಣುಮೂರನು ತೆರೆದು ಬೆದಕಲು
ಕಣ್ಣು ತಪ್ಪಿಸಿ ಕಾಡುತಿರ್ದಾ ತ್ರಿಪುರಯೋಗವನು ।
ಕಣ್ಣುಗೆಟಕದ ಗಗನ ತಳದೊಳು
ಕಣ್ಣುವಂಚಿಸಲಡಗಿದಸುರರ
ಕಣ್ಣುಮೂರರ ದೇವದೇವನು ದಿಟ್ಟಿಸೀಕ್ಷಿಸಿದ || ೩೨ ||

ನೇತ್ರ ಸೂರ್ಯನ ನೇತ್ರಚಂದ್ರನ
ನೇತ್ರದಗ್ನಿಯದಾಲಿತುಂಬಿದ
ನೇತ್ರಬಿಂದುಗಳುಕ್ಕಿ ಬೀಳಲು ರುದ್ರಮುಖದಿಂದ ।
ಧಾತ್ರಿ ಪಾರ್ವತಿ ಲೋಕಪಾವನ
ಗಾರ್ತಿ ರುದ್ರಾಕ್ಷಿಯನು ಪಡೆದಳು
ಧಾತ್ರಿಯೋಳಿವು ಕೀರ್ತಿವೆತ್ತಿವೆ ಮೂರುವರ್ಣದೊಳು || ೩೩ ||

ರುದ್ರ ಸೂರ್ಯಾಕ್ಷಿಯೊಳು ಕಪಿಲವು
ರುದ್ರ ಚಂದ್ರಾಕ್ಷಿಯೊಳು ಧವಳವು
ರುದ್ರನಾಗ್ನೇಯಾಕ್ಷಿಯಿಂದ್ಯೆ ಕೃಷ್ಣರುದ್ರಾಕ್ಷಿ ।
ರುದ್ರನೇತ್ರೋತ್ಪನ್ನವಾದೀ
ರುದ್ರನಕ್ಷಿಯು ಪಾಪದೊಡ್ಡನು
ಛಿದ್ರಗೊಳಿಸಲು ಜಗದೆ ಮೂವತ್ತೆಂಟು ವಿಧಮಿಹವು || ೩೪ ||

ಪತ್ತು ಮೇಲಾರ್ಬಗೆಯು ಕಪಿಲದೆ
ಪತ್ತುಮೆರಡುಂ ಬಗೆಯು ಧವಳದೆ
ಪತ್ತುಬಗೆಯೋಳಿಹುದು ಕೃಷ್ಣದೆ ರುದ್ರನಕ್ಷಿಗಳು ।
ಹೊತ್ತುಬೆಳದೀಧರಣಿ ಮೂರುಂ
ಪತ್ತುಮೇಣೆಂಟ್ವಿಧದೆ ತಾನು
ತೃಪ್ತಿಮಾಡುತ್ತಿಹಳು ಭಕ್ತರ ಪಾಪಮೋಚನೆಗೆ || ೩೫ ||

ಹೊನ್ನ ಕಾಂತಿಯ ಛಿದ್ರವಿಲ್ಲದ
ತನ್ನಹೊರತಿನ್ನಾರು ಧರಿಸದ
ಚೆನ್ನರುದ್ರಾಕ್ಷವನು ಧರಿಸೈ ಲಿಂಗಪೂಜೆಯೊಳು ।
ಚೆನ್ನಶಿವನೊಳೈಕ್ಯಮಾಗ
ಲ್ಕಿನ್ನು ಸಲ್ಲಕ್ಷಣದೊಳಿರುವುವಿ
ವನ್ನೆಧರಿಸಲು ವಿಧಿವಿಧಾನವನೊರೆವೆ ಕೇಳಯ್ಯ ॥ ೩೬ ॥

ಶಿರದಶಿಖೆಯೊಳೇಕಮುಖದೊ
ಳಿರುವುದೊಂಪನು ; ಶಿರದಿ ಧರಿಪುದು
ಮೆರಡು ಮೂರುಂ ಹನ್ನೆರಡುಮುಖಿ ಮೂರು ರುದ್ರಾಕ್ಷ ।
ಧರಿಸು ಹನ್ನೊಂದುಮುಖಿ ಮೂವ
ತ್ತಾರು ರುದ್ರಾಕ್ಷಿಯನು ಹಣೆಯೊ ।
ಳೆರಡು ಕರ್ಣದಿ ಹತ್ತುಮೇಲೈದುಮುಖದವಾರಾರಂ ॥ ೩೭ ॥

ಆರುಮುಖಿ ಹದಿನಾರು ಮೇಣ್ ಹದಿ
ನಾರುಮೆಂಟರಮುಖಿಯಧರಿಸೈ
ತೋರು ಕಂಠಕೆ ನಾಲ್ಕುಮುಖದೈವತ್ತನೆದೆಯೊಳಗೆ ।
ಧಾರ್ಯಮೆರಡುಂ ಬಾಹುವಿಗೆ ಹದಿ
ಮೂರು ಮುಖದೊಳಿರುವ ಹದಿನಾರ್
ಚಾರು ಮಣಿಬಂಧಕ್ಕೆ ಪನ್ನೆರಡುಮುಖದೊಂಭತ್ತು ॥ ೩೮ ॥

ಹತ್ತು ಮೇಲ್ನಾಲ್ಮೊಗದ ನೂರೆಂಟ್
ಸೂತ್ರಯಜ್ಞಕೆ ಕೋದು ಧರಿಪುದು
ಸತ್ಯ ಸಾಕ್ಷಾತ್ಕರಿಸೆ ಶಿವಪೂಜಕನು ನಿತ್ಯದೊಳು ।

---

* ೬ ಮುಖದವು ೧೩ ಮತ್ತು ೮ ಮುಖದವು ೧೩ ಒಟ್ಟು ೩೨ ರುದ್ರಾಕ್ಷಿಗಳನ್ನು ಕಂಠಕ್ಕೆ ಧರಿಸಬೇಕು,

ನಿತ್ಯಧರಿಸುವ ಮೂಢಮತಿಯುಂ
ಹೊತ್ತ ಪಾಪವನಿಳುಹಿ ಕಳೆವನು
ಸತ್ಯ ಸತ್ಯವು ಬಿಡದೆ ಧರಿಸೈ ಸರ್ವಕಾಲದೊಳು || ೩೯ ||

ಹೊನ್ನು ಕದ್ದವ ಮದ್ಯಪಾನಿಯು
ಬೊಮ್ಮಹಂತಕ ಬೆದೆಗೆ ಗುರುಸತಿ
ಯನ್ನೆ ನೆರೆದವ ಮಾತಪಿತರಂ ತರಿದುಗೊಂದವನು |
ಇನ್ನು ಗರ್ಭಭ್ರೂಣ ಘಾತುಕಿ
ಮುನ್ನಗೈದುಪಕೃತಿಯ ಮರೆತವ
ರೆನ್ನದೆಲ್ಲರ ಪಾಪಮೋಚನ ಧರಿಸೆ ರುದ್ರಾಕ್ಷಿ || ೪೦ ||

ನೆನೆಯೆ ನೋಡಲು ಮುಟ್ಟೆ ಪೂಜಿಸೆ
ತನುಗೆ ಧರಿಸಲು ಭಕ್ತಿಭಾವದೆ
ಮನುಜಪಾತಕ ನಾಶಗೈವವು ರುದ್ರನಕ್ಷಿಗಳು |
ಜನುಮಕಂಟಿದ ಸರ್ವಪಾತಕ
ತನುಗೆ ಧರಿಸಿದ ಮಾತ್ರಸುಡುವವು
ಜನುಮದುಚ್ಚನು ನೀಚಗುಣದೋಳ್ಮೂರ್ಖಪಂಡಿತನ || ೪೧ ||

ಮರ್ತ್ಯದೊಳು ಗೋವ್ಕೋಟಿ ದಾನಿಯು
ಸತ್ಯಲೋಕದೆ ಪಡೆವ ಫಲವನು
ನಿತ್ಯ ರುದ್ರಾಕ್ಷಿಯನು ಧರಿಸಲು ಪಡೆವನಿದು ಸತ್ಯ |
ಮೃತ್ಯುಕಾಲದೊಳಾರು ಶಿವನೆನೆ
ಯುತ್ತ ರುದ್ರಾಕ್ಷಿಯನು ತೇಯ್ದರೆ
ದಿತ್ತವಾರಿಯ ಕುಡಿಯೆ ಪಡೆವನು ರುದ್ರಲೋಕವನು || ೪೨ ||

ಯಾರು ಭಸ್ಮವಿಭೂಷಿತನು ಮೇ
ಣಾರು ರುದ್ರಾಕ್ಷಿಯನು ಧರಿಸುವ
ನಾರು ನಿರುತಂ ಲಿಂಗಧರಿಸುವನಾತ ಶಿವನಹನು |

ಯಾರು ನಿತ್ಯಕ ಕಾಮ್ಯನೈಮಿತಿ
ಕಾರ್ಯಮೆಲ್ಲವಗೈವನಾವರು
ಸಾರರುದ್ರಾಕ್ಷಿಯನು ಭಸ್ಮವನಿಡದೆ ಫಲಪಡೆಯ || ೪೩ ||

ನಿತ್ಯಸತ್ಯಾಚಾರನಿರತರು
ಮತ್ತು ವರ್ಣಾಶ್ರಮದ ಧರ್ಮಿಗ
ಳೆತ್ತಸಾಟೆಯು ಭಸ್ಮರುದ್ರಾಕ್ಷಿಗಳ ಧರಿಪರ್ಗೆ ।
ನಿತ್ಯರುದ್ರಾಕ್ಷಿಯನು ಭಸ್ಮವ
ಸತ್ಯಪಂಚಾಕ್ಷರಿಯ ಜಪಜಪಿ
ಸುತ್ತ ಧರಿಸಲ್ ಸ್ಮೃತಿಯು ಶ್ರುತಿಯುಂ ಸ್ತುತಿಪುದವರನ್ನು || ೪೪ ||

ಅಂತು ರೇಣುಕಗೀತೆ ಬೋಧಿಪು
ದಿಂತು ಭಸ್ಮಸ್ಥಲದೆ ಭಸ್ಮವ
ನಂತೆ ರುದ್ರಾಕ್ಷಿಗಳನಾಸ್ಥಲದಲ್ಲಿ ಧರಿಸಲ್ಕೆ ।
ಕಂತುಹರನಿಂ ತ್ರಿಪುರದರಿಯಿಂ
ದಿಂತು ಭಕ್ತರ ಸಲಹಲೀ ಶ್ರೀ
ಮಂತ ಭಸ್ಮದ ರುದ್ರನಕ್ಷಿಯ ಕೃಪೆಯು ಭಾವಿಪುದು || ೪೫ ||

ಏಳನೆಯ ಸಂಧಿ ಸಂಪೂರ್ಣಂ.

ಸಂಧಿಯೆಂಟಕ್ಕಂ ಪದನು ಮುನ್ನೂರೈದಕ್ಕಂ

ಮಂಗಳಮಸ್ತು.

# ಎಂಟನೆಯ ಸಂಧಿ

## ಪಂಚಾಕ್ಷರ ಜಪಸ್ಥಲ ನಿರೂಪಣಂ

ಸೂಚನೆ:—ಪ್ರಣವ ಪಂಚಾಕ್ಷರಿಯ ಮಂತ್ರವು
ಗಣನೆಗಾದಿಯು ಮೋಕ್ಷಮೂಲವು
ಮನನದಿಂದಾಸ್ಥಲದೆ ನೆಲೆನಿಲ್ಲೆಂದನಾಚಾರ್ಯ ॥

ಲಿಂಗಧಾರಿಯು ಭಸ್ಮಭೂಷಣ
ದಂಗಶುದ್ಧನು ರುದ್ರನಕ್ಷಿಯಿ
ನಂಗಶೋಭೆಯು ವರಶಿವಾದ್ವೈತಾತ್ಮಬೋಧಿನಿಯಂ ।
ಜಂಗಮಾರ್ಯನು ಕರುಣಿಸಿತ್ತಾ
ಭಂಗಭವಭಯ ಮೂಲಮಂತ್ರವ
ನಂಗಲಿಂಗದೆ ಬೆರೆಯುವನಕಂ ಜಪಿಸಲೇಬೇಕು ॥ ೧ ॥

ತಂತ್ರ ಶಿವತತ್ತ್ವಕ್ಕೆ ಮಿಗಿಲಾ
ದಂಥ ತತ್ತ್ವಮದಿಲ್ಲವೆಂತೋ
ಮಂತ್ರ ಪಂಚಾಕ್ಷರಿಗೆ ಮಿಗಿಲಾದ್ಮಂತ್ರವಂತಿಲ್ಲ ।
ಮಂತ್ರ ಮಾತೃಸ್ಥಾನವಾದೀ
ಮಂತ್ರ ಪಂಚಾಕ್ಷರಿಯನರಿಯಲು
ಶಂತ ಶಿವನಾಶ್ರಯವ ಪಡೆಯಲ್ಲನ್ಯವಿನ್ನೇಕೆ ॥ ೨ ॥

ಏಳುಕೋಟಿಯಿನಿರುವ ಮಂತ್ರಕೆ
ಮೇಲು ಪಂಚಾಕ್ಷರಿಯ ಮಂತ್ರವು
ಮೂಲಶಂಭು ಶ್ರೇಷ್ಠನೆಂತೋ ವಿಷ್ಣುವಾದ್ಯರಿಗೆ ।
ಮೂಲಹೇತುವು ವಿಶ್ವಕೀಶ್ವರ
ಮೂಲ ಪಂಚಾಕ್ಷರಿಯ ಮಂತ್ರವು
ಚೂಲ ಸರ್ವೋತ್ತಮವು ವಾಚಕಮಂತ್ರವನಿತರೊಳು ॥ ೩ ॥

ಕಂತುಹರನಭಿದಾನ ಮಂತ್ರವು
ಶಂತಮಯನಭಿಧೇಯನಾಗಿಹ
ನಿಂತು ಶಿವನುಂ ಶಿವನ ಹೆಸರುಂ ವಾಚ್ಯವಾಚಕವು ।
ಮಂತ್ರ ಮನನಂಗೈವ ಯೋಗಿಗೆ
ಮಂತ್ರದಿಂ ಶಿವಭಾಸನಾಗುವ
ಮಂತ್ರರೂಪನು ಶಿವಮಹೇಶ್ವರನಿರುವನದರಿಂದ ॥ ೪ ॥

ಆದಿಯಲಿ ಪೇಳ್ 'ನಮಃ' ಶಬ್ದವ
ನೋದು ಮೋದದಿ 'ಶಿವಾಯ' ವನಂ
ತಾದಿಯಿಂ ಶ್ರುತಿಸಾರ್ವ ಸರ್ವೋತ್ತಮದ ಮಂತ್ರವನು ।
ಆದಿ ಪಂಚಾಕ್ಷರಿಯ ಮಂತ್ರವು
ವೇದ ನಿಗಮಾಗಮಕೆ ಶಿರವೈ
ಬೋಧಮೂಲದ ಮೂಲಮಂತ್ರವನಾದರದಿ ಜಪಿಸು ॥ ೫ ॥

ಆದಿಮೂಲನು ಪರಮಶುದ್ಧನು
ಬಾಧೆಗಾಕರ ಮಾಯಮಲಗಳ
ಭೇದಿಸುವ ಶಿವಶಂಭು ಚಿದ್‌ಘನನೀಶನಾಗಿರುವ ।
ಆದಿಮಧ್ಯಾಂತಗುಣ ವಿರಹಿತ
ನಾದ ಶಿವಶಬ್ದಾಭಿಧೇಯ
ನ್ನಾದಿಯಿಂದಜ ಹರಿ ಗಣಂಗಳಿಗಾಶ್ರಯಪ್ರದನು ॥ ೬ ॥

ಪರಮ "ಶಿವ್"ನೆಂಬೆರಡೆಯಕ್ಷರ
ವಿರದೆಬೊಮ್ಮನ ಬೆಳಗಬಲ್ಲುದು
ನಿರವಯವ ಶಿವನಿತರಹೆಸರೇ ಗುಣದ ಸೂಚಕವು ।
ಯರಡೆಯಕ್ಷರ ಚಿನ್ಮಯಾತ್ಮನ
ಪರಮತೇಜನ ಮುಖ್ಯನಾಮವು
ಮರೆತು "ಶಿವ್"ನೆನೆ ಮೋಕ್ಷವೀಯುವ ಶಂಭುಕರುಣದೊಳು ॥ ೭ ॥

ಶಾಂತ ಶಿವನಾಮಾವಲಂಬನ
ಪಾಂತ ಪಂಚಾಕ್ಷರಿಯ ಮಂತ್ರವ
ನಾಂತು ಹೃದದುದಿ ಮೋಕ್ಷಕಾಂಕ್ಷಿಪರಿಸದೆ ಜಪಿಸುವರು |
ಸಾಂತಗುಣಿಗಳ ಭವದಪಾಶ ಮ
ಹಾಂತ ಶಿವತಾನೆಂತು ಛೇದಿಪ
ನಂತೆ ಪಂಚಾಕ್ಷರಿಯು ದುರ್ಭವಪಾಶ ನಾಶಕವು || ೮ ||

[1]ಪಂಚಭೂತವು [2]ಪಂಚಮಾತ್ರಕ
[3]ಪಂಚಕರ್ಮ [4]ಜ್ಞಾನದಿಂದ್ರಿಯ
[5]ಪಂಚಕೃತ್ಯವು [6]ಪಂಚಕರ್ತರು [7]ಮೂಲಮಂತ್ರದೊಳು |
ಪಂಚಪಂಚವಿದೆಂದು ಕೀರ್ತಿಸಿ
ಮಿಂಚುವೆಲ್ಲಾ ಹೆಸರು ಪರಿಕಿಸೆ
ಪಂಚಮುಖ ಪರಮೇಶನಾಮವು ಮೂಲಮಂತ್ರವಿದು || ೯ ||

[8]ತಾರಗೆಯದು "ನ"ಕಾರ ದಂಡಾ
ಕಾರಮಿಹುದು "ಮ" ಕಾರ ಕುಂಡ್ಲಾ
ಕಾರದಿಹುದು "ಶಿ"ಕಾರ ಚಂದ್ರಾರ್ಧಂ "ವ"ಕಾರಮದು |

---

[1] ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶಗಳೆಂಬ ಪಂಚಭೂತಗಳು
[2] ಗಂಧ, ರಸ. ರೂಪ, ಸ್ಪರ್ಶ, ಶಬ್ದಗಳೆಂಬ ಪಂಚತನ್ಮಾತ್ರೆಗಳು
[3] ವಾಕ್, ಪಾಣಿ, ಪಾದ, ಪಾಯು, ಉಪಸ್ಥಗಳೆಂಬ ಪಂಚಕರ್ಮೇಂದ್ರಿಯಗಳು
[4] ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮಗಳೆಂಬ ಪಂಚ ಜ್ಞಾನೇಂದ್ರಿಯಗಳು
[5] ಸೃಷ್ಟಿ, ಸ್ಥಿತಿ, ಲಯ, ತಿರೋದಾನ, ಅನುಗ್ರಹಗಳೆಂಬ ಪಂಚಕೃತ್ಯಗಳು
[6] ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನರೆಂಬ ಪಂಚ ಬ್ರಹ್ಮರು
[7] ನ–ಮಃ–ಶಿ–ವಾ–ಯ—ಎಂಬ ಪಂಚಾಕ್ಷರಗಳು
[8] ನಕಾರಸ್ಸ್ವಾರಕಾಕಾರೋ—ಪಂಚವರ್ಣರಾಟ್. (ಶಿವಾಗಮ)

ಚಾರುದರ್ಪಣದಂದಮಾನ್'ಯ'
ಕಾರ ಮೇಣ್ 'ಓಂ'ಕಾರ ಪಂಚಾ
ಕ್ಷರವನೊಳಗೊಂಡಿಹುನು ಬೀಜಾಕ್ಷರ ಷಡಕ್ಷರದಿ ॥ ೧೦ ॥

ಆದಿಯೋಳೋಂಕಾರವಿರುವೀ
ಬೋಧವೀಯುವ ಮೂಲಮಂತ್ರವು
ವೇದಮತ್ತಾಗಮದಿ ಕೀರ್ತಿತವರಷಡಕ್ಷರವು ।
ಆದಿ ಚಿತ್ಸುಖದಾತ್ಮ ಶಿವನಂ
ನಾದ ರೂಪನ ವೇದಮೂಲನ
ಬೋಧವೀವುದು ಪಂಚವರ್ಣಾಕ್ಷರದೊಳೋಂಕಾರ ॥ ೧೧ ॥

ಪರತರೋಂಕಾರೊಂದರಿಂದಲೆ
ವರನಿರಂಜನ ವಿಶ್ವಬೆಳಗಿಹ
[1]ಪರಮನೇಕನೇಕನ್ನ[2]ದ್ವಿತೀಯಾನಂದ[3] ಪರಶಿವನು ।
ನಿರವಯುವ ಶಿವ ನಿಷ್ಪ್ರಪಂಚಕ
ನಿರುತನಿರ್ಮಲ ಮಂಗಳಾತ್ಮಕ
ಪರಮ ತೇಜನು ಬೆಳಗುತಿಹನೋಂಕಾರವೊಂದರಲಿ ॥ ೧೨ ॥

ಶಿವನ ಚಂದ್ರನಕಳೆಯೆ 'ಸೋವುಂ'
ಶಿವನ ಸೂರ್ಯನ ಕಳೆಯೆ ಹಮ್ಮುಂ
ಪವನ ಕುಂಭಕ್‌ಹ್ರಸ್ವ ಸೋಹಂರೂಪನೋಂಕಾರ* ।

---

[1] "ಏಕಮೇವಾ ದ್ವಿತೀಯಾಂ ಬ್ರಹ್ಮ"
[2] ಆನಂದಂ ಬ್ರಹ್ಮೇತಿ ವ್ಯಜಾನಾತ್
[3] ನೇಹನಾನಾಸ್ತಿ ಕಿಂಚನ
} ಶೃತಿವಾಕ್ಯಗಳು ಉದಾಹರಿಸಲ್ಪಟ್ಟಿವೆ.

* "ಯೋಗಮಾರ್ಗ ನಿರ್ಯೋಗದೊಳಿಹ ಶಿವಯೋಗಿಗೆ ನಮಿಸುವೆನು"
—ಸರ್ಪಭೂಷಣ ಶಿವಯೋಗಿ

[ಮುಂದುವರೆದಿದೆ

ಶಿವನ ನಿಷ್ಕಲಬೋಧೆ ತಾನೋಂ
ಶಿವನು ಪಂಚಬ್ರಹ್ಮರೂಪಂ
ಶಿವನು ವಿಶ್ವದ ಸಕಲರೂಪಂ ವರ್ಣವ್ಯೆದರಲಿ ॥ ೧೩ ॥

ನಿಷ್ಕಲಶ್ಶಿವ ಶುದ್ಧದರಿವೈ
ಸಕಲ ಶಿವತಾ ವಿಶ್ವರೂಪನು
ಸಕಲ ನಿಷ್ಕಲಮುಭಯರೂಪಂ ಶಿವಷಡಕ್ಷರದಿ ।
ನಿಷ್ಕಲೋಂಕಾರ್ ಜ್ಞಾನದೀಪವು
ಸಕಲ ಪಂಚಾಕ್ಷರವೆ ವಿಶ್ವವು
ಸಕಲ ನಿಷ್ಕಲದುಃಭಯವುಂ ಶ್ರೀ ಶಿವಷಡಕ್ಷರವು ॥ ೧೪ ॥

ಶಿವನ ಮಂತ್ರವು 'ಮೂಲ' 'ವಿದ್ಯಾ'
'ಶಿವವು' 'ಪಂಚಾಕ್ಷರವು' ಮತ್ತೀ
ಭವದಶಾರಕ 'ಶೈವ ಸೂತ್ರ'ಮದೆಂದು ಕೀರ್ತಿತವು ।
ಶಿವನಲಿಂಗಾಧಾರಿ ವೀರರು
ಶಿವನ ಪೂಜಾನಿರತ ಶರಣರು
ಶಿವಷಡಕ್ಷರ ಮಂತ್ರಮನನವನಿಂತುಗೈಯುವರು ॥ ೧೫ ॥

ಮೂಡಮಥವಾ ಬಡಗಮುಖದೊಳು
ರೂಢಿಯಾದಾಸನದಿ ಕುಳಿತವ
ರಾಡಿವುದು ಪೂರಕವು ಕುಂಭಕ ರೇಚಕಂಗಳನು ।
ನೋಡಿ ಹೃದಯಾಂಬೋಜ ಮಧ್ಯದೆ
ಗಾಡಿಯೋಳ್ ಧ್ಯಾನಿಪುದು ಮಂತ್ರಾ
ರೂಢಶಿವನನು ಲೋಚನತ್ರಯ ದೇವದೇವನನು ॥ ೧೬ ॥

---

ವಿಶುದ್ಧಿ ಆಜ್ಞಾಚಕ್ರಗಳಲ್ಲಿರುವ ಚಂದ್ರಮಂಡಲವನ್ನೂ; ಮಣಿಪೂರ ಅನಾಹತ ಚಕ್ರಗಳಲ್ಲಿರುವ ಸೂರ್ಯಮಂಡಲವನ್ನೂ; ಮೂಲಾಧಾರ ಸ್ವಾಧಿಷ್ಠಾನ ಚಕ್ರಗಳಲ್ಲಿರುವ ಅಗ್ನಿಮಂಡಲವನ್ನೂ—ನಿರ್ದೇಶಿಸಿರುವುದಲ್ಲದೆ-'ಓಂ'ಕಾರ 'ಸೋಹಂ'-ಎಂಬುದರ ಸೂಕ್ಷ್ಮ ರೂಪವೆಂಬುದನ್ನು ಸೂಚಿಸುತ್ತದೆ.

ಪರಮ ಗಂಗಾಧರನ ಸರ್ವಾ
ಭರಣ ಭೂಷಣ ಶಿವನ ನಿರ್ಗುಣ
ನಿರುಪಮಾಧಿಕನಮರವಂದಿತನನ್ನು ಭಾವಿಸುತೆ ।
ಪರಮ ನಿಷ್ಕಲ ಸಕಲ ಶಿವನ
ನ್ನಿರದೆ ಮೆರೆವೀ ಶಿವಷಡಕ್ಷರ
ನಿರುತ ಜಪಿಸರು ವಾಚಕೋಪಾಂಶೋಚ್ಛಮಾನಸದಿ ॥ ೧೭ ॥

ಎಲ್ಲರಾಲಿಸುವಂತೆ ಭಕ್ತರು
ಮೆಲ್ಲ 'ವಾಚಕ'ದಲ್ಲಿ ಮಂತ್ರವ
ಸಲ್ಲಲಿತ ಕಂಠದೊಳು ಪಾಡಲು ಸರ್ವಪಾಪಹರ ।
ಸ್ವಲ್ಪ ತುಟಿಯಲ್ಲಾಡಿಯಾರ್ಗುಂ
ಸೊಲ್ಲು ಕೇಳಿಸದಂತೆಯಾಂತರ
ದಲ್ಲಿ ಜಪವಂ ಮಾಡೆ ಕರೆವರು ಪಾಂಶುಜಪಮೆಂದು ॥ ೧೮ ॥

ಅಧರ ಜಿಹ್ವೆಗಳಾಡದೋಪರಿ
ಮಧುರಭಾವದಿ ಮಂತ್ರಮನದಿಂ
ಬುಧರು ಮಾಡುವ ಜಪವೆ 'ಮಾನಸ'ವೆಂದು ಪರಿಕೀರ್ತಿ ।
ಬುಧರ ಮತದೊಳರಿತು ನೆನೆವೊಡೆ
ವಿಧಿತ ಜಪಗಳ್ಮೂರುವಿಧಮುಂ
ಮಧುರಭಕ್ತಿಗೆ ವಿಧಿಸಿದಂಥ ಸಗರ್ಭಜಪಮಿಹವು ॥ ೧೯ ॥

ಕರ್ಮಯಜ್ಞವು ನೋಂಪಿದಾನವು
ಸರ್ವತಪಗಳು ಸಮಕೆ ಬಾರವು
ಸರ್ವಕುತ್ತಮ ಯಜ್ಞಜಪಕಿಂ ಷೋಡಶಾಂಶದಲಿ ।
ಪೂರ್ವದುಕ್ತಾಮಹಿಮೆವಾಚಕ
ದೊರ್ವ ಜಪಕುಂಟೀಯುಪಾಂಶುವು
ನೂರ್ಮಡಿಯಿನುತ್ತಮವು ಮಾನಸವೇಲು ಸಾಸಿರದಿ ॥ ೨೦ ॥

ಜಪದಿ ನಾಚಕ ಮೇಣುಪಾಂಶದೆ
ಸುಫಲಮೀವೀ ಮಂತ್ರ ಮಾನಸ
ಜಪನಿದುತ್ತಮ ಘೋರ ಭವಭಯ ನಾಶಕಾರಣವು ।
ಜಪದಿ ಮೂರರೊಳೊಂದನನುದಿನ
ಸಫಲಮಾಗಲು ವಿಧಿಗೆ ತಪ್ಪದೆ
ಜಪಿಸು ಪಂಚಾಕ್ಷರಿಯಮಂತ್ರವ ಪಾಶನಾಶಕವಂ ॥ ೨೧ ॥

ಪೂಜೆನಂತರ ಶಾಂತಮಾನಸ
ದೋಜೆಯಿಂ ನೆನೆಯೊಂದುಸಾಸಿರ
ಥಾಜ್ಯದರ್ಥವನೆರಡು ನೂರೈವತ್ತನೂರೆಂಟು ।
ತೇಜದೊಳು ನೆನೆ ಸಾಸಿರಾಷ್ಟಕ
ಪೂಜೆ ಕೋಟಿಗೆ ಸಮವು ಶಿವನುತಿ
ಸೋಜಿಗಂ ಸ್ತುತಿ ಜಪಕೆ ಮಿಗಿಲ್ಲೈ ಧಾನ್ಯಮಂತೆಲಯು ॥ ೨೨ ॥

ಸರ್ವತೋಯಾಹಾರವಾಯ್ವಾ
ಹಾರನಿರತರು ಚಾರುಚಂದ್ರಂ
ಸೂರ್ಯದಯನಂ ವ್ರತಿಗಳಾರ್ಗುಮಿಲ್ಲ ಶಿವಲೋಕ ।
ನೇರ ನಿಯಮವು ಯಜ್ಞನೋಂಪಿಯು
ನೂರುತಪಗಳು ಮೂಲಮಂತ್ರೋ
ಚ್ಚಾರಪೂಜೆಯ ಸಮಕೆ ಬಾರವು ಕೋಟಿಯಂಶದಲಿ ॥ ೨೪ ॥

ಶುದ್ಧನಾಗಲಶುದ್ಧನಾಗಲಿ
ವೃದ್ಧನಾಗಲಿ ಪತಿತನಾಗಲಿ
ಶುದ್ಧಮನದಿಂದೊಮ್ಮೆಪಂಚಾಕ್ಷರದಲರ್ಚಿಸಲು ।
ಬದ್ಧಜೀವಿಯು ಮುಕ್ತನಾಗುವ
ಸಿದ್ಧಿಸಾಗರದೊಮ್ಮೆಯುಸಿರಲು
ಮುದ್ದು ಪಂಚಾಕ್ಷರಿಯು ಪಶುವುಂ ಪಾಪಮೋಚಿಪುದು ॥ ೨೫ ॥

ಬೇರೆಬೇರೆಯ ವೇದಮಂತ್ರದೆ
ಸಾರಿ ಪೇಳಿಹ ಮಂತ್ರವನಿತೂ
ಭೂರಿತಪದಲೆ ಫಲಮನೀವುವು ಕಷ್ಟಸಾಧ್ಯದೊಳು ।
ಭೂರಿ ಮಹಿಮಾಧೀಶರೂಪದ
ಚಾರು ಪಂಚಾಕ್ಷರಿಯನೊಂದೇ
ಸಾರಿ ಪೇಳಲು ಸಿದ್ಧಿಸರ್ವವು ಸಿದ್ಧಿಪೊಂದುವವು ॥ ೨೬ ॥

ಅಂಗಲಿಂಗಿಯುಮಾತ್ಮಲಿಂಗಿಯು
ಲಿಂಗಪೂಜಾವ್ರತಿಯು ನಿಷ್ಠನು
ಲಿಂಗಶಿವನನು ಮೂಲಮಂತ್ರದೆ ನಿತ್ಯವರ್ಚಿಪನು ।
ಮಂಗಳಾತ್ಮಕ ಮೂಲಮಂತ್ರದೆ
ಲಿಂಗಶಿವನನು ಪೂಜ್ಯ ಭಕ್ತನು
ಮಂಗಳಶ್ಶಿವಲೋಕ ಪೊಂದುವ ಮಂತ್ರಮಹಿಮೆಯೊಳು ॥ ೨೭ ॥

ಚಾರು ಪಂಚಾಕ್ಷರವನೋದುತ
ಧೀರಗುರುವಿಂದಿತ್ತ ಲಿಂಗವ
ನಾರು ಪುಷ್ಪಾರ್ಪಣದಿ ಪೂಜುವರವರದಾ ಫಲವು ।
ಭಾರಿ ವಾಜ್ಪೇಯಾಜ್ಞ ಸಾಸಿರ
ಭೂರಿಫಲವನು ಮೀರಿಪೋಗ್ವುದು
ವೀರಲಿಂಗವ ಪೂಜಿ ನೆನೆಯ್ಯೆ ಮೂಲಮಂತ್ರವನು ॥ ೨೮ ॥

ಸಾರ ವೇದವುಮಗ್ನಿಹೋತ್ರವು
ಭೂರಿಯಜ್ಞವು ಭಾರಿದಾನವು
ಸೇರಿ ಫಲಿಸುವ ಸರ್ವಫಲಗಳ ತೂಗಿನೋಡಲ್ಕೆ ।
ಚಾರು ಪಂಚಾಕ್ಷರಿಯ ಜಪಫಲ
ಮೀರಿ ತೂಗ್ವುದು ಕೋಟಿಭಾರದಿ
ಸಾರಿಪೇಳ್ವೆ ಪ್ರಣವಪಂಚಾಕ್ಷರಿಯ ಮಂತ್ರವನು ॥ ೨೯ ॥

ಪೂರ್ವದೊಳು ಸಾನಂದಯೋಗಿಯು
ನಾರಕಾಂತರನೆತ್ತಿ ಸಲಹಿದ
ಚಾರು ಪಂಚಾಕ್ಷರಿಯ ಮಂತ್ರೋಚ್ಚಾರಮಾತ್ರದೊಳು ।
ನಾರಕಾಂತಕಿ ಸಾಂಗಿರಸನು
ದ್ಧಾರಕೋಸುಗ ಮುನಿಶತಾನಂ
ದಾರ್ಯ ನರಕವ ನಾಕಮಾಡಿದ ಮೂಲಮಂತ್ರದೊಳು ! ॥ ೩೦ ॥

ಯಾವ ಮುನಿಯುಪಮನ್ಯು ಶಿವನಿಂ
ಶೈವಶಾಸ್ತ್ರಾಚಾರ್ಯಪದವ
ನ್ನೀವಿ ಕಟ್ಟಿಸಿಕೊಂಡ ಪಂಚಾಕ್ಷರಿಯ ಜಪಿಸಲ್ಕೆ ।
ಕಾವಶಿವನಂ ಶ್ರೀಷಡಕ್ಷರ
ದೋವಿಪೂಜಿಸಿ ತಪವಗೈದರು
ಪಾವನಾತ್ಮರು ವಾಮದೇವ ವಸಿಷ್ಠರಾದಿಗಳು ॥ ೩೧ ॥

ಜಗದ ಸೃಷ್ಟಿ ಸ್ಥಿತಿ ಲಯಂಗಳು
ಯುಗಯುಗಾಂತರದಿಂದಲುರುಳಿಹ
ವಗಣಿತಂ ಮಹಿಮಾಂತ ಪಂಚಾಕ್ಷರಿಯ ಮನನದೊಳು ।
ಜಗದಕರ್ತಂ ಬ್ರಹ್ಮದೇವರು
ಜಗದರಕ್ಷಕ ವಿಷ್ಣುದೇವರು
ಜಗದ ಭಕ್ಷಕ ರುದ್ರದೇವರು ಶಿವನ ಭಾವಿಪರು ॥ ೩೨ ॥

ಬಹಳ ಮಾತಿಂದೇನು ಮಂತ್ರದ
ಮಹಿಮೆಯಗಣಿತವದನುವೋಂಕಾ
ರಹಿತ ಜಪಿಸಲು ಜಗಕತೀತನ ಶಿವನಪೂಜೆಯಲಿ ।
ದಹಿಸಿಪೋಪುದು ದುರಿತಪಾಪವು
ಮಹವ ಬೆಳಗುವ ಮೋಕ್ಷಲಕ್ಷ್ಮಿಯು
ಮಹಿಮಭಕ್ತನ ಕೂಡಿನಲಿವಳು ಶಿವನ ಕರುಣದೊಳು ॥ ೩೩ ॥

ಇಂತು ರೇಣುಕಗೀತೆ ಬೋಧಿಪು
ದೆಂತು ಭಕ್ತಸ್ಥಲದಿ ಭಕ್ತನು
ಶಂತ 'ಪಂಚಾಕ್ಷ'ರಿಯ ನೆಲೆಯಂ ಸೇರಿ ಬೆರೆಯಲ್ಕೆ ।
ಎಂತು ನೆನೆಯುವ ಸಕಲ ನಿಷ್ಕಲ
ದಿಂತು ಮೆರೆವೀ ಶಿವಷಡಕ್ಷರ
ಮಂತ್ರಮಹಿಮಂ ಸೇರ್ವನೆಂಬೀಸಂಧಿ ಸಂಪೂರ್ಣಂ ॥ ೩೪ ॥

ಎಂಟನೆಯ ಸಂಧಿ ಸಂಪೂರ್ಣಂ

ಅಂತು ಸಂಧಿಯೊಂಭತ್ತಕ್ಕಂ ಪದನು ಮುನ್ನೂರು ಮೂವತ್ತೆಂಟಕ್ಕಂ.

ಮಂಗಳಮಸ್ತು.

# ಒಂಭತ್ತನೆಯ ಸಂಧಿ

## ಭಕ್ತಿಮಾರ್ಗ ಕ್ರಿಯಾಸ್ಥಲಾದಿ ಸಪ್ತಸ್ಥಲಂಗಳ ನಿರೂಪಣಂ

ಸೂಚನೆ—ಪರಮ ಭಕ್ತಸ್ಥಲದೊಳಾಶ್ರಯಿ
ಸಿರುವ ಪದಿನೈದರೊಳು ಮುಂದಾ
ಚರಿಪ ಸಪ್ತವಿಧಸ್ಥಲಂಗಳನೊರೆದನಾಚಾರ್ಯ ||

ಗುರುವೆ ರೇಣುಕ ! ತಮ್ಮ ಕರುಣೆಯೊ
ಳರಿತೆ ಪಂಚಾಕ್ಷರಿಯ ಮನನವು
ಪರವನರಿಯಲ್ಲರಿತು ಬೆರೆಯಲು ಮೂಲವೆಂಬುದನು |
ಕರುಣೆಬೋಧಿಸು ಭಕ್ತಿಮಾರ್ಗದೊ
ಳಿರುವ ಮುಂದಿನವೇಳುತಾಣದೊ
ಳಿಂತು ನಡೆಯುವ ವಿಧಿವಿಧಾನಂಗಳನು ವಿವರದೊಳು | || ೧ ||

ಏಳು ಮುನಿವರ ! ಏಳು ! ಮುಂದಿನ
ವೇಳೆ* ತಾಣಂಗಳಲಿ ನಡೆಯಲು
ತಾಳ್ಮೆಗೆಡದೊಲು ಭಕ್ತಿಮಾರ್ಗಕ್ರಿಯೆಯನಾಚರಿಸು |
ಏಳು ಪೂಜಿಸಲುಭಯಮಂ ಮೇ
ಹೇಳು ಪೂಜಲ್ ತ್ರಿವಿಧ ಸಂಪದ
ಬಾಳು ಕರುಣಾ ಶ್ರೀಪ್ರಸಾದದಿ ದಾನವೀಯುತಲಿ || ೨ ||

---

* ಸಪ್ತವಿಧ ಸ್ಥಲಂಗಳು :—ಭಕ್ತಿಮಾರ್ಗ ಕ್ರಿಯಾಸ್ಥಲಂ ; ಉಭಯಸ್ಥಲಂ ; ತ್ರಿವಿಧ ಸಂಪತ್ತಿ ಸ್ಥಲಂ ; ಪ್ರಸಾದ ಸ್ವೀಕಾರಸ್ಥಲಂ ; ಸೋಪಾಧಿದಾನಸ್ಥಲಂ ; ನಿರುಪಾಧಿದಾನ ಸ್ಥಲಂ ; ಸಹಜದಾನ ಸ್ಥಲಂ.

## (೯) ಭಕ್ತಿಮಾರ್ಗ ಕ್ರಿಯಾಸ್ಥಲಂ

ನಿರುತ ರುದ್ರಾಕ್ಷಿಯನು ಭೂತಿಯ
ಧರಿಸಿ ವರಶುಚಿ ಮೂಲಪಂಚಾ
ಕ್ಷರದ ಜಪರತಿ ಮೇಣು ಲಿಂಗಾಂಗಂಗೆ ಭಕ್ತಂಗೆ ।
ವರದಶಂಭು ಶ್ರವಣ ಕೀರ್ತನ
ಹರನ ನಾಮಸ್ಮರಣ ಸೇವನ
ಪರಮನರ್ಚನ ನಮನ ದಾಸ್ಯಂ ಸಖ್ಯಮರ್ಪಣದಿ ॥ ೩ ॥

ಇಂದುಧರನಂ ಶಂಭುಲಿಂಗನ
ನೊಂದುಮನದಿಂ ತುಂಬುಹೃದಯದಿ
ಬಂಧ ಭವಹರಕೆಂದು ಗೈವೀಭಕ್ತಿ ನವವಿಧವು* ।
ಇಂದು ಲೋಕದಿ ಭಕ್ತಿ ದುರ್ಲಭ
ಬಂಧಪಾಶಗೆ ಪಾಪಕರ್ಮಿಗೆ
ಚಂದಕರ್ಮಿಗೆ ಪುಣ್ಯಫಲದಿಂ ಭಕ್ತಿ ಬಲುಸುಲಭ ॥ ೪ ॥

ಅಂತ್ಯಜೋತ್ತಮನಾವನಾಗಲಿ
ಶಂತಮಯ ಶಿವಭಕ್ತಿಯಾಂಕುರಿ
ಪಂತು ನಡೆಯಲು ಭಕ್ತನೆಂದೇ ಕೀರ್ತಿಗೊಳ್ಳುವನು ।
ಇಂತು ನವವಿಧ ಭಕ್ತಿಬಲಿಯ
ಲ್ಲಂತ್ಯಜೋತ್ತಮನೆಂದು ಗಣಿಸದೆ
ಶಂತಮಯ ಶಿವನೊಲಿವ ಭಕ್ತಿಚ್ಯುತಸಿಗೆಂತೊಲಿವ? ॥ ೫ ॥

---

ನವವಿಧಭಕ್ತಿ :—ಶ್ರವಣ, ಕೀರ್ತನ, ನಾಮಸ್ಮರಣ, ಸೇವನ, ಅರ್ಚನ, ನಮನ, ದಾಸ್ಯ, ಸಖ್ಯ, ಅರ್ಪಣಗಳಿವು ನವವಿಧ ಭಕ್ತಿಗಳು.

ಭಕ್ತಿಯಿಬ್ಬಗೆಯಿಹುದು ಬಾಹ್ಯಾ
ಭಕ್ತಿಯಂತರಭಕ್ತಿ ಮತ್ತಾ
ಭಕ್ತಿಸೂಕ್ಷ್ಮಂ ಸ್ಥೂಲಮೆನ್ನುವ ಪೆಸರು ಪಡೆದಿಹುದು ।
ಭಕ್ತಿಲೋಲಂ ಸ್ಥೂಲಲಿಂಗದ
ಯುಕ್ತ ಪೂಜೆಯಮಾಡೆ ಬಾಹ್ಯವು
ಭಕ್ತಿಗಾಗಿಯೆ ಸೂಕ್ಷ್ಮಲಿಂಗನ ಪೂಜ್ಯವದಂತರವು ॥ ೬ ॥

ಚೆನ್ನಲಿಂಗನ ಶುದ್ಧಮಾದೆಡೆ
ರನ್ನಸಂಯುತ ಮುತ್ತು ಮಾಣಿಕ
ದುನ್ನತಾಸನದಲ್ಲಿ ಪೂಜಿಸೆ ಬಾಹ್ಯಭಕ್ತಿಯದು ।
ಚೆನ್ನಲಿಂಗದೆ ಹರಣ ಹರಣದೆ
ಚೆನ್ನಲಿಂಗವ ಬೆರಸಿ ಬೇರೇ
ನನ್ನು ಚಿಂತಿಸದಿಹುದೆ ಶಿವಯೋಗಾಂತರಿಕ ಭಕ್ತಿ ॥ ೭ ॥

ಅಂತರಂಗದಿ ಸೂಕ್ಷ್ಮಲಿಂಗವ
ನಿಂತು ಯೋಗಿಯು ನೆನೆದು ಭವವ
ನ್ನಂತ್ಯಗೊಳಿಪನು ಹುರಿದಭೀಜವದವಗೆ ಭವವಿನ್ನು ।
ಶಂತಮಯ ಶಿವಭಕ್ತಿಯುತ್ತಮ
ವಂತೆ ಗೋಪ್ಯವು ಪರಮಭಕ್ತಿಯ
ನಿಂತು ಸಾಧಿಸೆ ಮುಕ್ತಿ ಪೊಂದುವನಿಲ್ಲಸಂದೇಹ ॥ ೮ ॥

ಬೀಜವಾಂಕುರಕೆಂತು ಮೂಲವೊ
ಬೀಜಕೆಂತಂಕುರವು ಮೂಲವೊ
ಸಾಜದಿಂ ಶಿವದತ್ತಭಕ್ತಿಯೆ ಶಿವದಿ ಬೆರೆಸುವುದು ।
ಸಾಜಭಕ್ತಿಯು ಜಗದಜನರಿಗೆ
ತೇಜದೊಂದೇ ಜನ್ಮದುದಿಸದು
ಪೂಜ್ಯ ಶಿವನಂ ಶಂತಮಯನಂ ಭಜಿಸು ಶಂಕರನಂ ॥ ೯ ॥

ಜನ್ಮಜನ್ಮಾಂತರ ಶುದ್ಧಗೆ
ಸಮ್ಮುದಂ ಶ್ರುತಿಯಾಗಮೋಕ್ತದ
ಧರ್ಮಕರ್ಮಿಗೆ ಲಿಂಗಪೂಜಾಸಕ್ತ ವಿರತಂಗೆ ।
ಸಮ್ಮುದದೆ ಶಿವನೊಲಿವ ! ಶಿವನೋ
ಳೊಲ್ಮೆಯಾಂತವ ಮುಕ್ತ ! ಮುಕ್ತನು
ಚಿನ್ಮಯಂ ಶಿವರೂಪಪೊಂದುವ ನಿಜದಲೋರಂತೆ ॥ ೧೦ ॥

ಮಂದಮತಿಯುತ ಮನುಜನಾದರು
ಮುಂದೆ ಮೂರೇ ಜನ್ಮಸರಿಯು
ಲ್ಪೊಂದುವನು ನಿಜಪದವಿ ! ಯೋನಿಜ ಬಾಧೆಯಿಲ್ಲವಗೆ ।
ಸಂದೆ ನವವಿಧ ಭಕ್ತಿಪೂರ್ಣವು
ಕುಂದು ಸೇವೆಯೊಳಾಗಲಲ್ಪವು
ಮುಂದದುವೆ ಮಾನಸವು ವಾಚಕ ಕಾಯಕೆಂದಾಯ್ತು ॥ ೧೧ ॥

ಯಾವ ಕಾಲದೊಳಾವ ಕಾರ್ಯದೊ
ಳಾವ ರೂಪದೊಳಾವ ಭಾವದೊ
ಳಾವ ಸೇವೆಯೊಳವಗಂ ಶಿವಮನನ ಮಾನಸಿಕ ।
ಯಾವಗಂ ಶಿವಮಂತ್ರ ಜಪಮೇ
ಸೇವೆಯಾಗಿರಲದುವೆ ವಾಚಕ
ಯಾವ ಪೂಜೆಗೆ ದೇಹವಿನ್ಯಾಸಲ್ಲದುವೆ ಕಾಯಕವು ॥ ೧೨ ॥

ಸೇವೆ ದೈಹಿಕ ಮಾತು ಮನದಿಂ
ಭಾವ ಭೇದಾಧಾರವಶದಿಂ
ತ್ರೈವಿಧಂಗಳು ಬಾಹ್ಯಮಾಭ್ಯಂತರಮುಭಯಮೆಂದು ।
ಶೈವಪೂಜಾರೀತಿ ಬಾಹ್ಯವು
ಶೈವವೀರರ ಲಿಂಗಪೂಜಾ
ಸೇವಮಾಭ್ಯಾಂತರವು ಮಾನಸ ಪೂಜೆತಾನುಭಯಂ ॥ ೧೩ ॥

ಶಿವನ ನೆನೆಯುತಲಿರ್ಪುದದುಮನ
ಶಿವನ ಹೊರತಾಗನ್ಯ ರತವ
ಲ್ಲವನ ನಾಮೋಚ್ಚಾರ ವಾಣಿಯುಮನ್ಯಮಂತೆನದು |
ಶಿವನಲಿಂಗಂ ಭಸ್ಮ ಧರಿಸುವ
ಶಿವನುಪಾಸಕ ಗುರುವುಸೇವಕ
ದಿವ್ಯಕಾಯುವೆ ಕಾಯಕುಳದೈವಾರ್ಚಕನದಲ್ಲ ॥ ೧೪ ॥

ಹರನಭಜನೆಯು ಪಂಚವಿಧದೊಳು
ಮರಳಿ ವಿಭಜನೆಗೊಂಡ ರೀತಿಯೆ
ಪರಮತಪ, ವರಕರ್ಮ, ಜಪವುಂ, ಧ್ಯಾನ, ಸುಜ್ಞಾನ |
ಹರನ ಬೆರೆಯಲು ದೇಹಶೋಷಣೆ
ಪರಮತಪವನ್ಯಂ ವೃಥಾಶ್ರಮ
ವರದ ಲಿಂಗಾರ್ಚನೆಯೆ ಕರ್ಮವು ಯಜ್ಞಕೃತಿಯಲ್ತು ॥ ೧೫ ॥

ಗಣಪ ರುದ್ರಾಧ್ಯಾಯ ಪಠಣಂ
ಪ್ರಣವ ಪಂಚಾಕ್ಷರಿಯ ನೆನಹುಂ
ಗಣಿಸೆ ಜಪವೈ ವೇದ ಪಶುಬಲಿ ಬೋಧೆ ಜಪಮಲ್ತು |
ಗಣಪ ಪರಶಿವರೂಪ ಚಿಂತಾ
ಪ್ರಣವಮನನಂ ಧ್ಯಾನಮನ್ಯಂ
ಕ್ಷಣಿಕದಾತ್ಮನ ಚಿಂತೆಯೆಂದೂ ಧ್ಯಾನಮೆನ್ನಿಸದು ॥ ೧೬ ॥

ಪರಶಿವಾಗಮ ತತ್ತ್ವಬೋಧವ
ನರಿಯೆ ನೈಜಜ್ಞಾನಮಿತರೇ
ತರದ ತಿಳಿವುಂ ಜ್ಞಾನಮೆನ್ನಿಸದೆಂಬ ನಿಜನಿಲವಂ |
ಅರಿತು ನಡಸೈ ಪಂಚವಿಧದೋ
ಳಿರುವ ಶಿವಯಜ್ಞವನು ನಿತ್ಯವು
ಪರಮಶಿವನೊಳು ಭಕ್ತಿಯುತ ನಿಜಭಕ್ತನೆಂದೆನಿಪೆ ॥ ೧೭ ॥

ಪುಣ್ಯಲಾಭವು ಶೈವಭಕ್ತನ
ಮನ್ನಿಸಲ್ಲವಮಾನ ಮಾಡಲು
ಬೆನ್ನಬಿಡನಲೆ ದುರಿತನರಕವು ಬರ್ಕುಬೆಂಬತ್ತಿ !
ಚೆನ್ನಭಕ್ತನು ಭಕ್ತಿವಿಮುಖರ
ನಿನ್ನು ಮುಟ್ಟನು ನೋಡ ವಾಸಿಸ
ತನ್ನತಪದೊಳುನಿರತ ಮೌನಿಯು ಶಾಂತ ಸತ್ಶೀಲ ॥ ೧೮ ॥

ದೀಕ್ಷಪಡೆದಾ ಲಿಂಗಧಾರಿಯು
ಮೋಕ್ಷಕಾರಣ ಲಿಂಗಶಿವನನು
ದೀಕ್ಷಮಿತ್ರಾಚಾರ್ಯವರ್ಯನ ಪೂಜಿಸಲೆಬೇಕು ।
ದೀಕ್ಷಲಿಂಗವು ಶಿವನುಮತ್ತಾ
ಧೀಕ್ಷಮಿತ್ರಾಚಾರ್ಯವರ್ಯನು
ಮೇಕನಿಷ್ಠೆಯ ಭಕ್ತಗೊಂದೇ ಪ್ರಾಣಸರಿಸಮವು ॥ ೧೯ ॥

ವೀರಮಾರ್ಗಾಚಾರ ನಿರತರು
ವೀರಶೈವರ ಜಾತಿ ಬಾಂಧವ
ರಾರವರ ಗೃಹದಲ್ಲಿ ಮಾತ್ರಂ ಭುಂಜಿಸಲುಬೇಕು ।
ವೀರಶೈವಾಚಾರ ವಿಮುಖರು
ನೇರಭವಿಗಳು ದುರ್ನಡತೆಯವ
ರಾರೆಯಾಗಲಿ ಕೊಟ್ಟ ಷಡ್ವಿಧವಸ್ತು ವರ್ಜಪುದು ॥ ೨೦ ॥

ಶೈವವೀರನು ಶಿವನನಲ್ಲದೆ
ದೇವದೇವತೆಯನ್ನು ನೆನೆಯಂ
ಯಾವಕೀರ್ತನೆ ಮಾಡನರ್ಪಿತವನ್ನು ಸೇವಿಸನು ।
ಯಾವ ಗೃಹದೋಳನ್ಯ ದೈವವ
ನೋವಿ ಪೂಜಿಪರಲ್ಲಿ ನಿಲ್ಲನು
ಯಾವ ಭವಿಯನು ಲಿಂಗಪೂಜಾಕಾಲದೊಳು ನೋಡ ॥ ೨೧ ॥

ವೀರಶಿವಮತ ಮಾರ್ಗವರ್ತಿಯು .
ಧೀರ ಲಿಂಗಾಚಾರ ನಿರತನು
ಚಾರು ಲಿಂಗಸ್ವಾವರಾರ್ಪಿತವನ್ನು ಸೇವಿಸನು ।
ಚಾರುಲಿಂಗಕೆ ಲಿಂಗಿಭಕ್ತಗೆ
ಕೋರಲಾಪದವನ್ನು ಸಹಿಸನು
ವೀರ ! ಹರಣವತೆತ್ತು ಪೊರೆವನು ಮುಕ್ತಿಪೊಂದುವನು ॥ ೨೨ ॥

ಎಲ್ಲಿ ಧರ್ಮಾಚಾರ ನಿಂದಿಪ
ರಲ್ಲಿಗೆಂದೂ ಪೋಗಬಾರದು
ಸಲ್ಲದವ ಶಿವನಿಂದೆಮಾಡುವವನುನೆಯ ಬಿಡಬೇಕು ।
ಎಲ್ಲ ಭೂತಾಧೀಶ ಶಿವನಿಂ
ಗಲ್ಲಸಲ್ಲದ ನಿಂದೆಮಾಡುವ
ಸಲ್ಲದಾತನ ಪಾಪಹರಿಯದು ನೂರುವರ್ಷಾಂತ್ಯ ॥ ೨೩ ॥

ಶಿವನನಿಂದಕ ಕಂಡತಕ್ಷಣ
ಜವದಿ ದಂಡಿಸಬೇಕುಮಥವಂ
ಥವನ ಶಪಿಸಲುಬೇಕುಮಿಲ್ಲಂಥೆಡೆಯ ಬಿಡಬೇಕು ।
ಶಿವನಪೂಜಕ ಪೂರ್ವಕರ್ಮಗ
ಳವನು ಬಿಡಲೇಬೇಕು ಬಿಡದಿರ
ಲವನ ಪೂಜಾಫಲವು ಫಲಿಸದು ಶಿವನೊಲಿಯನವಗೆ ॥ ೨೪ ॥

ಚೆನ್ನಶಿವನಾಶ್ರಯವ ಪಡೆದವ
ಚೆನ್ನಲಿಂಗಾರಾಧಕೋತ್ತಮ
ಮನ್ನಣೀಯದ ವೃತ್ತಿವಿಡಿಯದೆ ನೀಚವೃತ್ತಿಗಿರೆ ।
ಉನ್ನತಾಶ್ರಯ ಪತಿತ ಮೂಢನು
ಚೆನ್ನಸಂಗದೊಳಿರಲಯೋಗ್ಯನು
ತನ್ನ ಹೃದಯವು ಮಿಡಿವಕಾಯಕಧರ್ಮದಿಂ ಚ್ಯುತನು ॥ ೨೫ ॥

ಪ್ರಣವಮಂತ್ರವ ನುಡಿವ ನಾಲಗೆ
ಹಣನಿರೀಕ್ಷದೆ ನರನ ನುತಿಸಲು
ಚಣಕಲಿಂಗಿಯು ಧೂರ್ತನಡೆಯುಂ ಕುಕವಿಯೆಂದೆನಿಪ |
ಪ್ರಣವಪಂಚಾಕ್ಷರದ ಜಪರತಿ
ಗಣಿಸನಿತರರ ಸಿರಿಯುಸಂಪದ
ಮಣಿವನೀಶಗೆ ಶಿವನಶರಣಂಗೊಂದೆ ಭಾವದೊಳು || ೨೬ ||

ಒಲಿದ ಶಿವರತಿ ಚರ್ಮಪಾತ್ರದಿ
ಜಲವ ತೈಲವನಿರಿಸಿ ಬಳಸನು
ಮಲಿನಮಾವರಿಸೆತ್ತಿಬಳಸಲು ನರಕರೌರವವು |
ಒಲಿಯೆ ಭಕ್ತನು ನೋಂಪಿನಿಯಮವು
ಫಲಿಸಿ ಫಲಮೀವನಿತುಕಾಲವು
ಛಲದೊಳಾಚರಿಸೈಕ್ಯಪೊಂದುವ ಭಕ್ತಿಲೋಲನಲಿ || ೨೭ ||

ವೀರಶೈವನ್ನಿಷ್ಟಲಿಂಗಿಯು
ಪಾರಮಾರ್ಥಿಕ ಲಿಂಗಪೂಜೆಯೊ
ಕೇರಿಗದ್ದುಗೆ ಜನನಮರಣದ ಸೂತಕಿರದಯ್ಯ |
ವೀರಶಿವಮತದಲ್ಲಿ ದೀಕ್ಷಿತ
ನಾರಿ ಲಿಂಗಾರ್ಚನೆಯಗೈಯಲು
ಬಾರದಡ್ಡಿ ಪ್ರಸವಋತುವಾದಿಗಳ ಸೂತಕವು || ೨೮ ||

ಜನನ ಮರಣ ಪ್ರಸವ ಋತುಗಳು
ಜನಿತ ಸೂತಕಮಡ್ಡಿಬಾರವು
ಚಿನುಮಯಂ ಶಿವಲಿಂಗಪೂಜಾಕಾಲಮಾತ್ರದೊಳು |
ತನುಮನಂಗಳು ಕಾಲವಶಮಿರೆ
ಜನುಮಕಂಟುವ ಸರ್ವಪಾಪಗ
ಳನಿತುನಾಶವು ಚಿಮುಕಿದಾಕ್ಷಣ ಗುರುವು ಚರಣಾಂಬು || ೨೯ ||

ಲಿಂಗಸಂಗಿಯು ಯಾತ್ರಕಾಲದೆ
ಲಿಂಗಮಂದಿರ ಪುಣ್ಯತೀರ್ಥವ
ಸಂಗಶುದ್ಧಿಗೆ ಭಾವಬಲ್ಮೆಗೆ ಮುದದಿ ಸೇವಿಪುದು ।
ಜಂಗಮರು ಸುಕ್ಷೇತ್ರಯಾತ್ರೆಗೆ
ತಂಗುವೆಡೆಯೊಳುತ್ಸವದೊಳುಂ
ಗಂಗೆದಾನವನನ್ನದಾನವ ಮುದದಿ ಮಾಡುವುದು ॥ ೩೦ ॥

ಅನ್ನದಾನಕೆ ಗಂಗೆದಾನ
ಕಿನ್ನು ಮಿಗಿಲಿಹದಾನಮುಂಟೇ
ನುನ್ನತಾರ್ಥದ ತಪವಹಿಂಸೋದಾರಿ ಶಿವಮತಿಗೆ ।
ಕನ್ಯದಾನವ ಗೋತ್ರಸೂತ್ರದೆ
ತನ್ನಜಾತಿಯ ಬಂಧುಬಾಂಧವ
ರನ್ನು ನೋಡೇ ಮಾಡಿಪಡೆಯಲು ವಿಧಿತ ಶಿವಮತಿಗೆ ॥ ೩೧ ॥

## (೧೦) ಉಭಯ ಸ್ಥಲಂ

ಯಾರು ಲಿಂಗಾಚಾರ ನಿರತನೊ
ವೀರಶಿವಮತಿಯವನು ನಿಜದೊಳು !
ಧೀರಗುರು, ವರಲಿಂಗ ನೋಂಪಿಯಪೂಜೆಗೊಂದವಗೆ ।
ಧೀರಗುರುವರ ಪೂಜೆ ಸಾಕ್ಷಾತ್
ಕಾರುಣಿಕ ಶಿವಪೂಜೆಯದರಿಂ
ಧೀರಗುರುವನು ಲಿಂಗಶಿವನನು ಪೂಜು ಭಕ್ತಿಯೊಳು ॥ ೩೨ ॥

ಕಾವಶಿವನನು ದೇವದೇವನ
ಭಾವಭಕುತಿಲಿ ಪೂಜೆಗೈಯ
ಲ್ಲೀವ ಸರ್ವಾಭೀಷ್ಟಸಿದ್ಧಿಯನಂತೆ ಗುರುಮೂರ್ತಿ ।
ಭಾವದಿಂದುಪಚರಿಸಿ ಪೂಜುವ
ಗೀವ ಕರುಣದಿ ಶುಭದನುಗ್ರಹ
ಯಾವಕಾಲಕು ತಪ್ಪದೋಪರಿಂ ಗುರುವನುಪಚರಿಸು ॥ ೩೩ ॥

ಬರಿಯಕಣ್ಣಿಗೆ ಕಾಣಬಲ್ಲನೆ
ನಿರವಯವಶಿವ ನಿರ್ಗುಣಪ್ರಭು
ಪರಮನಿರ್ಮಲ ಮಾಯರಹಿತಾಲಂಬ ರಹಿತನವ ।
ವರದನಾಗಿಹ ಶಿವನು ತಾನೇ
ಪರಮಗುರುವಿನ ರೂಪವಾನುತ
ಚರಿಸಿ ಭುವಿಯೊಳು ಕರುಣಿಸುತಿಹ ಭಕ್ತಿಸುಕ್ತಿಯನು ॥ ೩೪ ॥

ವರದಗುರುವಿನ ಕೃಪೆಯನೌಕೆಯು
ದುರಿತಭವಭಯಸಾಗರಾಂತ್ಯವ
ಪರಮಶಿವದರಿವಾಗಿ ದಾಂಟಿಸೆ ವಂದನೀಯಗುರು ।
ಕರುಣಗುರುವಿನ ಕೃಪೆಯದೃಷ್ಟಿಯು
ಪರಮಶಿವನಾನಂದರೂಪವ
ನಿರದೆ ಭಕ್ತಗೆ ನೋಡನೀಡಲು ಪೂಜನೀಯಗುರು ॥ ೩೫ ॥

ದೇಹದಂಡಿಸಿ ಸೇವೆಸಲ್ಲಿಸು
ಮೋಹವರ್ಜಿಸಿ ಧನವನರ್ಪಿಸು
ಮೋಹದೂರನ ಜ್ಞಾನಬೋಧಾನಂದ ಗುರುವನ್ನು ।
ದೇಹದಂಡನ ಸೇವ ದಾನಕೆ
ಮೋಹದೂರಾಚಾರ್ಯನೀವನು
ದೇಹಶುದ್ಧಿಯನಾತ್ಮದರಿವನು ಮೋಕ್ಷಸಂಪದವ ॥ ೩೬ ॥

ತ್ವರಿತಗತಿಯೋಳಿಷ್ಟಸಿದ್ಧಿಯು
ಕರಗತವು ತಾನಾಗಲಿಚ್ಛಿಸೆ
ಗುರುವಿನಾಣತಿ ಮೀರಬಾರದು ವಿನಯವಾಧರಿಸೈ ।
ಗುರುವಿನಾಣತಿ ಮಿಾರ್ದೆಯಾದರೆ
ಸರುವಸಿದ್ಧಿಯು ಸುಟ್ಟುಪೋಪುದು
ಹರನ ಕಟ್ಟಾಣತಿಯ ಮಾರಿದ ಮೂರ್ಖನಂತಾಗ್ವೆ ॥ ೩೭ ॥

## (೧೧) ತ್ರಿವಿಧ ಸಂಪತ್ತಿ ಸ್ಥಲಂ

ಎಂತು ಗುರುವನ್ನೆಂತುಲಿಂಗವ
ಶಂತಮಯ ಶಿವನೆಂದು ಪೂಜುವೆ
ಯಂತೆ ಜಂಗಮನಲ್ಲಿ ನಿತ್ಯವು ಭಕ್ತಿಮಾಡುವುದು |
ಶಂತಮಯ ಶಿವಭಕ್ತರುನ್ನತಿ
ಗಿಂತು ವರಗುರು ಲಿಂಗಜಂಗಮ
ರಂತೆತೋರುತ ಭುಕ್ತಿ ಮುಕ್ತಿಯನೀಯಲೆಂದಿರುವ || ೩೮ ||

ಗಂಗೆಧರಹರ ಶಂಭುಪರಮನು
ಲಿಂಗಚರಚಿರಮೆಂಬ ಭೇದದೊ
ಳಂಗಲಿಂಗಂ ಶಂಭುಲಿಂಗವ್ಮೆಂಬ ರೂಪಾದ |
ಲಿಂಗಶಂಭುವನೆಂತು ಪೂಜ್ಸೆಯೊ
ಲಿಂಗಚರವನ್ನಂತೆ ಪೂಜುವು
ದಂಗಲಿಂಗದೆ ಬೆರೆದು ಬಯಲಾಗೈಕ್ಯವಡೆವನಕ || ೩೯ ||

ಚಿರದ ಲಿಂಗವು ಶಿಲೆಯು ಮೃತ್ತಿಕೆ
ವಿರಚಿತವು ಚರಲಿಂಗವು ಶಿವನವ
ತರಿಸಿಬಂದಿಹ ಯೋಗಿರೂಪವು ಪೂಜ್ಯಶಿವಯೋಗಿ
ಚಿರದಲಿಂಗದೆ ಮಂತ್ರರೂಪದೊ |
ಳಿರುವನಾಶಿವ ಚರದಲಿಂಗದೊ
ಳಿರುನಾವಗು ನಿತ್ಯತಪ್ಪದೊಳೋವಿ ಸೇವಿಪುದು || ೪೦ ||

ವೀರಯೋಗಿಗೆ ದಾನವೀಯುವ
ಚೂರುಕಾಣಿಕೆ ಫಲಿಪುದಕ್ಷಯ
ಭೂರಿಫಲವನು ಸರ್ವಯತ್ನದೆ ನೀಡು ದಾನವನು |
ವೀರಶಿವಯೋಗಿಯನು ಪೂಜಿಪ
ರಾರವರಫಲ ನಾಶರಹಿತವು
ಕಾರುಣಿಕ ಶಿವಯೋಗಿ ಸೇವಿಸು ಶಾಸ್ತ್ರಮತದಂತೆ || ೪೧ ||

ಬಂದ ಶಿವಯೋಗಿಯನು ಮಾನಿಸು
ತಂದೆಸೇವಿಸಿ ಕರುಣೆಯಂ ಪಡೆ
ನಿಂದಿಸವಮಾನಿಸಿದೆಯಾದೊಡೆ ದುರ್ಗತಿಯ ಪಡೆವೆ ।
ವಂದನೀಯಂ ಯೋಗಿ ಸಾಕ್ಷಾತ್
ಚಂದ್ರಧರಶಿವನೆಂದೆ ಸೇವಿಸು !
ಒಂದೆಭಾವದೆ ಪೂಜಿ ವರಗುರು ಲಿಂಗಜಂಗಮರ ॥ ೪೨ ॥

## (೧೨) ಪ್ರಸಾದ ಸ್ವೀಕಾರಸ್ಥಲಂ

ಲಿಂಗಪಾದದತೀರ್ಥ ವರಗುರು
ಜಂಗಮಾರ್ಯರ ಪಾದತೀರ್ಥವ
ಲಿಂಗಿಭಕ್ತನು ನಿತ್ಯಸೇವಿಪುದೊಂದೆಭಾವದೊಳು ।
ಅಂಗಶುದ್ಧಿಯೊಳಾತ್ಮದರಿವಿಗೆ
ಲಿಂಗವರಗುರು ಜಂಗಮಾರ್ಯ್ಯರ
ಮಂಗಳಾತ್ಮಕ ಪಾದತೀರ್ಥವೆ ಮೂಲಕಾರಣವು ॥ ೪೩ ॥

ಸರ್ವಮಂಗಲಗಳ್ಗೆ ಮಂಗಲ
ಸರ್ವಪಾವನಗಳ್ಗೆ ಪಾವನ
ಸರ್ವಸಿದ್ಧಿಗು ಸಿದ್ಧಿಕರವೈ ಶಂಭುಪಾದಾಂಬು ।
ಶರ್ವಭಕ್ತರು ಲಿಂಗಶಿವ, ಗುರು
ಸಾರ್ವಭೌಮರ, ಜಂಗಮಾರ್ಯರ
ಸರ್ವಶುಭಕರ ಕರುಣಪಾದೋದಕವ ಸೇವಿಪುದು ॥ ೪೪ ॥

ವರಶಿವಾರ್ಪಿತ ಪತ್ರಪುಷ್ಪವ
ನಿರದೆ ಶಿರದೊಳು ಧರಿಪ ಭಕ್ತನು
ನಿರುತ ಪಡೆವನು ಪೌಂಡರೀಕಕ್ರಿಯೆಯ ಫಲಗಳನು ।

ಹರನಿಗುಣ್ಣಿಸಿಯುಣ್ಣ ಬೇಕೈ
ಹರನಿಗೂಡಿಸಿ ಕುಡಿಯಬೇಕೈ
ಹರನಿಗರ್ಪಿಸಿ ಮೂಸಬೇಕೈ *ಶ್ರುತಿಸುನುತವಿಂತು ॥ ೪೫ ॥

ಲಿಂಗಕರ್ಪಿತ ಪತ್ರಪುಷ್ಪವು
ಲಿಂಗಕರ್ಪಿತ ತೀರ್ಥಫಲಗಳು
ಲಿಂಗಕರ್ಪಿತ ಸರ್ವಭೋಜ್ಯವು ಭಕ್ತನುಪಭೋಗಿ |
ಲಿಂಗಮಯಗಾ ಶಂಭುಶಂಕರ
ಲಿಂಗೆ ಲೋಕಾಂತರ ವರಗುರು
ಲಿಂಗೆ ತೇಜಃಪುಂಜಗರ್ಪಿಸಿ ಸೇವಿಸೋತ್ತಮವ ॥ ೪೬ ॥

ಯಾರು ಶಿವಲಿಂಗಾಂಗಸಂಯುತ
ಯಾರು ಶಿವಜೀವೈಕ್ಯ ತಾತ್ತ್ವಿಕ
ಯಾರು ಸರ್ವಾರ್ಪಣದಿ ನಿಷ್ಠರೊ ಸುಪ್ರಸಾದಿಗಳೋ |
ವೀರಶಿವಲಿಂಗಾಂಗಸಂಯುತ
ಯಾರುಶಿವನಿರ್ಮಾಲ್ಯ ಸೇವಿಸೆ
ಪೂತಯೋಗ್ಯರು ಬೇರೆಯಾರಿಗು ದೊರೆಯದಾಭಾಗ್ಯ ॥ ೪೭ ॥

ಶಿವನಿಗರ್ಪಿತದನ್ನವುಣ್ಣುವ
ಶಿವಸದಾಶ್ರಯ ಪಡೆದ ಭಕ್ತನು
ಶಿವನಿಗರ್ಪಿತವಾದುದೊಂದೊಂದಗಳುಮಾತ್ರದೊಳು |
ಭುವನವಿಜಯದೊಳಶ್ವಮೇಧವ
ದಿವಿಜರೊಲಿವಂತೈದೆಮಾಡಿದ
ಭುವನರಾಮನು ಪಡೆದ ಫಲವನು ಪಡೆವ ನಿರುತದೊಳು ॥ ೪೮ ॥

---

* ಜಾಬಾಲ ಶ್ರುತಿಯು ಈ ತತ್ತ್ವವನ್ನು ಪ್ರತಿಪಾದಿಸುತ್ತದೆ.

ಶಿವನಿಗರ್ಪಿತ ಶುದ್ಧನಿರ್ಮಾ
ಲ್ಯವನು ನಿರ್ಮಲವಂ ಪ್ರಸಾದಿಯೆ
ಸವಿಯೆ ಯೋಗ್ಯನು ಬೇರೆಯಾರಿಗುಮಿಲ್ಲವಾಭಾಗ್ಯ ।
ಶಿವನಲೆಂದೂ ಭಕ್ತಿಮಾಡದ
ಭವದಿ ಭೀಯುವ ಪಾಪಕರ್ಮಿಗೆ
ಭುವಿಯ ಜಂತುಗೆ ಶಿವನಿವೇದದೊಳಿಲ್ಲಮಧಿಕಾರ ॥ ೪೯ ॥

ಲಿಂಗಶಿವನೈವೇದ್ಯ ಸೇವಿಪ
ನಿಂಗೆ ದೊರೆಯುವ ತುಂಗಫಲಮೇ
ಜಂಗಮಾರ್ಪಿತ ಗುರುವಿಗರ್ಪಿತ ಸೇವಿಪಂಗುಂಟು ।
ಲಿಂಗ ವರಗುರುವನ್ನು ಪೂಜಿಸಿ
ಜಂಗಮಂ ಶಿವಯೋಗಿ ಪೂಜಿಸಿ
ಮಂಗಳಾತ್ಮರಿಗರ್ಪಿತಾನ್ನವನುಣ್ಣು ನಿತ್ಯದೊಳು* ॥ ೫೦ ॥

## (೧೩) ಸೋಪಾಧಿದಾನಸ್ಥಲಂ

ಲಿಂಗಭಕ್ತನು ಲಿಂಗ ವರಗುರು
ಜಂಗಮಾರ್ಯರಿಗರ್ಪಿತಾನ್ನವ
ಪಿಂಗದುಣ್ಣುವತೆರದೊಳವರಿಗೆ ದಾನಕೊಡಬೇಕು ।
ಲಿಂಗಸಂಯುತನೀವದಾನವು
ಮಂಗಳಾತ್ಮಕಮಾದ ಮೂರ್ತೆರ
ದಂಗ ಸೋಪಾಧಿಕವು ನಿರುಪಾಧಿಕವು ಸಹಜಮವು ॥ ೫೧ ॥

ಕಾಮಿ ಫಲದಾಪೇಕ್ಷೆಯೊಳು ನಿಜ
ಕಾಮತೃಪ್ತಿಯಬೇಡಿ ನೀಡಲು
ಕಾಮಿತಾರ್ಥವು ಫಲಿಸೆ ಸೋಪಾಧಿಕಮದಾದಾನ ।

---

*ಚತುರ್ವಿಧ ಸಾರಾಯಸ್ಥಲವೆಂಬ ಮತ್ತೊಂದು ಹೆಸರುಂಟು
೧ ಗುರು ೨ ಲಿಂಗ ೩ ಜಂಗಮ ೪ ಪ್ರಸಾದ

ಕಾಮಸಂಹರ ಶಿವನಭಕ್ತಗೆ
ನೇಮದೊಳು ವರಮೋಕ್ಷಕಾಮಿಗೆ
ಕಾಮಸೀಮಿತದಾನ ಸಲ್ಲದು ಲಿಂಗಮುಖದಲ್ಲಿ || ೫೨ ||

## (೧೪) ನಿರುಪಾಧಿದಾನಸ್ಥಲಂ

ಯಾವದಾನಂ ಪ್ರತಿಯನೆಳಸದೆ
ಕಾವ ಶಿವನಿಗೆ ಸಲ್ಲಲೆಂದೇ
ನೀವುದಂತದು ಕೀರ್ತಿವೆತ್ತಾದಾನ ನಿರುಪಾಧಿ |
ಯಾವಭಕ್ತನು ಲಿಂಗವರಗುರು
ದೇವಮತ್ತಾಜಂಗಮಾರ್ಯರಿ
ಗೋವಿ ಸಂಪ್ರೀತಾರ್ಥವೀಯುವನವನೆ ನಿಜದಾನಿ || ೫೩ ||

## (೧೫) ಸಹಜದಾನಸ್ಥಲಂ

ದಾನಕೊಡುವವ ದಾನಪಡೆವವ
ದಾನಮಾಡುವ ವಸ್ತುವಿವರೋಳ್
ಧ್ಯಾನಮೂಲದ ಶಿವನ ಭಾವಿಸುತೀಯೆ ಸಹಜಮದು |
ತಾನುಬೇರೆಯು ದಾನಬೇರೆಯು
ದಾನಪಡೆವವ ಬೇರೆಯೆಂಬುದ
ನೇನಕೇನಂ ರೂಢಮೂಲದಬಳಿಯಲೀಸ್ಥಲದಿ || ೫೪ ||

ಸಹಜದಾನವು ದಾನಮನಿತಕು
ಬಹಳಕುನ್ನತ, ಸರ್ವಕುತ್ತಮ
ವಿಹುದು | ದಾನಿಗೆ ಪರಮಜ್ಞಾನಾಂಜನವು ಭವಹರವು |
ಸಹಜದಾನವನೀಯೆ ಲಿಂಗಕೆ
ಮಹಿಮ ಗುರುಜಂಗಮಕೆ ನಿಜದೊಳು
ಬಹುಳಮಾಗುವುದಿಳೆಯತಣಿಪುದು ಶಾಂತಿ ನೀಡುವುದು || ೫೫ ||

ಹೊನ್ನು ಸಾಸಿರವನ್ನು ನೀಡಲು
ಚನ್ನಪಾತ್ರಾಪಾತ್ರವನ್ನರಿ
ತುನ್ನತೋನ್ನತದಾನಫಲಮಂ ಪಡೆವರಂಥಫಲ |
ತನ್ನಹಮ್ಮನ್ನಳಿಸಿದಾತನು
ಚೆನ್ನ ಪುಷ್ಪವ ಲಿಂಗಶಿವನಿಂ
ಗೊಮ್ಮಥರಿಸಲು ಪಡೆವ ನಿಶ್ಚಯ ಸಹಜದಾನದೊಳು ॥ ೫೬ ॥

ಶಿವನೆ ದಾನಕೆ ಪರಮಪಾತ್ರನು
ಶಿವನು ವಿದ್ಯಾನಿಧಿಯು ವರಗುರು
ಶಿವನಿಗಿತ್ತರೆ ಕೊಂಚದಾನವನಂತಫಲ ಪಡೆವೆ |
ಶಿವನನಂತಾನಂದಸಾಗರ
ನವನು ವರಶಿವಯೋಗಿ ಸಾಕ್ಷಾತ್
ಶಿವನೆಯಿರುತಿಹನವನಿಗಿತ್ತುದೆ ಪಾರಮಾರ್ಥಿಕವು ॥ ೫೭ ॥

ಶಿವನಯೋಗಿಯು ಪರಮಪಾತ್ರನು
ಭವವನೀಗುವ ದಾನಕರ್ಮದೊ
ಳವನಿಗಿಂತುತ್ತಮನೆಯಿಲ್ಲವು ಶಾಸ್ತ್ರಮತವಿಂತು |
ಭುವಿಯೊಳಭುಜಂ ಯಜ್ಞಮಾಚರಿ
ಸುವನು ಪಡೆಯುವ ಫಲವು ದೊರೆವುದು
ಶಿವನಯೋಗಿಗೆ ನಿತ್ಯತೃಪ್ತನಿಗಿತ್ತ ದಾನದೊಳು ॥ ೫೮ ॥

ತೃಪ್ತನಾಗಲು ಪರಮಯೋಗಿಯು
ತೃಪ್ತನಾಗುವ ಶಂಭುಶಂಕರ
ತೃಪ್ತಿಪಡೆವವು ವಿಶ್ವದೊಳು ಜಡಚೇತನಾತ್ಮಗಳು |
ತೃಪ್ತಿಪಡಿಸೈ ಸರ್ವಯತ್ನದೆ
ವಿತ್ತ ವಸನಂ ಪಾನಮಾದಿಗ
ಳಿತ್ತು ವರಶಿವಯೋಗಿಯನ್ನಾದರಿಸು ನಿತ್ಯದೊಳು ॥ ೫೯ ॥

ವರನಿರಾಮಯ ನಿರ್ಗುಣೋತ್ತಮ
ನಿರುಪಮಾನಂದಾತ್ಮ ಪರಶಿವ
ಗಿರದೆ ತನುಮನಧನವನೆಲ್ಲವನೀಯೆ ಸಹಜದೊಳು |
ಕರಿವರವನನು ಸಹಜದಾನಿಯು
ಪರಮಭಕ್ತನು ಸುಕೃತಿ ಸಾಕ್ಷಾತ್
ಪರಮಶಿವನಿಹನೆಂದು ಜಗದೊಳು ಚರಿಪಶಿವನವನೆ ॥ ೬೦ ॥

ಅಖಿಲ ಧರ್ಮಾಚಾರಪರನುಂ
ಸಕಲಪದದಿಂ ವಿಮುಖದಾತ್ಮನು
ನಿಖಿಲಲೋಕಾತೀತ ಪರಶಿವಭಕ್ತಿಸಂಯುತನು |
ಅಖಿಲತಂತ್ರದ ಶಾಸ್ತ್ರದೋಪರಿ
ಸಕಲಸಂಪದವನ್ನು ಸಹಜದೆ
ಸಕಲ ನಿಷ್ಕಲ ಲಿಂಗಕೀಯಲ್ಲವನೆ ಮಾಹೇಶ ॥ ೬೧ ॥

ಇಂತು ರೇಣುಕಗೀತೆ ಬೋಧಿಪು
ದೆಂತು ಭಕ್ತಸ್ಥಲದೆ ಭಕ್ತನು
ಶಂತಮಯ ಗುರುಲಿಂಗ ಜಂಗಮುವನ್ನು ಸೇವಿಸಲು |
ಇಂತು ಭಕ್ತಿಕ್ರಿಯೆಯನಾಚರಿ
ಪಿಂತು ದಾನತ್ರಯದೊಳೀಯುವ
ನಿಂತು ಮಾಹೇಶ್ವರನ ನಿಷ್ಠೆಯಪಡೆದು ಸಂಪೂರ್ಣ ॥ ೬೨ ॥

ಒಂಭತ್ತನೆಯ ಸಂಧಿ ಸಂಪೂರ್ಣಂ.

ಅಂತು ಸಂಧಿ ಹತ್ತಕ್ಕಂ ಪದನು ನಾನೂರಕ್ಕಂ
ಮಂಗಳಮಸ್ತು.

# ಹತ್ತನೆಯ ಸಂಧಿ

## ಮಾಹೇಶ್ವರ ಸ್ಥಲಂ

ಸೂಚನೆ:—ಎರಗಿಬೇಡಿದ ಮಾನಿಯೋತ್ತಮ
ಗೊರೆವರ್ಕೆ ಗುರುರೇಣುಕಾರ್ಯರು
ಪರಮ ಮಾಹೇಶ್ವರನ ಧರ್ಮಾಚರಣ ಲಕ್ಷಣವ ॥

ಗುರುವೆ ರೇಣುಕ ! ಶಿವಗಣೇಶ್ವರ !
ಪರಮಭಕ್ತಸ್ಥಲಿಯ ಧರ್ಮವ
ನರಿತೆ ನಿಮ್ಮಯ ಪರಮ ಬೋಧಾಮೃತವ ಸವಿಯಲ್ಕೆ ।
ಧರುಮ ಭೇದದಿ ಭಕ್ತಮಾಹೇ
ಶ್ವರನು ತಾನಹನೆಂಬ ಮರ್ಮವ
ನರುಹುತೆನ್ನಯ ಶಂಕೆಯಂಕಳೆ ಯೆರಗಿಬೇಡುವೆನು ॥ ೧ ॥

ಪರಮಭಕ್ತನು ಸಹಜದಾನದಿ
ನಿರತ ಹರಿಯಜ ಪದಕುಮೆಳಸದ
ಪರಮ ಶಿವತತ್ಪರನು ಮಾಹೇಶ್ವರನು ತಾನಹನು ॥
ವಿರತಭಾವದ ಶಿವನೊಳೊಲವಿನ
ಚಿರಮುದಚಿರವಿವೇಕಿ ಭಕ್ತನೆ
ಸರಸದೇರುವನಿರದೆ ಮಾಹೇಶ್ವರನ ತಾಣವನು ॥ ೨ ॥

ಪೂರ್ವದೊಳು ಶಿವನಿಂದ ಪೇಳ್ದುದ
ಪೂರ್ವಮಾದೀಸ್ಥಲ ಮಹೇಶ್ವರ
ತೋರ್ವವೀಸ್ಥಲದೊಳಗೆ* ನವವಿಧಮಾದ ಭೇದಗಳು ।

---

* ಮಹೇಶ್ವರ ಸ್ಥಲದಲ್ಲಿರುವ ನವವಿಧ ಪ್ರಭೇದಂಗಳು :—
೧) ಮಾಹೇಶ್ವರ ಪ್ರಶಂಸಾ ಸ್ಥಲ ೨) ಲಿಂಗನಿಷ್ಠಾ ಸ್ಥಲ ೩) ಪೂರ್ವಾಶ್ರಮ ನಿರಸನ ಸ್ಥಲ ೪) ಸರ್ವಾದ್ವೈತನಿರಸನ ಸ್ಥಲ ೫) ಆಹ್ವಾನನಿರಸನ ಸ್ಥಲ ೬) ಅಷ್ಟಮೂರ್ತಿನಿರಸನ ಸ್ಥಲ ೭) ಸರ್ವಗತ್ವನಿರಸನ ಸ್ಥಲ ೮) ಶಿವ ಜಗನ್ಮಯ ಸ್ಥಲ ೯) ಭಕ್ತದೇಹಿಕ ಲಿಂಗಸ್ಥಲ.

ರ್ವನೋರ್ವನ ನುತಿಸುವಸ್ಥಲಿ
ರ್ಕೋರ್ವ ನಿಷ್ಠೆಯನಿಷ್ಟಲಿಂಗದಿ
ಪೂರ್ವದಾಶ್ರಯ ನಿರಸನಮ್ಮದ್ವೈತ ನಿರಸನಿಯು ॥ ೩ ॥

ಯಾವನಾಹ್ವಾನವನೆ ಮಾಡನೊ
ಭೂಮಿಯಾದ್ಯಷ್ಟಾಂಗಮೂರ್ತಿಯ
ನಾವಥಾವಿಸನಂತೆ ಶಿವನೊಳು ಸರ್ವಗತ್ವವನು ।
ಯಾವನಿಷ್ಠೆಗೆ ಭಕ್ತದೇಹಿಕ
ಭಾವಲಿಂಗವು ಶಿವನಿವಾಸವೊ ಅವನೆ ಮಾಹೇಶ ॥ ೪ ॥

ಕೇಳು ಸಮತಾಭಾವದೊಳು ಮುನಿ
ಪೇಳ್ವ ಸಕ್ರಮದಿಂದಲೀಸ್ಥಲ
ದೋಳಡಂಗಿಹ ಭೇದಲಕ್ಷಣವನ್ನು ವಿವರದೊಳು ।
ಬಾಳು ಸಾರ್ಥಕಮಾಗೆ ಮುನಿವರ
ಕೋಳು ಪೋಗದಿರೆಂದುಮನ್ಯಕೆ
ತಾಳ್ಮೆಗೆಡದೊಲು ನಿಷ್ಠೆಯಿಂನಡೆ ಛಲದೊಳೀಸ್ಥಲದಿ ॥ ೫ ॥

## (೧೬) ಮಾಹೇಶ್ವರ ಪ್ರಶಂಸಾ ಸ್ಥಲಂ

ವಿಶ್ವಕಧಿಕಂ ರುದ್ರನೇಕಂ
ವಿಶ್ವದೆಲ್ಲರನುದ್ಧರಿಸುವನು
ಶಾಶ್ವತಂ ಸ್ಥಿರನೆಂದುನಂಬಿದೆ ಬುದ್ಧಮಾಹೇಶ ।
ವಿಶ್ವನಾಥಂಗಾಜ್ಞಪಾಲರು
ವಿಶ್ವಸೃಷ್ಟಿಸ್ಥಿತಿ ಲಯಾಧಿಪ
ರೀಶ್ವರಂಗಿವರನ್ನು ಹೋಲಿಸೆ ಸಹಿಸ ಮಾಹೇಶ ॥ ೬ ॥

ನಿರ್ಮಲಂ ಶಿವನಾದಿಮುಕ್ತನು
ಕರ್ಮಬದ್ಧರು ಜಗದೊಳೆಲ್ಲರು
ಶರ್ವನುಳಿದಿನ್ನಾರ್ಗು ಮುಕ್ತಿಯನೀಯಲಳವಿಲ್ಲ |
ನಿರ್ಮಲಂ ಶಿವ ಮಾಯಮೋಹಿತ
ಕರ್ಮಬದ್ಧರು ವಿಷ್ಣುವಾದ್ಯರು
ಮರ್ಮವಿದನರಿತಾತ ಮಾಹೇಶ್ವರನು ತಾನಿಹನು ॥ ೬ ॥

ಕ್ಷೀಣಕಾರಕ ಹರಿವಿರಂಚಿಯ
ತಾಣಕೆಳಸನು ತೃಣಸಮಾನದೆ
ಮಾಣದೊಃಪರಿ ನೆನೆವನೀಶನ ವೀರಮಾಹೇಶ |
ಜಾಣನೆಳಸನು ವಿಷಯಸುಖವ
ನ್ನಾಣವಾಮಲ ಮಾಯಿಕಾಮಲ
ಮೇಣು ಕಾರ್ಮಿಕಮಲಗಳಳಿಸಿಹ ನಿತ್ಯಶಿವಸುಖಿಯು ॥ ೮ ॥

ಪರರ ವಧುವಿಂಗಳುಪದಾತನು
ಪರರ ಸಿರಿಗೆಂದೆಳಸದಾತನು
ಪರಮಶಿವಪದ ಲಾಭಕಾರಕ ಕಾರ್ಯತತ್ಪರನು |
ಹರನನುತಿರತಿ ತೀರ್ಥಪಾನದೆ
ನಿರತ ನಿರ್ಮಲಚಿತ್ತ ಪರಶಿವ
ಹಿರಿಮೆಸಾರುವ ಸಪ್ರಮಾಣದ ಸಂಗ್ರಹಾಸಕ್ತ ॥ ೯ ॥

ಮೋಹ ಮದಮಾತ್ಸರ್ಯವರ್ಜಿತ
ದಹ್ಯಮಾದಾ ಪಂಚಭೌತಿಕ
ದೇಹದುಃಖನ್ ಕ್ರೋಧ ಕಾಮೋದ್ರೇಕ ವರ್ಜಿತನು |
ಸ್ನೇಹಪರನೈ ಜೀವಕೋಟಿಗೆ
ದೇಹ ದೇಗುಲಮಾಡಿ ಶಿವನಿಗೆ
ದೇಹದಂಡಿಪನೀಶಕಾರ್ಯವಿರೋಧಿ ನಿರಸನಕೆ ॥ ೧೦ ॥

ಯಾರ ಸಂಚರಮಾತ್ರದಿಂದಲೆ
ಮಾರಸಂಹರ ಭಕ್ತಿಯುಕ್ಕುವು
ದಾರುಮಂದಿರ ಲಿಂಗಕಾಪದ ಬಂಡಸಮಯದೊಳು |
ಹೋರಿಕಾದಲು ಸಿದ್ಧನಾಗುವ
ಘೋರಶಂಕೆಯ ಹರಣನೀಗಲು
ವೀರಮಾಹೇಶ್ವರನು ಪೂಜುವನಿಷ್ಟಲಿಂಗವನು ॥ ೧೧ ॥

## (೧೨) ಲಿಂಗನಿಷ್ಠಾಸ್ಥಲಂ

ಹಾರಿಪೋದರು ಹರಣಪಕ್ಷಿಯು
ತೋರಗೊಡನೈ ನಷ್ಟನಿಷ್ಠೆಗೆ
ವೀರಮಾಹೇಶ್ವರನು ತಾನೇ ಲಿಂಗನಿಷ್ಠಿತನು |
ಭೂರಿಭಾಗ್ಯವು ತೊರೆದುಹೋದರು
ವೀರಮರಣವಡೆದುರುಗೊಂಡರು
ಧೀರನಾತನು ಲಿಂಗಪೂಜಾವ್ರತವ ಬಿಡನೆಂದು ॥ ೧೨ ॥

ಒಲವು ನಲವಿಂ ಲಿಂಗಪೂಜೆಯ
ನಲಸದೋಪರಿ ನಿತ್ಯಗೈದೇ
ಜಲವನನ್ನವನರ್ಪಿಸುಣ್ಣುವ ಧೀರಹಸ್ತದೊಳು |
ನೆಲಸಿ ನಿಲುವಳು ಮೋಕ್ಷಲಕ್ಷ್ಮಿಯು
ಫಲವುಕಾಮದೆ ಕೀಳುಧರ್ಮವ
ನೊಲಿದು ಕೆಡದಿರು ಲಿಂಗಪೂಜಾಧರ್ಮ ಶಿವಧರ್ಮ ॥ ೧೩ ॥

ನಿತ್ಯಪೂಜಿಸಿ ಲಿಂಗಕರ್ಪಿಸಿ
ದುತ್ತಮನ್ನೋದಕದಿ ದೇಹವ
ನಿತ್ಯಪೋಷಿಸುವಾತ ಮಾಹೇಶ್ವರನು ತಾನಹನು |
ಚಿತ್ತವಾರದು ಸಗ್ಗದಾದಿಯ
ನಿತ್ಯವಸ್ತುವ ದೂರೀಕರಿಸುತ
ಸತ್ಯಶಿವನೊಳು ನೆಲೆಸಲಾತನು ಶಿವನೆಯಾಗುವನು ॥ ೧೪ ॥

ಯಾರಮನವದು ಲಿಂಗಲೀನವೊ
ಯಾರವಾಣಿಯು ಲಿಂಗನುತಿರತ
ಯಾರಹಸ್ತವು ಲಿಂಗಪೂಜಾಸಕ್ತನವ ರುದ್ರ ।
ಏರಿ ಸಗ್ಗದ ಸುಖಕೆ ಬಯಸುವ ।
ಭೂರಿಕರ್ಮಾಚರಣೆಯೇತಕೆ ?
ಸೇರಿ ನಿತ್ಯಾನಂದಶಿವಸುಖಿ ವೀರಮಾಹೇಶ ॥ ೧೫ ॥

ಅಂಗಸರ್ವಕು ಭೂತಿಭೂಷಿತ
ಲಿಂಗನಿಷ್ಠಾಪರಗೆ ಶಾಂತಗೆ
ಲಿಂಗದಂಗದಿ ರುದ್ರನಕ್ಷಿಯಧರಿಸಿ ಶೋಭಿಪಗೆ ।
ಲಿಂಗನಿಷ್ಠೆಗೆ ಸಗ್ಗಸುಖ ಚಣ
ಭಂಗುರವದೆಂದರಿತ ಧೀರಗೆ
ದಂಗುಬಡಿದಾ ಹರಿವಿರಂಚಿಗಳಿರದೆ ಪೊಗಳುವರು ॥ ೧೬ ॥

## (೧೮) ಪೂರ್ವಾಶ್ರಯನಿರಸನ ಸ್ಥಲಂ

ಧೀರಹೃದಯದ ಲಿಂಗನಿಷ್ಠರೆ ।
ವೀರಮಾಹೇಶ್ವರರೆ ! ಕೊರೆಯಿರಿ
ವೀರಲಿಂಗಾಚಾರಕಾಗದು ಪೂರ್ವದಾಶ್ರಯವು ।
ವೀರಮಾಹೇಶ್ವರನ ನಿಷ್ಠೆಗೆ
ಬೇರೆಜಾತಿಯ ಧರ್ಮನಡೆಗಳು
ಭಾರಿಯಡ್ಡಿಯು ತೋರೆಯೆ ಪೂರ್ವಾಶ್ರಯ ನಿರಾಸಕನು ॥ ೧೭ ॥

ವೀರಮಾಹೇಶ್ವರನು ಶಿವಸಂ
ಸ್ಕಾರಶುದ್ಧನು ! ಪರಮನಾತ್ಮನು !
ಬೇರೆಜಾತಿಯಧರ್ಮದಿಂದೇನವಗೆ ಫಲಮುಂಟು ? ।
ವೀರಶಿವಸಂಸ್ಕಾರಯೋಗದೊ
ಳೂರಿ ಲಿಂಗಾಚಾರ ನಿರತಗೆ
ತೋರದಭಿರುಚಿ ಬೇರೆಜಾತಿಯ ಧರ್ಮಮಾರ್ಗದೊಳು ॥ ೧೮ ॥

ಪ್ರಾಕೃತಪ್ರಾಕೃತದ ಧರ್ಮದೆ
ಲೋಕಮಾನವರೆಲ್ಲರಿಬ್ಬಗೆ
ಯೇಕ ಶಿವಸಂಸ್ಕಾರ ಶುದ್ಧರಶುದ್ಧ ಪ್ರಾಕೃತರು ।
ಲೋಕದೊಳಾಶ್ರಮದ ಧರ್ಮದೊ
ಳೇಕನಾಶಿವಪೇಳ್ದುದೊಂದೈ
ಲೋಕಕರ್ತಂಬ್ರಹ್ಮ ಪೇಳ್ದೀಧರ್ಮ ಮತ್ತೊಂದು ॥ ೧೯ ॥

ಶಿವನು ಪೇಳಿಹ ಧರ್ಮವಿಧಿಗಳಿ
ಶಿವನಭಕ್ತರ ವರ್ಣದಾಶ್ರಮ
ವವರ ನಡೆಯೊಳು ನಿಷ್ಠ 'ಶಿವಮತಿ' ಯೆಂದು ಕೀರ್ತಿತನು ॥
*ಕವಿಯು ಪೇಳಿಹ ವರ್ಣಧರ್ಮದ
ವಿವಿಧವಿಧಿಗಳು ಕರ್ಮಬದ್ಧಗೆ
ಭುವನ ಶಿವಸಂಸ್ಕಾರಹೀನರು ಮಾನವಾದ್ಯರಿಗೆ ॥ ೨೦ ॥

## (೧೯) ಸರ್ವಾದ್ವೈತ ನಿರಸನಸ್ಥಲಂ

ಪೂಜ್ಯ ಪೂಜಕ, ಲಿಂಗಜೀವರು
ಪೂಜೆಯೋಳೊಂದೆಂಬ ಭಾವನೆ
ಪೂಜ್ಯಕರ್ಮಕು ಲಿಂಗನಿಷ್ಠೆಗು ಭಾದಕಮದೆಂದು ।
ಪೂಜೆ ಜಪತಪ ಲಿಂಗನಿಷ್ಠೆಯೊ
ಳೋಜೆಯಿಂದಾಚರಿಪ ಹರಗುರು
ಪೂಜೆ ಸರ್ವಾದ್ವೈತನಿರಸನ ಭಾವಶುದ್ಧಿಯೊಳು ॥ ೨೧ ॥

ಪ್ರೇರಕಂಶಿವ ಜೀವಜಾಲಂ
ಪ್ರೇರ್ಯನೆಂಬುವ ಭೇದಭಾವದೆ
ಚಾರು ಶಿವಲಿಂಗಾರ್ಚನಂ ಗೈಯುವನೆ ಮಾಹೇಶ ।

---

* ಬ್ರಹ್ಮೋಕ್ತ ವರ್ಣಾಶ್ರಮ ಧರ್ಮಗಳು — ಕರ್ಮಚಾರ.
ಶಿವೋಕ್ತ ವರ್ಣಾಶ್ರಮ ಧರ್ಮ — (ವೀರಶೈವಾಚಾರ) ಶಿವಾಚಾರ.

ಪ್ರೇರ್ಯ ಜೀವಂ ಪ್ರೇರಕಂ ಶಿವ
ಬಾರದದ್ವೈತೀಯುಭಯರೊಳು
ವೀರಪೂಜಾ ಧರ್ಮನಿರತನೆ ವೀರಮಾಹೇಶ ॥ ೨೨ ॥

ಪಶುವು ಜೀವನು ಪತಿಯು ಶಿವನೈ
ಪಶುವಿಗಾಶ್ರಯದಾತನಾಶಿವ
ಪಶುವು ಪತಿಯೊಳ್ ಸ್ವಾಮಿಭೃತ್ಯರ ಭೇದಮಿಲ್ಲದಿರೆ ।
ಪಶುವು ಪತಿಯನ್ನೆಂತುಸೇವಿಪ
ಪಶುವುಜೀವಿಗೆ "ಪರದತತ್ತ್ವಂ"
ವಶವಹುದು ಗುರುಬೋಧೆಬಲದಿಂದರಿತ ಶಿವಮತಿಗೆ ॥ ೨೩ ॥

ಜೀವಶಿವರಲಿ ಭೇದಬುದ್ಧಿಯೆ
ದೇವಪೂಜೆಗೆ ತಾನುಕಾರಣ
ಶೈವವೀರರ ಲಿಂಗಪೂಜೆಯೊಳಿಲ್ಲಸದ್ವೈತ ।
ದೈವಶಿವನಂ ಪೂಜ್ಯಕಾಲದಿ
ಭಾವಿಸದಿರದ್ವೈತ; ಬಾಹ್ಯದಿ
ಜೀವಶಿವರೊಳಿರಲುಬೇಕದ್ವೈತ ಶಿವಮತಿಗೆ ॥ ೨೪ ॥

## (೨೦) ಆಹ್ವಾನ ನಿರಸನ ಸ್ಥಲಂ

ಲಿಂಗಪೂಜಾಪರನು ಶುದ್ಧ
ನ್ನಂಗಲಿಂಗಿಯು ತನ್ನಲಿಂಗವೆ
ಮಂಗಳಂ ಶಿವನೆನುವ ಸರ್ವಾದ್ವೈತ ನಿರಸನಿಯು ।
ಲಿಂಗಕಾಹ್ವಾನಿಸನು ಶಿವನಂ
ಲಿಂಗತಾನಿರೆ ಶಿವನು ನಿಜಶಿವ
ಲಿಂಗಹ್ವಾನಿಸಲು ಬೀಳ್ಕೊಡಲೇಕೆ ಶಿವನನ್ನು ? ॥ ೨೫ ॥

ಎಂದು ಗುರುವರ ಶಿವನಕಲೆಯಂ
ತಂದುಲಿಂಗದಿನಿರಿಸಿ ಧರಿಸಿದ
ನಂದಿನಿಂದಲು ಶಿವನು ನೆಲಸಿಹನಿಷ್ಟಲಿಂಗದೊಳು ।
ಹೊಂದಿ ಶಿವಸಂಸ್ಕಾರಶುದ್ಧಗೆ
ಬಂಧುಶಿವತಾಲಿಂಗವಾಗಿರ
ಲಂದೆ, ದೀಕ್ಷಾವಿಧಿಗೆ ಭಂಗವು ಲಿಂಗಕಾಹ್ವಾನ ॥ ೨೬ ॥

ಲಿಂಗಕಾಹ್ವಾನಸ್ಮೇಣು ಬೀಳ್ಕೊಡೆ
ಲಿಂಗಭಕ್ತನು ಮಾಡದಿರಬೇ
ಕಂಗಲಿಂಗವೆ ಶಿವನಸಂಗಮದಿಂತು ಸಿದ್ಧಾಂತ ।
ಲಿಂಗಸಂಗದೆ ನಿತ್ಯನಿಯಮದೆ
ಲಿಂಗವಂ ಶಿವನೆಂದೆ ಪೂಜುವ
ಲಿಂಗನಿಷ್ಠಾಪರನು "ಶಿವಮತಿ" ! ವೀರಮಾಹೇಶ ! ॥ ೨೭ ॥

## (೨೧) ಅಷ್ಟಮೂರ್ತಿ ನಿರಸನಸ್ಥಲಂ

ಶಂತ ಶಿವಲಿಂಗಾರ್ಚನಾರತ
ನೆಂತುಶಿವಜೀವೈಕ್ಯಬಯಸ
ನ್ನಂತೆ ಶಿವಗೂ ಶಿವನಕಾಯಕು ಕಾಣನದ್ವೈತ ।
ಶಂತಮಯಶಿವ ಪೃಥವಿಯಾದಿಯೊ
ಳಿಂತುಮೆಂಟುಶರೀರ ಪಡೆದಿಹ
ನೆಂತು ದೇಹಿಯು ದೇಹರೂಪಮದೊಂದೆ ತಾನಿಹದು ? ॥ ೨೮ ॥

ಕಾರ್ಯರೂಪವು ಪೃಥ್ವಿಯಾದಿಯು
ಕಾರ್ಯ ಪಾರ್ವತಿ ಕರ್ತೃ ಶಿವನೈ
ಕಾರ್ಯತಾನೇ ಕರ್ತಶಿವತಾನಾಗನೆಂದೆಂಡು ।
ಕಾರ್ಯಮಡಕೆಯು ಕರ್ತೃಗುಂಡನು
ಕಾರ್ಯಕರ್ತೃವಿಗಿಂತಭೇದವು
ತೋರಬಾರದು ಪೃಥ್ವಿ ಸಾಕ್ಷಾತ್ ಶಿವನು ತಾನಲ್ಲ ॥ ೨೯ ॥

*ಎಂಟುವಿಧದೀ ವಿಶ್ವತತ್ತ್ವವು
ನೆಂಟಶಿವನಿಗೆ ದೇಹಮಾಗಿರ
ಲುಂಟು ಶಿವನುಂ ಸರ್ವತತ್ತ್ವದಿಸ್ವಾಮಿತಾನಾಗಿ ।
ನೆಂಟನಿದ್ದಗಲಿದರೆ ನಶಿಪುದ
ದೆಂಟುತತ್ತ್ವದ ವಿಶ್ವಜೀವಿಯು
ನಂಟಶಿವತಾನಾತ್ಮರೂಪನು ಶಾಶ್ವತಂ ಸ್ಥಿರನು ॥ ೩೧ ॥

ಬಗೆಯೆ ಪೃಥವಿಯು ಜಡವಿನಾಶಕ
ಜಗದಪತಿತಾಸ್ಥಿರದಚೇತನ
ಜಗದಜೀವಿಯದಲ್ಪಮತಿಯೈ ಶಿವನು ಸರ್ವಜ್ಞ ।
ಜಗವು ಶಿವನಿಂ ಬೇರೆಯಿಲ್ಲವು
ಜಗಕೆ ಶಿವತಾನಾತ್ಮರೂಪನು
ಜಗಕು ಜಗಧೀಶಂಗು ಭೇದಾಭೇದಮಿಹುದಿಂತು ॥ ೩೧ ॥

ಪೃಥವಿಯಾದಷ್ಟಾಂಗತತ್ತ್ವದೆ
ಪೃಥವಿಪತಿಶಿವ ಬೆರೆಯದಿರುತಿಹ
ಪೃಥವಿಯಾದಷ್ಟಾಂಗತತ್ತ್ವಕೆ ಲಕ್ಷಣಾತೀತ ।
ಮಥಿತಮತಿಯೊಳು ಲಿಂಗಶಿವನನೆ
ಸತತನೆನೆಯುವ ವೀರಶಿವಮತಿ
ಪೃಥವಿಗಧಿಕಮ್ಮಷ್ಟಮೂರ್ತಿಯ ನಿರಸನಸ್ಥಲಿಯು ॥ ೩೨ ॥

---

* ೧ ನೆಲ ೨ ನೀರು ೩ ಬೆಂಕಿ ೪ ಗಾಳಿ ೫ ಆಕಾಶ ೬ ಸೂರ್ಯ ೭ ಚಂದ್ರ ೮ ಆತ್ಮ (ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ, ಆತ್ಮ ಸೂರ್ಯ ಚಂದ್ರ, ಆತ್ಮ)

## (೨೨) ಸರ್ವಗತ್ತ್ವ ನಿರಸನಸ್ಥಲಂ

ಶಿವನು ಲಿಂಗದಿಮಾತ್ರ ನೆಲಸಿಹ
ನವನ ಸರ್ವವ್ಯಾಪಿಯೆನದಿರು
ಶಿವನು ಸರ್ವವ್ಯಾಪಿಯಿರುತಿರೆ ಪೂಜುವೆಂತವನ ।
ಶಿವನು ಸಂಸ್ಥಿತನಿಷ್ಟಲಿಂಗದೊ
ಳವನ ಪೂಜಿಸು ಲಿಂಗಮಾತ್ರದೆ
ಶಿವನು ಸರ್ವವ್ಯಾಪಿಯಾಗಿಹನೆಂದು ತಿಳಿಯದಿರು ॥ ೩೩ ॥

ಶಿವನು ಸರ್ವವ್ಯಾಪಿಯಿದ್ದರು
ಮವನು ಚುಳುಕಾಗಿಹನು ಲಿಂಗದೊ
ಳವನ ಪೂಜುವುದಿಷ್ಟಲಿಂಗದೊಳಚಲನಿಷ್ಠೆಯೊಳು ।
ಶಿವನು ಶಮಿಯೊಳಗ್ನಿಯಂತಿಹ
ನವನಭಾವಿವುದಿಷ್ಟಲಿಂಗದೊ
ಳವನು ನೆಲಸಿಹನಲ್ಲೆ ತೇಜೋರೂಪ ಧಾರಣದೆ ॥ ೩೪ ॥

ಭುವನಮಾನ್ಯಾಧಾರಶಾಸ್ತ್ರವು
ಶಿವನು ಸರ್ವವ್ಯಾಪಿಯಾಗಿಹ
ನವನು ಚಿರಚೇತನನು ಶಾಶ್ವತನೆಂದು ಸಾರಿಹವು ।
ಶಿವನು ತನ್ನಾಧಾರಭೂತದ
ಶಿವಸುಲಿಂಗದೆ ಪೂಜೆಗೊಳ್ಳಲು
ಭುವಿಯ ಭಕ್ತೋದ್ಧಾರಗೈಯಲ್ಲದಿಕ ನೆಲಸಿಹನು ॥ ೩೫ ॥

ಇಂತು ನಿಜನಿಲವಿರಲು ಶಿವಮತಿ
ಚಿಂತೆಮಾಡನು ಸರ್ವಗತ್ತ್ವವ
ನಿಂತಮನದಿಂ ಸರ್ವಯತ್ನದೆ ಲಿಂಗಪೂಜುವನು ।
ಶಂತಮಯನನ್ನಿಷ್ಟಲಿಂಗದೆ
ಸಂತತಾರಾಧಿಸುವ ವೀರನು
ಶಾಂತಿಪೊಂದುವನಮರವಂದ್ಯನ ಶಿವನಕರುಣದೊಳು ॥ ೩೬ ॥

ಸರ್ವಗತ್ತ್ವ ನಿರಾಸಕನು ಶಿವ
ಸರ್ವಗತ್ತ್ವನು ಯೆಂಬ ಭಾವದೆ
ಸರ್ವರೊಳಗಂ ಪ್ರೀತಿಯಿಡ ತನ್ನಿಷ್ಟಲಿಂಗವಿನಃ ।
ಸರ್ವಮಂಗಳ ಲಿಂಗಮೂರ್ತಿಯ
ಸರ್ವದೇವರದೇವ ಶಿವನಂ
ಸರ್ವಯತ್ನದೆ ಕಾಲಕಾಲಕು ಮುದದಿ ಪೂಜುಸನು ॥ ೩೭ ॥

## (೨೩) ಶಿವಜಗನ್ಮಯ ಸ್ಥಲಂ

ಪೂಜೆವಿಧಿಯಿಂದೋಜೆಯಿಂದಲಿ
ಪೂಜ್ಯಭಕ್ತನು ಲಿಂಗಮಾತ್ರದಿ
ರಾಜರಾಜಿತಶಿವನು ಸಂಸ್ಥಿತನೆಂದು ಭಾವಿಪುದು ।
ಪೂಜೆನಂತರ ಸರ್ವರೊಳಗಿನ
ತೇಜರಾಜಿತ ಶಿವನಭಾವಿಸು
ತೋಜೆಯಿಂದಲಿ ಕಾಂಬುದೈ ಶಿವಸರ್ವಗತ್ತ್ವವನು ॥ ೩೮ ॥

ಮಣ್ಣಿನೊದಲ್ಸೈ ಮಡಕೆಕುಡಿಕೆಗೆ
ಮಣ್ಣಿನಿಂದವು ಬೇರೆಯಲ್ಲವು
ಕಣ್ಣುಮೂರರ ಶಿವನೊಳಾದೀಸ್ಥಿರವು ಚರವಂತೈ ।
ಮುನ್ನಶಿವನಿಂದಾದ ಜಗವಿದು
ಚೆನ್ನಶಿವನಿಂ ಬೇರೆಯಲ್ಲವು
ಫೇನಬುದ್ಬುದ ಸಿಂಧುವಿಂದೇನ್ ಬೇರೆಯಾಗಿಹುದೇ ? ॥ ೩೯ ॥

ನೂಲುನ್ಯೆದೀಪಟವು ಥೋತ್ರವು
ನೂಲಿನೊಳುಮಯಮಿರುವ ತೆರದೊಳು
ಫಾಲನೇತ್ರಂ ಪ್ರಕೃತಿಯೊಡಲಿನೊಳಡಗಿ ಕುಳಿತಿಹನು ।
ನೂಲಿನಿಂ ಪಟಕಟ್ಟಿ ಥೇರೆಯು
ಪಾಲಿಪುದು ಮಳೆಗಾಳಿ ಬಿಸಿಲಿಂ
ಶೂಲಿಶಕ್ತಿಯಸಂಗಮಾತ್ರದಿ ವಿಶ್ವರೂಪಾದ ॥ ೪೦ ॥

ಕೊಂಬೆ ಪತ್ರವನರಹಿ ಪಾದಪ
ಕಾಂಬುದೊಂದೇಮರದರೂಪದಿ
ಶಂಭುಪರಮನು ಪೃಥವಿಯಾದಿಯೊಳಂತೆ ರಾಜಿಪನು ।
ನಂಬುನಂಬೈ ಶಿವಜಗನ್ಮಯ
ನಂಬಿನೆನೆಯಲು ಶಿವನೆಯಾಗುವೆ
ಯಂಬುಧಿಯನೇ ನದಿಯು ಧಾವಿಸಿ ಸೇರ್ವತೆರದಂತೆ ॥ ೪೧ ॥

## (೨೪) ಭಕ್ತದೇಹಿಕ ಲಿಂಗಸ್ಥಲಂ

ಶಿವನು ಮಂದರ ಮೇಱು ಕೈಲಾ
ಸವನು ಕನಕಾಚಲವು ಹಿಮವಂ
ತವನು ಭಕ್ತರ ಹೃದಯಮಂದಿರವನ್ನು ಬೆಳಗುವನು ।
ಶಿವಜಗನ್ಮಯನಾತ್ಮನಾತ್ಮನು
ಭವನಿರಂಜನ ಪರಮನಿರೆಯುಂ
ಶಿವಜನಂಗಳ ಹೃದಯಮಂದಿರದಲ್ಲಿ ರಾಜಿಪನು ॥ ೪೨ ॥

ಶಿವನು ಸರ್ವಾತ್ಮದೊಳು ತೋರುವ
ನವನು ಸರ್ವರ ದೇಹವಾಡಿಪ
ನವನು ತನ್ನಯ ಭಕ್ತರಾತ್ಮವ ಬಿಡದೆ ಬೆಳಗುವನು ।
ಶಿವನು ನಿರುತಂ ಬೆಳಕ ಬೀರುವ
ನವನು ಲಿಂಗದ ಮಂಗಳಾಂಗನು
ಭವನು ಶಾಂತನು ಪಾಪದೂರನು ಶ್ರುತಿಯ ಮತವಿಂತು ॥ ೪೩ ॥

ಶುದ್ಧವೀರರ, ಯೋಗಿವಿರತರ
ಸಿದ್ಧಬುದ್ಧರ ಮಹಿಮಪುರುಷರ
ಶುದ್ಧಹೃದಯರ ಶಿವನಲಾಂಛನ ಧರಿಸಿದಂಥವರ ।
ಶುದ್ಧದಱಿವಿನ ಹರ್ಷಚಿತ್ತರ
ಬುದ್ಧಿಸಮತೆಯ ಪಂಡಿತಾರ್ಯರ
ಶುದ್ಧಮಾಹೇಶ್ವರರ ಹೃದಯಂ ಶಿವನ ನೆಲವನೆಯು ॥ ೪೪ ॥

ಇಷ್ಟಲಿಂಗದೆ ನಿಷ್ಠೆಯುಳ್ಳವ
ನಿಷ್ಟಲಿಂಗದೊಳಂತರಾತ್ಮನ
ಪುಷ್ಟಿಗಾಗಿಯೆ ಕಟ್ಟಿದ ಶಿವಪ್ರೇಮಶೂನ್ಯನಿವ ।
ಸೃಷ್ಟಿಸರ್ವದೊಳಿರುವ ಶಿವನ
ನ್ನಿಷ್ಟಲಿಂಗದೆ ಕಂಡು ಸುಖಸಂ
ತುಷ್ಟ ಮಾಹೇಶ್ವರನು ಪಡೆಯುವ ಸುಪ್ರಸಾದವನು ॥ ೪೫ ॥

ಇಂತು ರೇಣುಕಗೀತೆ ಬೋಧಿಪು
ದೆಂತು ಭಕ್ತನೆ ವರಮಹೇಶ್ವರ
ನೆಂತು ಮಾಹೇಶ್ವರನು ನಿಷ್ಠಾಸುಪ್ರಸಾದಿತನೋ ।
ಇಂತು ಬೋಧೆಯನಾಂತು ಮುದದಿಂ
ದಂತೆಯಾಚರಿಸುವನೆ ಶಿವಮತಿ
ಶಂತಮಯ ಶಿವಲಿಂಗರತಿಸುಖಿ ಸಂಧಿಸಂಪೂರ್ಣಂ ॥ ೪೬ ॥

ಹತ್ತನೆಯ ಸಂಧಿ ಸಂಪೂರ್ಣಂ.

ಅಂತು ಸಂಧಿ ಹನ್ನೊಂದಕ್ಕಂ ಪದನು ನಾನೂರನಲವತ್ತಾರಕ್ಕಂ

ಮಂಗಳಮಸ್ತು.

# ಹನ್ನೊಂದನೆಯ ಸಂಧಿ

## ಪ್ರಸಾದಿಸ್ಥಲ ನಿರೂಪಣಂ

ಸೂಚನೆ:—ಸುಪ್ರಸಾದಿಸ್ಥಲದ ಮಹಿಮೆಯ
ಸುಪ್ರಸನ್ನತೆಯಿಂದ ಪೇಳ್ದರು
ಸುಪ್ರಸನ್ನರು ರೇಣುಕಾರ್ಯರು ಮೌನಿಪುಂಗವಗೆ ॥

ಪರಮಗುರುವೇ! ರೇಣುಕಾರ್ಯನೆ!
ಕರುಣದೊರೆಪ್ಪೈ ಲಿಂಗನಿಷ್ಠಾ
ಪರನು ಪೂಜಾನಿರತ ಮಾಹೇಶ್ವರನುಮೆಂಬುದನು ।
ಗುರುವೆ! ಮಾಹೇಶ್ವರನು ಧರ್ಮಾ
ಚರಣೆಯೊಳು ತಾ ಸುಪ್ರಸಾದಿಯೊ
ಳಿರುವ ಮಹಿಮಾಮಹಿತಿಗೇರುವ ಪರಿಯ ಪೇಳಯ್ಯ ॥ ೧ ॥

ಲಿಂಗನಿಷ್ಠಾಭಾವದೊಳು ತ
ಷ್ಣಂಗಪಾಪವನಿಳುಹಿದಾತನು
ಮಂಗಳಾತಃಕರಣಯೋಗದೆ *ಸುಪ್ರಸಾದಿತನು ।
ಲಿಂಗ ವರಗುರು ಜಂಗಮಾರ್ಯರ
ಲಿಂಗಿಭಕ್ತರ ಶಿವನ ಶರಣರ
ತುಂಗಮಹಿಮೆಯನರಿತುನಡೆವ ಶ್ರೀಪ್ರಸಾದದೊಳು ॥ ೨ ॥

---

* ಪ್ರಸಾದಿಸ್ಥಲಾಂತರ್ಗತ ಪ್ರಭೇದಗಳು:—(೧) ಪ್ರಸಾದಿಸ್ಥಲಂ (೨) ಗುರುಮಹಾತ್ಮ್ಯಸ್ಥಲಂ (೩) ಲಿಂಗಮಹಾತ್ಮ್ಯಸ್ಥಲಂ (೪) ಜಂಗಮ ಭಕ್ತಮಹಾತ್ಮ್ಯಸ್ಥಲಂ (೫) ಭಕ್ತಮಹಾತ್ಮ್ಯಸ್ಥಲಂ (೬) ಶರಣಮಹಾತ್ಮ್ಯಸ್ಥಲಂ (೭) ಪ್ರಸಾದಮಹಾತ್ಮ್ಯಸ್ಥಲಂ

ಕೇಳು ಮುನಿವರ ಸಮತೆಯೊಳು ನೀ
ನೇಳುವಿಧದೋಳಿರುವ ಭೇದವ
ಪೇಳ್ವೆ ಸಕ್ರಮದಿಂದಲೀಸ್ಥಲವಾಂತ ಮಹಿಮೆಯನು ।
ಬಾಳು ಸಾರ್ಥಕಮಾಗೆ ವಿನಯದಿ
ತಾಳ್ಮೆಗೆಡದೊಳು ನಡೆಯಬೇಕೈ
ಪೇಳ್ದಪರಿಯೊಳೆ ಶಿವನು ಕರುಣಿಸೆ ಸುಪ್ರಸಾದವನು ॥ ೩ ॥

## (೨೫) ಪ್ರಸಾದಿ ಸ್ಥಲಂ

ಧರ್ಮಕಾಶ್ರಯನಮರಕರುಣೆಯೆ
ನಿರ್ಮಲಾಂತಃಕರಣ ಚಿಹ್ನವು
ನಿರ್ಮಲಂ ಶಿವಲಿಂಗಪೂಜೆಯೊಳೈದೆ ಸಿದ್ಧಿಪುದು ।
ಕೂರ್ಮೆಯೊಳು ಶಿವಲಿಂಗ ಪೂಜಿಸಿ
ನಿರ್ಮಲಾಂತಃಕರಣದರ್ಪಿಪ
ಮರ್ಮವರಿತರೆ ದತ್ತವನಿತುಂ ಶ್ರೀಪ್ರಸಾದವದು ॥ ೪ ॥

ಯಾರ ಹೃದಯವು ಸುಪ್ರಸನ್ನವೊ
ಯಾರದರಿವಿಗೆ ಶಿವನುಗುರಿ ಮ
ತ್ತಾರುಸೇವಿಪ ಶಿವನಿವೇದನ ಸುಪ್ರಸಾದಿಯವ ।
ಧೀರಹೃದಯದ ವೀರಶೈವನು
ವೀರಮಾಹೇಶ್ವರನು ನಿರುತವು
ತೋರಿಯುಣ್ಣುವ ಲಿಂಗಶಿವನಿಗೆ ಸುಪ್ರಸಾದವನು ॥ ೫ ॥

ಮುನ್ನ ಶಾಸ್ತ್ರಗಳೆಲ್ಲ ಸಾರಿಹ
ವನ್ನಶುದ್ಧಿಯೆ ಸರ್ವಜೀವಿಗ
ಳನ್ನು ತಿದ್ದುತ ಶುದ್ಧಹೃದಯರ ಮಾಡೆ ಕಾರಣವು ।
ನಿನ್ನಹೃದಯದ ಸುಪ್ರಸನ್ನತೆ
ಯನ್ನು ಪಡೆಯಲು ಶಿವನನರಿಯಲು
ಚೆನ್ನಲಿಂಗಾರ್ಪಿತವ ಸೇವಿಸು ಸುಪ್ರಸಾದವನು ॥ ೬ ॥

ಇಷ್ಟಲಿಂಗಿಯು ಕಾಲಕಾಲ
ಕೃಷ್ಟದೆಡೆಯಂ ಶಿವನಿಗರ್ಪಿಸಿ
ತುಷ್ಟಿ ಪುಷ್ಟಿಯ ಪಡೆದು ನಿರ್ಮಲಹೃದಯನಾಗುವನು |
ಇಷ್ಟದಾರ್ಜಿತ ಭೋಗವಸ್ತುವ
ನಿಷ್ಟಲಿಂಗಕ್ಕರ್ಪಿಸುಣ್ಣುವ
ನಿಷ್ಟಸಿದ್ಧಿಯು ಚಿತ್ತಶುದ್ಧಿಯೊಳ್ಪೆದೆ ಸಿದ್ಧಿಪುದು ॥ ೭ ॥

ಶಿವನು ಭವಭಯರೋಗ ವೈದ್ಯನು
ಭುವನಪಾವನ ಲಿಂಗವಾಸನು
ಶಿವನಿಗರ್ಪಿತ ಸುಪ್ರಸಾದವುಯೆಂದೆ ಕೀರ್ತಿತವು |
ಶಿವನ ಕರುಣಾ ಶ್ರೀಪ್ರಸಾದವ
ಸವಿಯೆ ಭಕ್ತನು ನಿತ್ಯನಿಯಮದೆ
ಕವಿದ ಭವರೋಗಗಳ ನಾಶಕೆ ವರರಸಾಯನವು ॥ ೮ ॥

ಚಿತ್ತಶುದ್ಧಿ ಕ್ಷೇಮಕಾರಣ
ಮತ್ತೆ ತಾಪತ್ರಯವನಣಗಿಸಿ
ಸತ್ತುಹುಟ್ಟುವ ಸುತ್ತಿನಿಂದುದ್ಧರಿಪ ಭೇಷಜವು |
ಮುತ್ತಿಸುತ್ತಿಹ ಮೋಹನಾಶಕ
ಕುತ್ತು ಕೃತ್ರಿಮದೋಷ ಪರಿಹರ
ಸತ್ತ್ವಚಿತ್ತಾನಂದದಾಯಕವಾತ್ಮಚೇತನವು ॥ ೯ ॥

ಸಿದ್ಧಿಸಂಪದ ವಿರತಿಮೂಲವು
ಶುದ್ಧದರಿವಿನ ಬೆಳಸು ಮತ್ತದು
ಶುದ್ಧಕರ್ಮಿಗೆ ಸುಲಭ, ದುರ್ಲಭ ಪಾಪಚಿತ್ತನಿಗೆ |
ವೃದ್ಧಬೊಮ್ಮನು ವಿಷ್ಣುವಾದ್ಯರು
ಶುದ್ಧತಾಪಸ ಮೌನಿವರ್ಯರು
ಸಿದ್ಧಿಕಾಂಕ್ಷಿಗಳಿಂದ ಸೇವಿತ ಶಿವನಿವೇದನವು ॥ ೧೦ ॥

## (೨೬) ಗುರುಮಹಾತ್ಮ್ಯ ಸ್ಥಲಂ

ಎಂತು ಯೋಗ್ಯವೊ ಶಿವನಿವೇದನ
ವಂತೆ ವರಗುರು ಕರುಣತೀರ್ಥವು
ಶಂತಮಯ ಶಿವಯೋಗಿಯುಂಡುಳಿದಾಪ್ರಸಾದಾನ್ನ ।
ಕಂತುಹರ ಶಿವಭಕ್ತಮೇಣು ಮ
ಹಂತ ಮಾಹೇಶ್ವರರು ಸಿದ್ಧರು
ಶಂತಮಯ ಶಿವಸುಪ್ರಸಾದವ್ರತರಿಗತಿಯೋಗ್ಯ ॥ ೧೧ ॥

ಗುರುವು ಲೋಕದ ಕಲ್ಪತರುವೈ
ಗುರುವು ಸಾಕ್ಷಾತ್ ಶಿವನು ವರಗುರು
ಕರುಣೆಕಾರಣ ಸಕಲಸಾಧನೆ ಸಿದ್ಧಿವಡೆಯಲ್ಕೆ ।
ಗುರುವಿಗಧಿಕರು ಜಗದೊಳಿಲ್ಲವು
ಗುರುವು ಹೊರತಿನ್ನಾವತತ್ತ್ವವು
ಹಿರಿಯದಿಲ್ಲವು ಶ್ರುತಿಯು ಜಗಕಿದೆ ಸಾರಿಪೇಳಿಹುದು ॥ ೧೨ ॥

ನಿಷ್ಕಲಶೈವ ನಿರ್ಗುಣಪ್ರಭು
ಸಕಲನಾಗುತ ಗುರುವುರೂಪದಿ
ಕಕ್ಕುಲತೆಯಿಂ ಜ್ಞಾನಸಾಗರಮೇರೆವರಿದಿಹನು ।
ನಿಷ್ಕಲಶೈವ ಗುರುವುರೂಪದಿ
ಸಕಲಭಕ್ತರನುದ್ಧರಿಸುವನು
ನಿಖಿಲಲೋಕದಿ ಗುರುವಿಗಧಿಕಂ ಯಿಲ್ಲವೇಯಿಲ್ಲ ॥ ೧೩ ॥

ಶಿವನೆ ಗುರುವೈ ! ಗುರುವೆ ಶಿವನೈ !
ಶಿವನು ನಿಷ್ಕಲ; ಗುರುವೆ ಸಕಲನು
ಶಿವಗು ಗುರುವಿಗು ಭೇದಬುದ್ಧಿಯ ಮಾಡದಿರಬೇಕು ।
ಶಿವನನರ್ಚಿಪ ಭಕ್ತಿಕಾಮನು
ಭುವಿಯ ಗುರುವಂ ಜ್ಞಾನ ಕರುಣಿಸೆ
ಶಿವನೆ ಬಂದಿಹನೆಂದು ಭಾವಿಸಿ ಸೇವಿಸಲುಬೇಕು ॥ ೧೪ ॥

ಗುರುವಿಗಾಚಾರ್ಯಂಗೆ ಶುದ್ಧಗೆ
ಪರಮದರಿವನ್ನೊರೆವ ವರಶಂ
ಕರನರೂಪದ ಕಲ್ಪತರುವಿಗೆ ಜಗದಿ ಪೂಜ್ಯಂಗೆ ।
ಕರದಪಾದದ ರೂಪಸಾದೃಶ
ದಿರವನಿತರರಕೂಡೆ ಹೋಲಿಸಿ
ಜರಿದು ಮಾತನ್ನಾಡಬಾರದು ಸುಕೃತ ಲಯವಹುದು ॥ ೧೫ ॥

ಯಾವನಾರ್ಯನ ಪೂಜೆಮಾಡುವ
ನಾವನಾರ್ಯನ ಸೇವೆಗೈಯುವ
ನಾವಬಯಸುವ ಭೋಗಮೋಕ್ಷದ ಸಿದ್ಧಿಸಂಪದವಂ
ದೈವ ಶಿವನವತಾರವೇ ಗುರು
ಭಾವ ಶುದ್ಧಿಯ ಸೇವೆಯಿಂ ಪಡೆ
ಕಾವ ಗುರುವಿನ ವರದಕೃಪೆಯಂ ಶ್ರೇಯಸಿದ್ಧಿಯನು ॥ ೧೬ ॥

ಕರುಣಗುರುವಿನ ಭಕ್ತಿಮಾಡದೆ
ಪರಮಶಿವನೊಳು ಭಕ್ತಿಪುಟ್ಟದು
ಪರಮಶಿವನೊಳ್ಪುಟ್ಟೆ ಭಕ್ತಿಯು ಮುಕ್ತಿಲಭಿಸುವುದು ।
ಗುರುವಿನಾಶ್ರಯ ಪಡೆದ ನರನಿಗೆ
ಹರನೊಳುದಿಪುದು ಪರಮಭಕ್ತಿಯು
ಪರಮಭಕ್ತಿಯೆ ಪರಮಫಲವೈ ಶ್ರುತಿಯಮತವಿಂತು ॥ ೧೭ ॥

## (೨೭) ಲಿಂಗಮಹಾತ್ಮ್ಯಸ್ಥಲಂ

ಸದ್ಗುರು ಶ್ರೀ ಸಂಗಯೋಗದೆ
ಸದ್ಗುಣವು ಶಿವಜ್ಞಾನ ಬೆಳಗಲು
ಸಿದ್ಧಲಿಂಗವದುತ್ತಮೋತ್ತಮವೆಂದು ದೃಢವಹುದು ।
ಶುದ್ಧಹೃದಯಾನಂದ ಬೆಳಗಿನ
ಸದ್ಗುರುವಿನಿಂ ಬೋಧಚೇತಸ
ಶುದ್ಧಚಿನ್ಮಯ ಲಿಂಗಮಹಿಮೆಯ ತಿಳಿಯಲಳವಹುದು ॥ ೧೮ ॥

ಯಾವಲಿಂಗವು ಪರಮಶುದ್ಧಮ
ದಾವಲಿಂಗಂ ಬ್ರಹ್ಮವಾಚ್ಯವೊ
ಯಾವಲಿಂಗದ ಮಹಿಮೆ ಶಿವಚಿನ್ಮಾತ್ರಬೋಧಕವೊ ।
ಯಾವಲಿಂಗಂ ಪ್ರಭುಸಿರಂಕುಶ
ಯಾವಲಿಂಗವು ಲೋಕಕಾರಣ
ಯಾವಲಿಂಗವು ವೇದಕಾರಣ ತತ್ತ್ವಪೂರಣವೊ ॥ ೧೯ ॥

ಯಾವಲಿಂಗವು ಭವದ ತಾರಕ
ಯಾವಲಿಂಗಂ ಜ್ಯೋತಿರೂಪವೊ
ಯಾವಲಿಂಗವು ದೇಶಕಾಲಾತೀತಪದಯುತವೋ ।
ಯಾವಲಿಂಗವು ಯೋಗಿಯಾತ್ಮಮ
ದಾವಲಿಂಗಂ ಜ್ಞಾನರೂಪವೊ
ಕಾವ ಗುರುವಿನ ಕೃಪೆಯ ಪಡೆಯದೆ ತಿಳಿಯಲೆಂತಳವು ॥ ೨೦ ॥

ಪೂರ್ವದೊಳು ಶಿವಲಿಂಗರೂಪವು
ಪೂರ್ವತೇಜವದಡಗೆ ಬೆಳಗಲು
ತೋರ್ವಬೆಳಗಿನೊಳಾದಿಯಾಂತ್ಯದ ನೆಲೆಯನರಿಯಲ್ಕೆ ।
ಪಾರ್ವ ಹಂಸನರೂಪ ಬೊಮ್ಮನು
ತೋರ್ವಕೋರೆಯ ವರವರಾಹನು
ಪಾರ್ವತಿಗೆಯುತ ಸೋತುಸೊರಗಿದ ಚರಿತೆನಿರುತಮಿದೆ ॥ ೨೧ ॥

ಅಭವಲಿಂಗಮದಪರಂಭೇದವು
ಶುಭಗಸುಂದರ ಶುದ್ಧಶಂಭುವು
ವಿಭುದ ಬೊಮ್ಮನು ವಿಷ್ಣುವಾದ್ಯರಿಗರಿಯಲಸದಳವು ।
ಅಭಯಹಸ್ತವನಿಟ್ಟು ಗುರುವರ
ನಭವಭಕ್ತನ ಹರಸಿ ಬೋಧಿಸ
ಲಭವನರಿಯಲು ಶಕ್ಯಮಪ್ಪುದು । ತತ್ತ್ವಸೂಕ್ಷ್ಮಮಿದು ॥ ೨೨ ॥

ಬಹಳಮಾತಿಂದೇನು ಲಿಂಗವು
ಬಹು ಪುರಾತನ ಶಿವನರೂಪವು
ಬಹಳಜನ್ಮದಿ ಶುದ್ಧನಾಗಿಹ ಯೋಗಿಯಾತ್ಮಸಖ |
ಮಹಿಮಲಿಂಗವನರಿತಯೋಗಿಯು
ದಹಿಸಿಬಿಡುವನು ಪಾಶಬಂಧನ
ಮಹವು ಮಹವನ್ನಂಗಲಿಂಗದೆ ಬೆರೆದು ಬಯಲಾಗೆ || ೨೩ ||

ಪರಮಶಕ್ತಿಯು ಪೀಠ ಲಿಂಗವ
ದರಿಯೆ ಸಾಕ್ಷಾತ್ ಶಿವನರೂಪವು
ಪರಮಶಿವೆ ಶಿವರೂಪಲಿಂಗವು ವಿಶ್ವಕಾಧಾರ |
ಸ್ಥಿರವದಚಿರದ ವಿಶ್ವದಂತರ
ದಿರುವ ಶಿವನಿಂ ವಿಶ್ವದಿರವೈ
ಪರಮನಿಲ್ಲದೆ ವಿಶ್ವವಿಲ್ಲವು ! ಲಿಂಗವಿಶ್ವಾತ್ಮ || ೨೪ ||

ಹರಿಯು ಮೊದಲಾಗೆಲ್ಲದೇವತೆ
ಪರಮಚಿಂತನಗೈದ ಮುನಿಗಳು
ಪರಮಲಿಂಗಾರ್ಚನದ ಫಲದಿಂದುಚಿತಪದವಿಯನು |
ಸರಸದೇರುತಲಲ್ಲಿ ಮೆರೆವರು
ಪರಮಶಿವತಾ ವಿಶ್ವಕಧಿಕನು
ಪರಮಪೂಜ್ಯನು ಶಿವನಿಗಿಲ್ಲವು ಬೇರೆಸಾದೃಶವು || ೨೫ ||

## (೨೮) ಜಂಗಮ ಮಹಾತ್ಮ್ಯ ಸ್ಥಲಂ

ಗುರುವು ಶಿಷ್ಯನು ಲಿಂಗಸಂಗದೊ
ಳೊರೆದ ಮಹಿಮಾ ಮಹತಿಗಿಂತಲು
ಸರುವ ಜಗದಾಕಾಶ ಚಿದ್ಘನಜ್ಞಾನಿ ಜಂಗಮನು |
ಸರುವ ಮಹಿಮೆಯೊಳಧಿಕನಿರುವನು
ಪರಮಶಿವನಂ ಸ್ವಸ್ವರೂಪದೊ
ಳಿರಿತ ಜಂಗಮಮೂರ್ತಿ ಪೂಜ್ಯನು ಕೀರ್ತಿಭಾಜನನು || ೨೬ ||

ಶಿವನಯೋಗದೊಳೆಲ್ಲ ಜಗವ
ನ್ನವನು ಮಹದಾಕಾಶದೀಕ್ಷಿಪ
ನವನಸುಟ್ಟವು ಮೂರುಮಲಗಳು ವಿಮಲಶಿವಯೋಗಿ |
ಭವದ ಕತ್ತಲೆ ಹರಿದುಪೋಪುದು
ಶಿವನಯೋಗಿಯ ಪರಮತೇಜದೊ
ಳವನಿ ಪುಳಕಿತಗೊಂಡು ನಲಿವಳು ಯೋಗಿಸಂಗದೊಳು ॥ ೨೭ ॥

ಕಾಮಸುಟ್ಟು ಕ್ರೋಧಬಿಟ್ಟವ
ನಾಮಶೇಷದಿ ಮೋಹವಳಿದವ
ಹೇಮಭೂಮಿಯು ಮಣ್ಣುಮಣಿಯೊನ್ನೊಂದೆತೆರದೊಳಗೆ |
ಕಾಣಬಲ್ಲವ ಸಾಧುಶೀಲನು
ಭೂಮಿಯೊಳು ಶಿವನಂತೆ ಚರಿಪನು
ಕಾಮಿತಾರ್ಥವನೀಯುತಿರುವನು ಮಹಿಮ ಶಿವಯೋಗಿ ॥ ೨೮ ॥

ಶತ್ರುವಿಲ್ಲವು ಶಿವನಯೋಗಿಗೆ
ಮಿತ್ರರೆಲ್ಲರು ಶಿವನಸೃಷ್ಟಿಲಿ
ಸುತ್ತಲೆತ್ತಲು ಶಿವನ ಸಾಕ್ಷಾತ್ಕರಿಪ ಜಗದೊಳಗೆ |
ಚಿತ್ತವಾತನದಾಶೆರಹಿತವು
ಮತ್ತೆ ನಿರಹಂಕಾರಯುಕ್ತವು
ಸುತ್ತಿಸುಳಿಯುವನಿಳೆಯಬೆಳಗುವ ಶಿವನಕಳೆಯೊಳಗೆ ॥ ೨೯ ॥

ಶಿವನನಂತವ ಜಗದಿ ದುರ್ಲಭ
ಶಿವನ ಚಿಂತಿಪನಂತೆ ದುರ್ಲಭ
ಶಿವನೆ ತಾನೆಂದರಿತ ಯೋಗಿಯು ಮತ್ತು ದುರ್ಲಭನು |
ಶಿವನನರಿಯುತ್ತವನ ಚಿಂತಿಪ
ನವನೆ ತಾನೆಂಬರಿವು ಮೂಡಿದ
ಭುವನಪಾವನ ಚರಿತನಿರುತಿಹ ಶಿವನರೂಪದೊಳು ॥ ೩೦ ॥

ಚರಣರೇಣುವು ಬಿದ್ದ ಸದನವು
ಪರಮಪಾವನ ಪುಣ್ಯಕೇಂದ್ರವು
ದರುಶನಾರ್ಥಿಯ ಸರ್ವಸಿದ್ಧಿಯು ಸಿದ್ಧಿಪೊಂದುವವು।
ವಿರತಯೋಗಿ ಸ್ಪರ್ಶಮಾತ್ರದಿ
ಸರುವಪಾಪವು ಶಮನವಾಗ್ಪುವು
ಪರಮಮುಕ್ತಿಯು ಸಾಧ್ಯವಹುದೈ ಪೂಜೆಮಾತ್ರದೊಳು ॥ ೩೧ ॥

ಶಿವರಹಸ್ಯದ ವೇದಿಬೋಧಿಯ
ಶಿವಸುಖಾನಂದಾನುಭಾವಿಯ
ಶಿವನಯೋಗಿಯ ಪುಣ್ಯಸಂಗವು ದೊರೆತಮಾತ್ರದೊಳು।
ಶಿವನ ಕರುಣಾದೃಷ್ಟಿ ಬೀಳ್ಪುದು
ಭವವು ತಾಪವು ಶಾಂತಮಾಗ್ಪುವು
ಜವದಿ ಪುಣ್ಯವು ಶುದ್ಧಸಿದ್ಧಿಯು ನೆಲಸಿ ನಿಲ್ಲುವವು ॥ ೩೨ ॥

## (೨೪) ಭಕ್ತಮಾಹಾತ್ಮ್ಯಸ್ಥಲಂ

ಗುರುವು ಲಿಂಗವು ಜಂಗಮಾರ್ಯರೊ
ಳೊರೆದ ಮಹಿಮೆಯಬಲದಿ ಸಿದ್ಧಿಪು
ದಿರದೆ ಭಕ್ತನಮಹಿಮೆ ಕೇಳ್ವೈ ಪೇಳ್ವೆ ವಿವರದೊಳು।
ಪರಮಶಿವನಂ ಮಾತುಮನದಿಂ
ಕರುಮತಪದಿಂ ಭಜಿಸಿ ಪೂಜಿಸಿ
ನಿರುತ ನೆನೆಯುವ ಚಾರುಕೀರ್ತಿಯು ಪರಮಶಿವಭಕ್ತ ॥ ೩೩ ॥

ಭವಭಯದ ತಾರಕವು ಭಕ್ತಿಯು
ಶಿವನೊಳುದಿಪುದು ಜಗದಿ ದುರ್ಲಭ
ಶಿವನಭಕ್ತಿಯ ಮೂರ್ತಿಮತ್ತೆಯೆ ಭಕ್ತನೆಂದೆನಿಪ।
ಶಿವನಭಕ್ತಿಯ ಮಾಡದಾ ನರ
ನವನು ತಿಳಿದರೆ ವೇದಶಾಸ್ತ್ರವ
ನವನುಗೈದರೆ ಯಜ್ಞತಪಗಳ ಮುಕ್ತನೆಂತಹನು ॥ ೩೪ ॥

ಭಕುತರೊಳು ಶಿವಭಕ್ತಿಹೀನನ
ಸುಕೃತಮೆಲ್ಲಂ ವ್ಯರ್ಥಮಾಗ್ವವು
ಕುಕೃತಿಯುಂ ಶಿವಭಕ್ತನಾದರೆ ಶುದ್ಧನಾಗುವನು ।
ಸುಕೃತದುಷ್ಕೃತಮಲ್ಲ ಮಾನವು
ಭಕುತಿಮಾನವು ! ಶಿವನಲಿಟ್ಟರೆ
ಭಕುತಿ ಮುಕ್ತಿಯ ಪಡೆವೆ ನಿಶ್ಚಯ ಶಾಸ್ತ್ರಮತವಿಂತು ॥ ೩೫ ॥

ಯಾಗವಾಚರಿಸೆಂತು ದಕ್ಷನು
ಭೋಗಿಸಿದ ದುಷ್ಫಲವನೆಂಬುದು
ತೂಗಿನೋಡಲು ವಿಧಿತಮಾಗ್ವುದು ದಕ್ಷಶಿಕ್ಷಣದಿ ।
ಹೇಗೆ ಚಂಡನು ತಂದೆಶಿರವನು
ತಾಗಿಕಡಿದುಂ ಶಿವನಭಕ್ತಿಯ
ದಾಗಿಪಡೆದನು ಶುದ್ಧಗತಿಯನು ಶಿವನಕರುಣದೊಳು ॥ ೩೬ ॥

ಶಿವನೊಳಾಶ್ರಯ ಪಡೆದ ಭಕ್ತನು
ಭುವಿಯೊಳಾಚರಿಪನಿಪು ಕರ್ಮದೊ
ಳವನು ಬೆರೆಯನು ಪಾಪಪುಣ್ಯದ ಭೀತಿಯಿಲ್ಲವಗೆ ।
ದಿವದೊಳೋಡುವ ಸೂರ್ಯತೇಜಗೆ
ಕವಿವ ಕತ್ತಲೆ ಭಯವು ತಾನಿರ
ದವನಿಯೊಳು ಶಿವಭಕ್ತಗಿಲ್ಲವು ಬಂಧಭವಭಯವು ॥ ೩೭ ॥

ಶುದ್ಧಭಕ್ತಿಯು ಶಿವನೊಳಾಗಲು
ಬಿದ್ದು ಕಳೆವುದು ಭವಸುಬಂಧನ
ಶುದ್ಧಭಕ್ತನ ನಡೆಯ ತಡೆಯಲು ಕರ್ಮವಸಮರ್ಥ ।
ಮುದ್ದದಾನೆಯು ಜಲದಕೇಳಿಯೊ
ಳಿದ್ದ ತಾವರೆದಂಟುಜಾಲವು
ಬದ್ಧಗೈಯಲು ಸಾಧ್ಯವಿಲ್ಲವದೆಂತೊಮಂತಯ್ಯ ॥ ೩೮ ॥

ಯಾರು ಶುದ್ಧರೊ ನಿಯಮಶೀಲರೊ
ಯಾರು ಸರ್ವಾರ್ಪಣ ಸಮರ್ಥರೊ
ವೀರಶಿವಜೀವೈಕ್ಯದರಿವೊಳು ರಮಿಸಬಲ್ಲವರೋ ।
ಧೀರ ಗುರುವನು ಲಿಂಗಜಂಗಮ
ನಾರು ಪೂಜೆಯಮಾಡಿ ಪಡೆವರೊ
ವೀರಶಿವ ಜೀವೈಕ್ಯ ವಿದ್ಯಾಗಣಪರವರಲ್ತೆ ? ॥ ೩೯ ॥

## (೩೦) ಶರಣಮಾಹಾತ್ಮ್ಯ ಸ್ಥಲಂ

ಗುರುವು ಲಿಂಗವು ಜಂಗಮಾರ್ಯನ
ವರದರೂಪವತಳೆದ ಶಿವನೇ
ಸರುವ ರಕ್ಷಕನೆಂದು ಮೊರೆಹೊಕ್ಕಾತ ಶಿವಶರಣ ।
ಗುರುವು ಜಂಗಮಲಿಂಗರಾದಿಯ
ಪರಮ ಮಹತಿಯನರಿತು ಶಿವನಿಗೆ
ಶರಣುಬಂದವ ಜಗದಿ ಕೀರ್ತಿತನಾದ ಶಿವಶರಣ ॥ ೪೦ ॥

ಬ್ರಹ್ಮವಿಷ್ಣುಗಳಾದಿ ವೈಭವ
ಕೊಮ್ಮೆಯಾದರುಮೆಳಸಿಬಯಸದೆ
ನೆಮ್ಮಿಶಿವನಂ ಸರ್ವಸಂಗತ್ಯಾಗಿ ಶಿವಶರಣ ।
ಬ್ರಹ್ಮ ಮೊದಲಾಗೆಲ್ಲ ದೈವಂ
ಬ್ರಹ್ಮಸೃಷ್ಟಿಯು ಸರ್ವಜೀವರು
ಸಮ್ಮುದದಿ ಶಿವನಿಂದ ರಕ್ಷಿತರೆಂದು ಶರಣಾರ್ಥಿ ॥ ೪೧ ॥

ಭೋಗಿಭೂಷಣ ಶಿವನ ಶರಣನು
ರಾಗಭೋಗದ ಬಂಧವಿರಹಿತ
ನಾಗಿ ಬೊಮ್ಮಾದಿಗಳ ವೈಭವಕೆಳಸನೆಂದೆಂದು ।
ತ್ಯಾಗಿ ಶರಣಾಗತನು ಶಿವನಂ
ಬಾಗಿಬೇಡುವ ಮೋಕ್ಷಪದವ
ನ್ನಾಗಮೋಕ್ತದ ವಿಧಿಗೆ ತಪ್ಪನು ಪರಮಶರಣಾರ್ಥಿ ॥ ೪೨ ॥

ಮಾತುಮನದಿಂ ಕಾಯಕರ್ಮದೊ
ಳೋತು ಶಿವನಿಗೆ ಶರಣುಬಂದವ
ನಾತಗೇತಕೆ ಯಜ್ಞಕರ್ಮವು? ದೇವತರ್ಪಣವು? ।
ಜ್ಯೋತಿಷ್ಟೋಮಾದಿಗಳ ಯಜ್ಞವು
ಸೇತುವಾಗಿದೆ ಸಗ್ಗಭೋಗಕೆ
ತಾತಶಿವನೊಳು ಶರಣನಾದಗೆ ಮೋಕ್ಷ ಚಿರಸುಖವು ॥ ೪೩ ॥

ಶರಣರಕ್ಷಕ ಕಲ್ಪವೃಕ್ಷನ
ಮರೆಯಹೊಕ್ಕವ ಪಾಪಿಯಾದರು
ಪರಮಪದವನು ಪಡೆದು ಸುಖಿಸುವನೆಂಬುದಿದು ಸತ್ಯ ।
ಪರಮಶಿವನಿಗೆ ಶರಣನಾಗಿಹ
ಶರಣಜನ್ಮವೆ ಜನ್ಮ ಶಿವನೊಳು
ಶರಣುಬಾರದ ನರನಜನ್ಮವು ಮರಣಸಂಗಿನಿಯು ॥ ೪೪ ॥

ಮನುಜಜನ್ಮದಿ ಜನನ ದುರ್ಲಭ
ಜನನನಂತರ ನರನು ಸತತಂ
ಮನಸಿಜಾರಿಯನರಿಯಲೆತ್ನಿಪುದಿನ್ನು ದುರ್ಲಭವು ।
ಮನುಜ, ಶಿವನನ್ನರಿತು ನಡೆದರೆ
ಜನನಮರಣದ ಸುತ್ತು ನಿಲ್ಪುದು
ಮನುಜ. ಮಹವನ್ನರಿಯದಿರ್ದೊಡೆ ಜನ್ಮವೇ ವ್ಯರ್ಥ ॥ ೪೫ ॥

ಹರನು ಕರುಣಾಕರನು ಶಾಂತನು
ಶರಣ ಶಿವಭಕ್ತರನು ತನ್ನೊಳು
ಬೆರಸಿ ಬೇರಿರದಂತೆಮಾಡುವ ಪರಮ ವಾರಿಧಿಯು
ಹರನೊಳಂತರ್ಮುಖಿಯ ಕುಲವೇ
ಪರಮಶುದ್ಧವು ನಿತ್ಯನಿರ್ಮಲ
ಹರನ ಶರಣನ ಸರಳಜೀವನ ಸುಫಲ ಸುಮಭರಿತ ॥ ೪೬ ॥

## (೩೧) ಪ್ರಸಾದ ಮಹಾತ್ಮ್ಯ ಸ್ಥಲಂ

ಪರಮಗುರು ನಿಜಲಿಂಗ ಜಂಗಮ
ಶರಣ ಶಿವಭಕ್ತರೊಳು ಮಹಿಮೆಯ
ನರಿಯೆ ಗುರುವಿನ ಸುಪ್ರಸಾದವೆ ಮೂಲಕಾರಣವು ।
ಶರಣನೀಸ್ಥಲ ಸುಪ್ರಸಾದದ
ಹಿರಿಯಮಹಿಮೆಯ ಸಾರಿಪೇಳ್ವುದು
ಶರಣ ಪಡೆವನು ತುಷ್ಟಿಪುಷ್ಟಿಯನೀಪ್ರಸಾದದೊಳು ॥ ೪೭ ॥

ನಿರುತ ಪರಶಿವಲಿಂಗನಿಷ್ಠಗೆ
ಗುರುವು ಜಂಗಮ ಪೂಜೆಗೊಂಬಗೆ
ಪರಮಶುದ್ಧಗೆ ಶರಣಗುಂ ಶಿವಕರುಣೆ ದೊರಕುವುದು ।
ಕರುಣೆ ಶಿವನಿಂ ದೊರೆಯೆ ದುರ್ಲಭ
ವಿರುವುದೆಂದೇ ಕೀರ್ತಿವೆತ್ತಿದೆ
ದೊರೆಯಲಾಕ್ಷಣ ಘೋರ ಭವಭಯ ದುಃಖಪರಿಹರವು ॥ ೪೮ ॥

ಶೈವಯಜ್ಞವು ; ತಪದಸಿದ್ಧಿಯ
ಶಿವ ಪಂಚಾಕ್ಷರಿಯು ಮಂತ್ರವು
ಸದ್ಗುರುಬೋಧೆ ಪರತರ ಶಿವನ ಕರುಣದೊಳು ।
ಭಾವಶುದ್ಧಿಯು ಭಕ್ತಿಲಭಿಸಲು
ದೇವದೇವನ ಕೃಪೆಯು ಕಾರಣ
ಯಾವ ಸಿದ್ಧಿಯು ಸಿದ್ಧಿಯಾಗದು ಶಿವನು ಕರುಣಿಸದೆ ॥ ೪೯ ॥

ಭವಕೆ ಬಂದಾ ಪಿಂಡವಾಗಲಿ
ಭವದಿ ಜನಿಸುತ್ತಿರುವನಾಗಲಿ
ಭುವಿಯೊಳುದಿಸಿಹನಂತ್ಯಜೋತ್ತಮನಾವನಿರುತಿರಲಿ ।
ಶಿವನ ಕರುಣಾ ಸುಪ್ರಸಾದವು
ಭವದ ಸಂಕಲೆಯಿಂದ್ಮವೋಚಿಪು
ದವಗೆ ಲಭ್ಯವು ಶಿವನೊಳೈಕ್ಯನ ಚಿರದ ಮುಕ್ತಿಪದ ॥ ೫೦ ॥

ಬ್ರಹ್ಮರಾದಿಯ ನಿತ್ಯಸಿದ್ಧರು
ತಮ್ಮತಮ್ಮಯ ತಾಣಗೌರವ
ದಿನ್ನು ಮೆರೆಯುತ್ತಿಹರು ಪರಶಿವನಮರಕರುಣೆಯೊಳು ।
ಸಮ್ಮುದದಿ ಶಿವಕರುಣೆದೋರಲ್
ಬ್ರಹ್ಮಸೃಷ್ಟಿಗಳೆಲ್ಲ ಶಿವಮಯ
ವೊಮ್ಮೆ ಶಂಭುವು ಕರುಣದೋರಲು ನಿತ್ಯವಾನಂದ ॥ ೫೧ ॥

ಭವದೆ ಚಕ್ರಭ್ರಮಣಬಂಧಿತ
ಭುವನಜೀವಿಯ ಜನನ ಮರಣಕೆ
ವಿವಿಧಕರ್ಮವು ಮೂಲಕಾರಣಮದರ ಕೋಟಲೆಯು ।
ಶಿವನ ಕರುಣಾ ಶ್ರೀಪ್ರಸಾದವ
ನವನು ಸವಿದರೆ ಮಾತ್ರನಷ್ಟವು
ಶಿವಹಸಾದವು ಭವದಿ ರೋಗಕೆ ಪರಮಭೇಷಜವು ॥ ೫೨ ॥

ಎಲ್ಲಬಲ್ಲವನಭವ ಕರುಣೆಸೆ
ಸ್ವಲ್ಪಹೋಲುವಮಧಿಕಮೆನ್ನುವು
ದಿಲ್ಲಮಿಲ್ಲವು ಮೂರುಲೋಕದೊಳದುವೆ ಸರ್ವೋಚ್ಚ
ಬಲ್ಲಯೋಗಿಯು ಶಿವನಕರುಣೆಯೊ
ಳೆಲ್ಲಲೋಕವು ಶಿವನರೂಪವು
ಸಲ್ಲಲಿತಮಿಹುದೆಂದು ಕಾಣಲ್ ಪ್ರಾಣಲಿಂಗಯುತ ॥ ೫೩ ॥

ಶಿವನಕರುಣಾ ಶ್ರೀಪ್ರಸಾದವ
ಸವಿವಯೋಗಿಯನಖಿಲಲೋಕವು
ಶಿವನರೂಪಮದೆಂದುಕಾಣುವ ಭಾವಿತಾತ್ಮನನು ।
ಅವನಿಯೊಳು ನಿಜಕರ್ಮಮುಕ್ತನ
ಶಿವನಭಾವಿಪನಾತ್ಮಸುಖಿಯ
ನ್ನಿವನು ಲಿಂಗಪ್ರಾಣಿಯೆನ್ನುತ ಪೊಗಳಿ ಕೀರ್ತಿಪರು ॥ ೫೪ ॥

ಇಂತು ರೇಣುಕಗೀತೆ ಬೋಧಿಪು
ದಿಂತುಕರುಣಾ ಶ್ರೀಪ್ರಸಾದಿಯ
ಹಂತಕೇರ್ದವ ಗುರುವುಲಿಂಗವು ಜಂಗಮಾರ್ಯರೊಳು |
ಅಂತೆ ಭಕ್ತರು ಶರಣರೊಳಗಮ
ನಂತಮಹಿಮೆಯನರಿವ ವಿಶ್ವವಿ
ದಿಂತು ಶಿವಮಯವೆಂದು ಭಾವಿಪನೆಂಬ ಮರ್ಮವನು ॥ ೫೫ ॥

ಹನ್ನೊಂದನೆಯ ಸಂಧಿ ಸಂಪೂರ್ಣಂ

ಅಂತು ಸಂಧಿ ಹನ್ನೆರಡಕ್ಕಂ ಪದನ್ಯೆದುನೂರೊಂದಕ್ಕಂ
ಮಂಗಳಮಸ್ತು.

# ಹನ್ನೆರಡನೆಯ ಸಂಧಿ

## ಪ್ರಾಣಲಿಂಗಿ ಸ್ಥಲ

ಸೂಚನೆ:—ರೇಣುಕಾರ್ಯರಗಸ್ತ್ಯಮೌನಿಗೆ |
॥ ॥ ಮಾಣದೋದಿಸಿ ಬೋಧಿಸಿದರ್ಕೆ
ಪ್ರಾಣಲಿಂಗಿಸ್ಥಲದೊಳಿರುತಿಹ ಯೋಗಿಲಕ್ಷಣವ ॥

ಪರಮಗುರುವರ ನಿಮ್ಮ ಕರುಣೆಯೊ
ಳರಿತೆನ್ನೈ ಶಿವಭಕ್ತನೆಂತಹ
ಪರಮಮಾಹೇಶ್ವರನು ಪರಶಿವ ಸುಪ್ರಸಾದಿತನು |
ಕರುಣ ಬೋಧಿಸು ಶಿವನ ಕರುಣವು
ದೊರೆಯಲಾಶಿವ ಸುಪ್ರಸಾದಿಯು
ಪರಮರತಿಯೊಳ್ ಪ್ರಾಣಲಿಂಗಿಯದಾಗ್ವ ಮರ್ಮವನು ॥ ೧ ॥

ಭಕ್ತಮಾಹೇಶ್ವರರು ವಿಧಿಯೋ
ಳುಕ್ತಕರುಣಾ ಶ್ರೀಪ್ರಸಾದಾ
ಸಕ್ತ ಕರ್ಮಾಚರಣಶೀಲರು ಕರ್ಮಯೋಗಿಗಳು |
ಮುಕ್ತಕಂಠದೊಳೊರೆವೆನಾಲಿಸು
ಶಕ್ತನಾದೀಕರ್ಮಯೋಗಿಯು
ಮುಕ್ತಿಗಾಗಿಯೆ ಜ್ಞಾನಯೋಗದೆ ನಡೆವ ರೀತಿಯನು ॥ ೨ ॥

ಎಂತು ಮೊದಲಿನ ಮೂರರೊಳಗುಂ
ನಿಂತು ಗೈದೆಯೊ ನೋಂಪಿಕರ್ಮವ
ನಂತೆ ಮುಂದಿನ ಮೂರುಹಂತದೆ ಜ್ಞಾನರತನಾಗು |
ಇಂತು ಕರ್ಮಜ್ಞಾನಮಾರ್ಗದಿ
ಶಂತಮಯ ಶಿವಲಿಂಗಪೂಜಿಸು
ತಂತೆಭಾವಿಸು ಪಡೆಯೆ ಪೂರ್ಣಜ್ಞಾನ ಶಿವಯೋಗ ॥ ೩ ॥

ಶಿವನಲಿಂಗವು ಜ್ಞಾನರೂಪವು
ಶಿವೆಯರೂಪಂ ಪ್ರಾಣಪೀಠವು
ಭುವನಪಾವನರೂಪ ಶುದ್ಧಬ್ರಹ್ಮ ಶಿವಲಿಂಗ ।
ಶಿವಸುಲಿಂಗದ ನೋಟಕೂಟದೆ
ಶಿವನನಂತರಿತಂತರಾತ್ಮನು
ಸವಿಯೆಬೆಳಗಂ "ಪ್ರಾಣಲಿಂಗಿಯು"ಯೆಂದು ಕೀರ್ತಿಪತು ॥ ೪ ॥

ಪ್ರಾಣಲಿಂಗಸ್ಥಲವು ಪಂಚ
ಪ್ರಾಣಸರಿಸಮ ಪಂಚವಿಧವೈ*
ಮೇಣು ವರಶಿವಯೋಗಿಯಂತರಪೂಜಕಾಂಗಮಿದು ।
ಪ್ರಾಣಲಿಂಗಸ್ಥಲಮದೊಂದೈ
ಪ್ರಾಣಲಿಂಗಾರ್ಜನವದೆರಡೈ
ಮೇಣು ಪರಶಿವಯೋಗನಿದ್ರಾಸ್ಥಲವು ಮೂರಾಯ್ತು ॥ ೫ ॥

ಲಿಂಗನಿಜದಸ್ಥಲವು ನಾಲ್ಕಾ
ಯ್ತಂಗಲಿಂಗಸ್ಥಲವದೈದೈ
ಲಿಂಗವರಿಯಲ್ ಪ್ರಾಣಪಣತೆಯು ಜ್ಞಾನದೀಪಿಗೆಯು ।
ಅಂಗಲಿಂಗಂ ಪ್ರಾಣಲಿಂಗಿಯು
ಸಂಗಮೇಶನ ಹೃದಯಮಂದಿರ
ರಂಗಮಂಟಪದಿರಿಸಿ ಪೂಜುವ ಯೋಗಿಯೋತ್ತಮನು ॥ ೬ ॥

## (೩೨) ಪ್ರಾಣಲಿಂಗಿ ಸ್ಥಲಂ

ಪ್ರಾಣವಾಯುವಪಾನವಾಯುವು
ಮಾಣದೋಪರಿ ಸಂಘಟಿಸಲಾ
ಪ್ರಾಣಯಾಮದೆ ನಾಭಿಕಂದಜ್ಯೋತಿ ರಾಜಿಪುದು ।

* ಪಂಚವಿಧ ಸ್ಥಲಂಗಳು:—ಪ್ರಾಣಲಿಂಗಸ್ಥಲಂ; ಪ್ರಾಣಲಿಂಗಾರ್ಚನಸ್ಥಲಂ; ಶಿವಯೋಗಸಮಾಧಿಸ್ಥಲಂ; ಅಂಗಲಿಂಗಸ್ಥಲಂಗಳಿವು ಐದು ವಿಧ.

ಪ್ರಾಣಯಾಮದ ಸೂರ್ಯಚಂದ್ರರ
ಜಾಣನಾಡಿಯ ಕಿಡಿಯಬೆಳಗೇ
ಪ್ರಾಣಲಿಂಗಂ ಜ್ಯೋತಿರೂಪನು ಪ್ರಾಣಲಿಂಗಯ್ಯ ॥ ೭ ॥

ಪರಮ ಪರಶಿವನಾತ್ಮಬೆಳಗೇ
ಪರಮಯೋಗಜ್ಞಾನಿಯಂತರ
ದಿರುತ ಹೊಳೆವುದು ದೀಪಶಿಖೆಯೋಳ್ ಪ್ರಾಣಲಿಂಗದೊಳು ।
ಪರಮಗುರುವಿನ ಸೇವೆಮಾಡದ
ಕರುಣೆಪಡೆಯದ ನರಗಶುದ್ಧಗೆ
ದೊರೆಯನೆಂದೂ ಜ್ಯೋತಿರೂಪಂ ಪ್ರಾಣಲಿಂಗಯ್ಯ ॥ ೮ ॥

ಪರಮಲಿಂಗಂ ಜ್ಯೋತಿರೂಪವು
ಪರಮಪಾವನ ಶಿವನರೂಪವು
ಹರನಕರುಣಾ ಶ್ರೀಪ್ರಸಾದಿತನಾತ್ಮಲಿಂಗಮದು ।
ತೊರೆದು ಹೃದಯಾಂತರದ ಲಿಂಗವ
ಬರಿದೆ ಬಾಹ್ಯದೆ ಗುಡಿಯಲಿಂಗವ
ನರಿಯದರ್ಚನೆಗೈವನಂ ಮೂಢಾತ್ಮನೆನ್ನುವರು ॥ ೯ ॥

ಅಡಕಿತಾರನು ಪೂಜನಂಗಳ
ಗುಡಿಯಲಿಂಗವ ಪೂಜೆಮಾಡನು
ಮೃಡನ ಶರಣಂ ಯೋಗಿರತನ್ನೈ ಪ್ರಾಣಲಿಂಗದೊಳು ।
ಜಡಕು ಜೀವಿಗು ಬೇಡಿನೀಜಗ
ತೊಡಕಿಗಾಸ್ಪದಮೆಂದು ಮಾಯೆಯ
ಕಡೆಗೆ ನೋಡನ್ ಪ್ರಾಣಲಿಂಗಿಯು ಚಿನ್ಮಯಾನಂದ ॥ ೧೦ ॥

ನಾನು ನಾನಾಗಿರುವೆನೆಂಬಾ
ಪ್ರಾಣಮಯಿಯ್ಯೈ ಶಕ್ತಿಶಿವೆತಾ
ಕಾಣನಾತಂ ಸ್ಫೂರ್ತಿದಾತಂ ಪ್ರಾಣಲಿಂಗಯ್ಯ ।

ಪ್ರಾಣಶಕ್ತಿ ! ಸ್ಫೂರ್ತಿಶಿವನೈ
ಮಾಣದಿರುತಿಹ ಸಾಮರಸ್ಯವ
ಜಾಣನರಿವನು ಭಾವನಾತ್ಮಂ ಪ್ರಾಣಲಿಂಗದೊಳು ॥ ೧೧ ॥

## (೩೩) ಪ್ರಾಣಲಿಂಗಾರ್ಚನಸ್ಥಲಂ

ಅಂತರಂಗಸ್ಥಿತನ ಶಿವನನು
ಚಿಂತನಾತ್ಮನ ಭಾವಪುಷ್ಪದೊ
ಳಂತರಂಗದಿ ಪೂಜುವಾತಂ ಪ್ರಾಣಲಿಂಗಾರ್ಚನ್ ।
ಶಂತಮಯನಂ ಪರಮಪೂಜ್ಯನ
ನಂತರಂಗಜ್ಯೋತಿರೂಪನ
ನಂತರಂಗದಿ ಭಾವಿಪಾತಂ ಪ್ರಾಣಲಿಂಗಾರ್ಚನ್ ॥ ೧೨ ॥

ಈಡಪಿಂಗಳನಾಡಿ ಪವನದೆ
ಗಾಡಿವೆತ್ತಿಹನವುರಿನಂಬರ
ಮಾಡರಂಧ್ರದಿ ಸೋಸುವಮೃತಪೇಚ ಶೀತಲಿಯು ।
ಬೇಡಿಬಿಗಿದೊಂಭತ್ತುಬಾಗಿಲ
ನಾಡಮಂದಿರ ಹೃದಯಬೆಳಗಲು
ಕೂಡೆಮಂಗಲಲಿಂಗಮೂರ್ತಿಯ ಭಾವದಿಂ ಪೂಜು ॥ ೧೩ ॥

ಕಮೆಯು ಗಂಗಾಮಡಿ ವಿವೇಕವು
ದಮೆ ವಿರಾಗವು ಕುಸುಮಮಾಲಿಕೆ
ಸಮತೆ ಗಂಧವದಂಭದಕ್ಷತೆ ಸತ್ಯದಾಭರಣ ।
ಭ್ರಮನಿರಸನ ಜ್ಞಾನದೀಪವು
ಶಮೆಯು ನಿಷ್ಠೆಯು ಧೂಪ ನಿಜನಿ
ರ್ಮಮವು ನೈವೇದ್ಯವಿರೆ ಘಂಟಾನಾದ ನಿಡುಮೌನ ॥ ೧೪ ॥

ಭ್ರಾಂತಿಯಿಲ್ಲದ ನಡೆಯೆ ಜಗದೊಳು
ಶಾಂತ ಶಿವನಿಗೆ ಸುಪ್ರದಕ್ಷಿಣೆ
ಶಾಂತಿದಾಯಕ ವಿಷಯದರ್ಪಣ ಮಧುರ ತಾಂಬೂಲ ।
ಶಾಂತನಂತರಲಿಂಗನಿಷ್ಠೆಯೆ
ನೋಂತ ನೋಂಪಿಯೆ ನಮನ ಶಿವಯೋ
ಗಾಂತರಂಗದ ಪೂಜೆಯಿಂತೈ ಪ್ರಾಣಲಿಂಗಕ್ಕೆ ॥ ೧೫ ॥

## (೩೪) ಶಿವಯೋಗಸಮಾಧಿ ಸ್ಥಲಂ

ಅಂತರಂಗದೊಳಾತ್ಮಲಿಂಗವ
ನಿಂತುಪೂಜುವ ಯೋಗಸಾಧನೆ
ಶಂತ ಶಿವಜೀವೈಕ್ಯಸಂಪದ ಸಿದ್ಧಿದಾಯಕವು ।
ಇಂತು ಶಿವಜೀವೈಕ್ಯಸಾಧಕ
ನಂತರಾತ್ಮಾರಾಮ ಶಿವನನ
ನಂತಭಾಸುರ ಲಿಂಗಯೋಗ ಸಮಾಧಿಯೆನ್ನಿಪುದು ॥ ೧೬ ॥

ಸರುವತತ್ತ್ವಾತೀತ ಪದಯುತ
ಮಿರುವ ಭಾಸುರ ಮಹಿಮಲಿಂಗವು
ಪರಮಶಿವನಿರೆ ಸಚ್ಚಿದಾನಂದಾತ್ಮಬೋಧಕವು ।
ವಿರತಯೋಗಿ ಪ್ರಾಣಲಿಂಗವ
ನಿರದೆ ನೆನೆಯುವನಾದಕಾರಣ
ಪರಮಮಂಗಲ ಶಿವನ ಯೋಗಸಮಾಧಿಗೇರುವನು ॥ ೧೭ ॥

ವಾಸನಾಮಯ ಬಾಹ್ಯವಿಶ್ವದೊ
ಳಾಸೆಮಾಡುವನಿಂಗೆ ಬಹುವಿಧ
ವೇಷಧಾರಣಮಾಡಿದೀಜಗ ತೋರಿ ರಂಜಿಪುದು ।
ವಾಸನಾಮಯ ಜಗದ ರಂಜನೆ
ಗಾಸೆಮಾಡದ ಯೋಗಿಯಂತ
ರ್ವಾಸನಾಮುಖಿಯಾಗುತಾತ್ಮಾನಂದ ಬೆಳಗುವನು ॥ ೧೮ ॥

ಜ್ಞಾನಕುಂಡವನಾತ್ಮದರಣಿಗೆ
ಯನ್ನು ಮಂಥನಮಾಡಿ ಕಡೆಯಲು
ಜನ್ಮಜನ್ಮಾಂತರದ ಪಾಪವು ದಹಿಸಿಪೋಗುವುದು |
ಜ್ಞಾನರತನಾದಾತ್ಮಲಿಂಗಿಯು
ತನ್ನಸುತ್ತಿದ ವಿಶ್ವಪಾಶಗ
ಳನ್ನು ದಹಿಸುತಲಿನ್ನು ಶಿವನಾನಂದ ಬೆಳಗುವನು ॥ ೨೯ ॥

ಒಳಿತುಕೆಡುಕಿನ ಬೇರುಬಿಳಲುಗ
ಳಿಳಿದು ಪಂಚಕ್ಲೇಶಕೊಂಬೆಯೊ
ಳೆಳೆಯಪರ್ಣಗಳೆಂಬ ದುಃಖದವೃಕ್ಷ ಸಂಸಾರ |
ಹೊಳೆವ ಪರಶಿವಭಾವ ಖಡ್ಗವ
ನೆಳೆದು ಕಡಿಯಲು ಭವದ ವೃಕ್ಷವ
ದಳಿದುಬೀಳ್ವುದು ! ಕಲ್ಪವೃಕ್ಷವು ಕೊನರಿ ಫಲಿಸುವುದು ॥ ೩೦ ॥

ಆತ್ಮವಳಿಸುವನಾತ್ಮರಕ್ಕಸ
ನೇತ್ರವರಳಿಪ ವಿಷಯಸಂಸಾ
ರೋತ್ತರೋತ್ತಿನ ತಮಕೆ ಭಾಸ್ಕರ ಪರಶಿವಧ್ಯಾನ |
ಆತ್ಮಲಿಂಗಿಯುಮದನೆ ನೆನೆಯು
ತ್ತಾತ್ಮವರಳಿಪ ಮರ್ಮಪೇಳುವ
ನಾತ್ಮಸಾಕ್ಷಾತ್ಕರಿಸಲಂತರ್ಮುಖಿಯು ನೀನಾಗು ॥ ೩೧ ॥

* ಆರುಚಕ್ರಗಳಿರುವ ದೇಹದೊ
ಳಾರು ಕಮಲಗಳಲ್ಲಿ ಗದ್ದುಗೆ
ಯೇರಿ ಮೆರೆವರ್ ಬ್ರಹ್ಮನಿಂ ಪರಶಿವನಪರಿಯಂತ |

---

* ಶರೀರದೊಳಗೆ—ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞಾ ನಾಮಕ ಷಟ್‌ಚಕ್ರರೂಪಗಳಾದ ಕಮಲಗಳನ್ನು ಭಾವಿಸಬೇಕು. ಈ ಆರು ಚಕ್ರಗಳು ಕ್ರಮವಾಗಿ ಗುದ, ಗುಹ್ಯ, ನಾಭಿ, ಹೃದಯ, ಕಂಠ, ಭ್ರೂಮಧ್ಯದಲ್ಲಿದ್ದು, ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ, ಪರಶಿವ ಎಂಬೀ ಅಧಿದೇವತೆಗಳಿಗೆ ಸ್ಥಾನಗಳಾಗಿವೆ.

—ಸಿದ್ಧಾಂತಶಿಖಾಮಣಿ, ಪುಟ ೧೫೭

ಧೀರನಂತರ್ಮುಖಿಯು ಯೋಗಿಯು
ತೋರದಡಗಿದ ಪರಮಶಿವನನು
ಸೇರಿ ಬೆರೆಯುವನೇರಿ ಸಾಸಿರದಳದ ಕಮಲವನು ॥ ೨೨ ॥

ಭ್ರೂಮಮಧ್ಯದೊಳೂರ್ಧ್ವಭಾಗದೆ
ಬ್ರಹ್ಮರಂಧ್ರದ ಕಮಲಮಧ್ಯದೆ
ಸೋಮಮಂಡಲ ಬಿಂಬಕಾಂಬುದು ಯೋಗಿ ಭಾವಿಪುದು ।
ಸೋಮಮಂಡಲ ಮಧ್ಯರಂಧ್ರವು
ಬ್ರಹ್ಮರಾದಿಯ ಸರ್ವಕರ್ತನ
ಸೋಮಶೇಖರ ಶಿವನವಾಸವು ಗುರುವು ತೋರುವನು ॥ ೨೩ ॥

ಮೂಲವಿಗ್ರಹ ಚಲ್ವಿನಾಕರ
ಶೂಲಪಾಣಿಯು ಚಂದ್ರಚೂಡನು
ಶೀಲೆ ಗಂಗಾಧರನು ಸಾಂಬಾನಂದ ಪರಶಿವನು ।
ಮೂಲ ಮೂವತ್ತಾರುತತ್ತ್ವಕೆ
ಮೇಲಿನಾತನು ಸರ್ವಲೀಲೆಗು
ಮೂಲ ಪರಮಾನಂದಭಾಸ್ಕರ ತಾನೆ ಬೆಳಗುವನು ॥ ೨೪ ॥

ತಾನಗೋಚರದೇಶಶೂನ್ಯಂ
ಧ್ಯಾನಿಮೌನಿಯು ಚಿತ್ಸ್ವರೂಪನು
ತಾನೆತನ್ನಿಂ ಬೆಳಗಬಲ್ಲವ ಹಂಸರೂಪಶಿವ ।
ತಾನೆತಾನಾಗಿರುವ ಶಿವನಂ
ಪ್ರಾಣಲಿಂಗಿಯು ಮಾಣದೋಪರಿ
ತಾನೆ ಪರಶಿವನೆಂಬ ಭಾವಕ್ಕೇರಿ ಬೆರೆಯುವನು ॥ ೨೫ ॥

## (೩೫) ಲಿಂಗನಿಜಸ್ಥಲಂ

ಒಳಗೆ ಬೆಳಗುವ ಶಿವನಲಿಂಗದ
ಕಳೆಯಕಾಣ್ಕೆಯ ನೈಜಭಾವವ
ತಳೆದಯೋಗಿಯೆ ಬುಧರು ಕೀರ್ತಿಪ ಲಿಂಗನಿಜನಿರವು ।

ಹೊಳೆಯು ಶರಧಿಯ ಸೇರ್ದ ತೆರದೊಳು
ಬೆಳಗು ಬೆಳಗೊಳು ಬೆರೆದಪರಿಯೊಳು
ಬೆಳಗುವನು ಶಿವಲಿಂಗಕಳೆಯಲಿ ಬೆರೆದ ನಿಜಲಿಂಗಿ ॥ ೨೬ ॥

ಸೃಷ್ಟಿಮೂಲವು ಮಾಯೆ ! ಶಕ್ತಿಯು
ನಿಷ್ಟದಿಂದಲಿ ಬೆರಸಿದಾತಂ
ಶ್ರೇಷ್ಠಮಾಹೇಶ್ವರನು—ಎಂಬೀಮತವು ಸರಿಯಲ್ಲ ।
ನಿಷ್ಠೆನಿಯತಿಯ ಶುದ್ಧಶಿವೆತಾ
ಶ್ರೇಷ್ಠ ಪರಶಿವ ನಿತ್ಯಸಂಗಿನಿ
ಸೃಷ್ಟಿಸರ್ವಕು ಮೂಲ ಮಾಹೇಶ್ವರನೆ ಮೊದಲಿಗನು ॥ ೨೭ ॥

ಪರಮಮಂಗಲ ಲಿಂಗಮುಖದೊಳು
ಸರುವಲೋಕಗಳುದಿಪವದರಿಂ
ದರಿಯೆ ಲಿಂಗವು ಶಿವನರೂಪವುದನ್ಯತಾನಲ್ಲ ।
ವರದ ಶಿವಚಿನ್ಮಾತ್ರನಿರುಪಮ
ನಿರವಯವ ನಿರ್ಗುಣ ನಿರಂಜನ
ನಿರುಪ ಬೆಳಗಿನ ಪುಂಜಲಿಂಗಮದನ್ಯತಾನಲ್ಲ ॥ ೨೮ ॥

ಹರಿವಿರಂಚಿಗಳಾದಿದೈವವು
ಸರುವವೇದಾಗಮವು ಶಾಸ್ತ್ರಗ
ಳಿರದೆ ಲಿಂಗದೆ ಲಯವನೈದುವವಂತೆ ಪುಟ್ಟುವವು ।
ನಿರುಪಮಾನಂದಾತ್ಮಲಿಂಗವು
ಪರಮಶುದ್ಧಬ್ರಹ್ಮರೂಪವು
ವರದಲಿಂಗವಬಿಟ್ಟು ಬೇರಾಶ್ರಯವದಿನ್ನಿಲ್ಲ ॥ ೨೯ ॥

ಹೆಚ್ಚು ಹೇಳುವದೇನು ಲಿಂಗವೆ
ಹೆಚ್ಚಿಗೆಚ್ಚಿದು ಬುಧರ ಮತದೊಳು
ಸಚ್ಚಿದಾನಂದಾತ್ಮ ಜಗದಾಸ್ಪದವು ! ಜಗದೀಶ ।

ಹೊಚ್ಚಹೊಸತಿದು ! ಚಿರಪುರಾತನ
ನೆಚ್ಚು ನಿತ್ಯವು ಶಿವನ ಹೆಸರಿಂದು
ನಿಚ್ಚಬೆಳಗುತಲೆಲ್ಲ ಬೆಳಗುವ ಬೆಳಗಿನಾಬೆಳಗು ॥ ೩೦ ॥

ಲಿಂಗಬೆಳಗಿನ ಛಾಯೆಯೊಳು ಜಗ
ದಂಗವೆಲ್ಲವು ಬೆಳಗುತಿರುವುದು
ಲಿಂಗವಿದುತಾ ಜ್ಯೋತಿ ! ಪರಶಿವನಾತ್ಮದಾತ್ಮವಿದು ।
ಅಂಗ ಬೆಳಗಲು ಸೂರ್‍ಯ ಬೆಳಗನು
ಲಿಂಗ ಬೆಳಗಲು ಚಂದ್ರ ಬೆಳಗನು
ಲಿಂಗ ಬೆಳಗಲು ತಾರಮಂಡಲ ಬೆಳಗದಡಗುವುದು ॥ ೩೧ ॥

ಲಿಂಗದಿಂ ಜಗವುಟ್ಟಬರುವುದು
ಲಿಂಗರೂಪವ ಹೊಂದುತಿರುವುದು
ಲಿಂಗದೊಳುತಾನಡಗುತಿಡುವುದು ಲಿಂಗಪರತತ್ತ್ವ ।
ಲಿಂಗನಿಜವನ್ನರಿತು ಭಾವಿಪ
ನಂಗಲಿಂಗಿಯು ನಿಜದೆ ! ಪರಶಿವ
ಲಿಂಗಭಾವಿಸಿ ಶಿವನೆಯಾಗುವನಯ್ಯ ನಿಜಲಿಂಗಿ ॥ ೩೨ ॥

## (೩೬) ಅಂಗಲಿಂಗಸ್ಥಲಂ

ಶಿವನ ತಿಳುವಳಿಕುಳ್ಳನಂಗನು
ಶಿವನನರಿಯಲು ಬಯಪಜೀವಿಗೆ
ಶಿವನ ಸಾಕ್ಷಾತ್ಕರಿಪ ಲಿಂಗವು ಚಿರಪುರಾತನವು ।
ಇವುಗಳೆರಡಂ ಪ್ರಾಣಲಿಂಗಿಯು
ಶಿವನಕರುಣದೆ ಪಡೆದ ಕಾರಣ
ಭುವನಸಂಸ್ತುತ ಮಧುರಸಂಗಮದಂಗಲಿಂಗಸ್ಥ ॥ ೩೩ ॥

ಅಂಗಲಿಂಗದ ಸಂಗಸುಖದೊಳು
ಲಿಂಗವಂಗದ ಗರ್ಭಗುಡಿಯೊಳು
ಸಂಗಮಿಸುವಲ್ಲಿಂತು ಬೀಜಾಂಕುರದ ನೀತಿಯೊಳು ।
ಲಿಂಗದಂಗಿಯು ಶಿವನಸಂಗಿಯ
ದಂಗಲಿಂಗಿಯು ಪರಮಯೋಗಿಯ
ದಂಗಲಿಂಗದ ಜ್ಞಾನಜ್ಞೇಯದ ಮಧುರಸಂಗಮವು ॥ ೩೪ ॥

ಧೀರಯೋಗಿಯು ಹೃದಯಕಮಲದ
ಚಾರುಪೀಠದೆ ಕುಳಿತು ಬೆಳಗುವ
ವೀರಲಿಂಗಜ್ಯೋತಿರೂಪವ ಕಂಡು ನಲಿನಲಿದು ।
ಸಾರಭಕ್ತಿಯ ಭಾವಗಂಗೆಯ
ನೀರನೆರೆಯಲ್ಲರಳುವಂತಹ
ಚಾರುತರವಹ ಭಾವಕುಸುಮಗಳಿಂದ ಪೂಜಿಸುವನು ॥ ೩೫ ॥

ಲಿಂಗಮೇಕಂ ! ಬ್ರಹ್ಮಪರಶಿವ
ತುಂಗಮಹಿಮವು ವಿಶ್ವಧಾಮವು
ಭಂಗಭವಭಯ ಮುಕ್ತಿದಾಯಕ ಶಾಸ್ತ್ರಮತವಿಂತು ।
ಅಂಗಲಿಂಗಂ ಪ್ರಾಣಲಿಂಗಿಯು
ಲಿಂಗದಿಂದಲೆ ನಿಜದ ನಿಲುಗಡೆ
ತುಂಗಶಿಖರವನೇರಿ ಬೆರೆಯುವೆನೆಂಬ ದೃಢಪದನು ॥ ೩೬ ॥

ದೇಹದೆಲ್ಲಾ ಭಾಗದೊಳುಗುಂ
ದೇಹದೇಗುಲ ಬೆಳಗುವಾತನು
ದೇಹವೆಂಟರ ವಿಶ್ವಲಿಂಗನು ತಾನೆ ನೆಲಸಿರಲು ।
ದೇಹವಂಗಂ ಪ್ರಾಣಲಿಂಗವು
ದೇಹದೇಗುಲ ಲಿಂಗಶಿವನಿಗೆ
ದೇಹವಿಡಿದುಂ ಮುಕ್ತ ! ವರಗುರುವಂಗಲಿಂಗಧರ ॥ ೩೭ ॥

ಹುಟ್ಟುಸಾವುಗಳಿಲ್ಲ ಲಿಂಗಕೆ
ನೆಟ್ಟನನ್ವಯ ನಿತ್ಯನಿರ್ಮಲ
ಹುಟ್ಟುಲಿಂಗದೊಳೈಕ್ಯಲಿಂಗದೊಳೆಂದು ತಿಳಿಯದಿರೆ ।
ಕಟ್ಟಲಿಂಗದ ಮಹಿಮೆ ತಿಳಿಯದೆ
ಹುಟ್ಟುಮುಟ್ಟನ ಗುಟ್ಟನರಿಯದೆ
ಕೆಟ್ಟುಪೋಪನು ಮೋಕ್ಷಮಾರ್ಗವ ಕಾಣನಾಮೂಢ ॥ ೩೮ ॥

ಯಾವನಂತರ ಲಿಂಗಪೂಜೆಯ
ಭಾವಪೂರ್ವಕ ನಿತ್ಯಮಾಡುವ
ನಾವನಾತ್ಮವು ಲಿಂಗಮೊಂದೇಯೆಂದು ಭಾವಿಪನೋ ।
ಕಾವ ಶಿವನಿಂಗೆಲ್ಲವರ್ಪಿಸಿ
ಭಾವಶುದ್ಧಂ ಪ್ರಾಣಲಿಂಗಿಯು
ದೈವವಾಡಿಸಿದಂತೆ ನಡೆವನು ಶರಣನೆಂದೆನಿಪ ॥ ೩೯ ॥

ಇಂತು ರೇಣುಕಗೀತೆ ಬೋಧಿಪು
ದೆಂತು ಪರಮಪ್ರಾಣಲಿಂಗಿಯೊ
ಳಂತರಂಗದೊಳಾತ್ಮಲಿಂಗಂ ಜ್ಯೋತಿರೂಪದೊಳು ।
ಅಂತ್ಯಪಾರವು ತೋರದೋಲಾ
ನಂತಕಾಂತಿಯನಾಂತು ರಾಜಿಸ
ಲಿಂತುಬೆಳಗಿಗೆ ಶರಣಶರಣನು ಸಂಧಿ ಸಂಪೂರ್ಣಂ ॥ ೪೦ ॥

ಹನ್ನೆರಡನೆಯ ಸಂಧಿ ಸಂಪೂರ್ಣಂ.

ಅಂತು ಸಂಧಿ ಹದಿಮೂರಕ್ಕಂ ಪದನ್ಯೆದುನೂರುನಲ್ವತ್ತೊಂದಕ್ಕಂ
ಮಂಗಳಮಸ್ತು.

# ಹದಿಮೂರನೆಯ ಸಂಧಿ

## ಶರಣ ಸ್ಥಲಂ

ಸೂಚನೆ:— ರೇಣುಕಾರ್ಯರು ಬೋಧಿಸಿದರಾ |
ಪ್ರಾಣಲಿಂಗಿಯು ಯೋಗರತಿಯೊಳು |
ಕಾಣುವಂತಜ್ಯೋತಿಲಿಂಗಕೆ ಶರಣನೆಂಬುದನು ||

ಅಂತೆ ಮಾಹೇಶ್ವರನು ಪರಶಿವ
ಕರುಣದೋರಲು ಸುಪ್ರಸಾದಿಯು
ಪರಮಜ್ಞಾನಿ ಪ್ರಾಣಲಿಂಗಿಯನೆಂಬ ಮರ್ಮವನು |
ಶರಣು ವರಗುಣನಿಧಿಯೆ ರೇಣುಕ
ಕರುಣದಿಂ ಪೇಳ್ ಪ್ರಾಣಲಿಂಗಿಯು
ಶರಣನಾಗುವನೆಂತು ? ನಡೆನುಡಿಯೆಂತು ಶರಣಂಗೆ? || ೧ ||

ಮೌನಿಯೋತ್ತಮ ಪೇಳ್ವೆನಾಲಿಸು
ಜ್ಞಾನಯೋಗಿ ಪ್ರಾಣಲಿಂಗಿಯು
ತಾನೆ ವರಸತಿ ಲಿಂಗಪತಿ ಶಿವನೆಂಬ ಭಾವದೊಳು |
ತಾನು ತನ್ನ ಯತನವನೆಲ್ಲವ
ಸಾನುರಾಗದೊಳರ್ಪಿಸೀಯುವ
ಮಾನವತಿಯೋಲ್ ಪ್ರೇಮಸಮರತಿ ಸುಖಿಯು " ಶಿವಶರಣ " || ೨ ||

ಸರುವಮಂಗಳೆಯಂತೆ ಪರಶಿವ
ಶರಣ, ತಾಮಸನಿರಸನಸ್ಥಲಿ,
ಗುರುವು ನಿರ್ದೇಶನದೆ ನಡೆವವ, ಶೀಲಸಂಪನ್ನ |
ಶರಣನಾಗುವ ಲಿಂಗಸಂಗಿಯು
ಪರಮಜ್ಞಾನದ *ನಾಲ್ಕುಹಂತಗ
ಳಿರದೊಳೇರುತ ಬೆರೆಯಬೇಕೈ ಲಿಂಗಪತಿಯನ್ನು || ೩ ||

---

* ನಾಲ್ಕು ಹಂತಗಳು:— ೧ ಶರಣಸ್ಥಲಂ ೨ ತಾಮಸ ನಿರಸನ ಸ್ಥಲಂ ೩ ನಿರ್ದೇಶಸ್ಥಲಂ ೪ ಶೀಲಸಂಪಾದನಸ್ಥಲಂಗಳಿವು ನಾಲ್ಕು ಬಗೆಗಳು.

ಶರಣಲಕ್ಷಣವವನ ನಡೆನುಡಿ
ವ್ರೊರೆವೆ ವಿವರದಿ ಹಂತಹಂತದೆ
ಚರಿಸಿ ಮರೆಹೊಗಲಿನ್ನು ನೀನುಂ ಸಿದ್ಧನಾಗಯ್ಯ ।
ಶರಣಬಾರ್ಯೆ ಶಿವಗೆ ಶಿವೆಯೊಲು
ತೊರೆದು ತಾಮಸಗುಣಗಳೆಲ್ಲವ
ಗುರುವು ನಿರ್ದೇಶನವನಾಲಿಸು ಶೀಲಸಂಪದಕೆ ॥ ೪ ॥

## (೩೭) ಶರಣ ಸ್ಥಲಂ

ಯಾವ ಹದಿಬದೆ ತನ್ನ ಪತಿಗೇ
ಭಾವ ತನುಮನವನ್ನು ವಿಾಸಲು
ಗೈವಳನ್ಯರನೆಂದು ಭಾವಿಸಳಂತೆವ್ರೋಲ್ ಶರಣ ।
ಜೀವ ತನುಮನ ಧನವ ವಿೀಸಲು
ಗೈವ ಶಿವನಿಗೆ ಬೇರೆ ದೇವತೆ ।
ದೈವಕೆರಗನ್ನೋವಿ ಭಾವಿಸನೆಂದು ಶಿವಶರಣ ॥ ೧ ॥

ಅರಸುಬೊಕ್ಕಸ ದೊರಕಿದಾತನು
ಪರರಬೇಡುವನೇಕೆ ಗಾಜನು
ಪರಮಶಿವನನೆ ವೊರೆಯಹೊಕ್ಕವಗೇಕೆ ಕುಳದೈವ ।
ಕರುಣ ಗಂಗಾಮೃತವೆ ಹರಿದಿರೆ
ಮರಿಚಿಯಾಜಲಗೇತಕೋಟವು ?
ಪರಮಶಿವನಾಶ್ರಯಿಗೆ ಪರದೇವತೆಯ ಹಂಗೇಕೆ ? ॥ ೨ ॥

ಘೋರಸಂಸಾರಾಂಧಕಾರವು
ಪೂರಹರಿಯಲು ಸೂರ್ಯತೇಜದ
ವೀರಶಿವನಿರೆ ಬೇರೆ ದೇವತೆಯೆಂಬ ಮಿಣುಕೇಕೆ ? ।

ಘೋರ ಸಂಸಾರಾಂಧಕಾರವು
ಘೇರಯಿಸುವಲ್ಲಾದಕತ್ತಲೆ
ಬೇರೆದೇವರುಯಾರ್ಗು ಹರಿಯದು ಶಿವನಹೊರತಾಗಿ ॥ ೭ ॥

ದಾಹದಳುವ ಚಕೋರಪಕ್ಷಿಯ
ದೇಹತಣಿವುದೆ ಮಿಣುಕುತಾರೆಗೆ ?
ದಾಹವಾರಲು ಪೂರ್ಣಚಂದ್ರನು ಮೂಡಿಬರಬೇಕು ।
ಬಾಹ್ಯಜಗದೊಳು ಚಕ್ರಸುತ್ತುವ
ದೇಹಕೋಟಿಯನೊತ್ತ ಜೀವಿಯ
ದೇಹಬಂಧವು ಹರಿಯೆ ಸುರರನು ಬೇಡಿ ಫಲವೇನು ? ॥ ೮ ॥

ಹುಟ್ಟುಸಾವಿನ ದುಷ್ಟಸರ್ಪದ
ಕಟ್ಟ ವಿಷಭಯದಿಂದ ಶರಣಾ
ದಷ್ಟು ಭಕ್ತರಿಗೆಲ್ಲ ಶಿವನೇ ಪರಮರಕ್ಷಕನು ।
ನೆಟ್ಟನವ್ಯಯ ನಿತ್ಯನಿರ್ಮಲ
ದಿಟ್ಟಮೂರರ ನೀಲಕಂಠನು
ಕಟ್ಟವಿಷಮುಂ ಕುಡಿದುಬಿಡುವನು ಶರಣರಕ್ಷಣೆಗೆ ॥ ೯ ॥

ಪರಮಪರತರ ಶಿವನತಿಳಿಯ
ಲ್ಲರಿವಿನಿಂದಾನಂದ ಪೊಂದಿದ
ಶರಣಹೃದಯದೆ ಬೆಳಗು ಬೆಳಗಲ್ಲದಕೆ ಶರಣಾದ ।
ಪರಮಯೋಗಿಯು ರಮಿಸನೆಂದೂ
ಬರಿದೆ ಬೆಳಕಿನ ಸೋಗುಹಾಕಿರ
ಲರಿಯೆ ಹತ್ತಿರ ಸರಿಯಲಾರುವ ಬಣಗುದೈವಗಳ ॥ ೧೦ ॥

ಗತಿವಿಹೀನರಂಗಕಟ ನೀನೇ
ಗತಿಯೆನುತ ಮೊರೆಹೊಗುವ ಶರಣಂ
ಗತಿಶಯಾನಂದವನು ಶಿವತಾನೊಲಿದು ಕರುಣಿಪನು ।

ಸತತಯತ್ನದೆ ಶಿವನಿಗರ್ಪಿತ
ನತುಲಪರಮಾನಂದ ಸುಖರತ
ನಿತರದೈವದ ಚಿಂತೆಮಾಡನು ಮೋಕ್ಷಸಂಪದಕೆ ॥ ೧೧ ॥

## (೩೮) ತಾಮಸ ನಿರಸನ ಸ್ಥಲಂ

ಯಾವ ಪರಶಿವಭಕ್ತಿಯೋತ್ತಮ
ಗೀವ ಪರಮಾನಂದ ಬೋಧವು
ಗೈವುದೆಲ್ಲಾ ತಾಮಸದಗುಣನಿರಸನಂಗಳನು ।
ಯಾವನಾಗಲಿ ಯೋಗಿ ತಾಮಸ
ಭಾವದಿಂದೊಡಗೂಡಲಾಕ್ಷಣ
ದೈವಭಾವವು ಹೃದಯನಿರ್ಮಲವಳಿದು ದುರ್ಗತಿಯು ॥ ೧೨ ॥

ಜ್ಞಾನಯೋಗಕೆ ಸತ್ತ್ವಗುಣವುಂ
ಜ್ಞಾನಯಜ್ಞವು ಶಾಂತಿದಾಂತಿಯು
ಮೇಣು ನಿತ್ಯಾನಿತ್ಯದರಿವುಂ ವಿಷಯ ವಿಮುಖತೆಯು ।
ಧ್ಯಾನಧಾರಣ ಸತ್ಯನಿಷ್ಠೆಯು
ಮೌನ ಜಪತಪ ಪೂರ್ಣಭಾವವು
ತಾನುತನ್ನವರೆಂಬುವಳಿಸಿದ ಸಮತೆಯಿರಬೇಕು ॥ ೧೩ ॥

ಶ್ರೇಷ್ಠಶಿವಮತಧರ್ಮ ಶಿವನೋಳ್
ಶ್ರೇಷ್ಠಭಕ್ತಿಯು ವರವಿರಾಗನಿ
ಜೇಷ್ಠಬಂಧುಗಳಾಗೆ ಯೋಗಿಯು ಶುದ್ಧಸಾತ್ತ್ವಕನು ।
ಶ್ರೇಷ್ಠಗುರುವಿನ ಪರಮಕರುಣೆನಿ
ಜೇಷ್ಠಲಿಂಗದೆ ನಿಷ್ಠೆಯುಳ್ಳೀ
ಶ್ರೇಷ್ಠಮೃಗರಾಜಂಗೆ ಮದಕರಿದಂಡು[1] ತಾನೆದುರೆ ॥ ೧೪ ॥

---

[1] ಅರಿಷಡ್ವರ್ಗಗಳೆಂಬ ಮದಕರಿಗಳ ದಂಡು.

ಕಾಮಕಾಂಕ್ಷಾ ಕ್ರೋಧ ಮೋಹವು
ತಾಮಸವು ಮದಮತ್ಸರಂಗಳ
ನೇಮ ಸಂಯಮಿ ಯೋಗಿರಾಜಂಗೇನುಮಾಡುವವು ? ।
ಕಾಮಪರಶಿವಭಕ್ತಿಯಾಗ್ವುದು
ನೇಮತಪ್ಪದ ಯೋಗಕಾಂಕ್ಷೆಯು
ಸೀಮೆಯರಿಯದ ಶಾಂತಸಾಗರವನ್ನು ಸೇರುವುದು ॥ ೧೫ ॥

ವಿಶ್ವವಿಶ್ವೇಶ್ವರನ ರೂಪವು
ಕಶ್ಮಲಾಪಹ ಹೃದಿಪವಿತ್ರವು
ಕಶ್ಮಲಂ ಹೃದಿಯಾತನೋರ್ವಂ ದ್ವೇಷಿಸಲ್ಕದನು
ವಿಶ್ವಧೀಶ್ವರನನ್ನೆ ದೂಷಿಪ
ವಿಶ್ವನಿಯತಿಗೆ ತಪ್ಪಿ ನಡೆಯುವ
ನಶ್ವರಂವಹ ಕೀರ್ತಿಕಾಮಿಯು ರಾಜಸನ್ನೆನಿಪ ॥ ೧೬ ॥

ಸಕಲಜೀವಿಗು ಹಿಂಸೆಮಾಡುತ
ವಿಕಲಮತಿಯೊಳು ಹುಸಿಯನಾಡುವ
ನಖಿಲಲೋಕಕು ಸಲ್ಲನಾಹಂಕಾರಿ ತಾಮಸಿಯು ।
ಸಕಲ ರಾಗದ್ವೇಷವೃಕ್ಷದೊ
ಳಖಿಲ ತಾಮಸಮೂಲಗಳನೂ
ಸಕಲನಿಷ್ಕಲ ಜ್ಞಾನಖಡ್ಗದೆ ಶರಣ ಕತ್ತರಿಪ ॥ ೧೭ ॥

ಪೂರ್ವಗಿರಿಯೇರಿರುವ ರವಿಶತ
ಪೂರ್ವ ಜ್ಞಾನೋದಯದನಂತರ
ತೋರ್ಪುವೆಲ್ಲಿಯ ತಾಮಸದಗುಣ ರಾಹುಕೇತುಗಳು ? ।
ಪಾರ್ವತೀಪತಿ ಶಂಭುಶಂಕರ
ಬೀರ್ವಕರುಣವೆ ಜ್ಞಾನಸೂರ್ಯನು ।
ಫೇರಯುಸಿದ ಜ್ಞಾನತಮವಂ ಕಳೆವನೈ ಶರಣ ॥ ೧೮ ॥

## (೩೯) ನಿರ್ದೇಶನ ಸ್ಥಲಂ

ಭವಕೆ ಬಂಧಿಪ ತಾಮಸಂಗಳ
ಜವದಿ ನಿರಸನಗೈವ ಬೋಧೆಯ
ಶಿವನನರಿತಿಹ ಗುರುವು ನೀಡುವನದುವೆ ನಿರ್ದೇಶ ।
ಶಿವನ ತಿಳಿಯಲು ಪರಮತತ್ತ್ವವ
ಭುವನದೇಹಿಗೆ ಗುರುವು ಕರುಣಿಪ
ನವನಿಕತ್ತಲೆ ಕಳೆಯೆ ದಿನಮಣಿ ಮೂಡಿತಾಬರುವ ॥ ೧೯ ॥

ಬಲ್ಲವೈದ್ಯನ ವೈದ್ಯಮಿರದಿರ
ಲೆಲ್ಲಿ ರೋಗಿ ನಿರೋಗಿಯಾಗುವ
ನೆಲ್ಲಬಲ್ಲವ ಜ್ಞಾನಸಿದ್ಧನು ಗುರುವು ಕರುಣಿಸದೆ ।
ಎಲ್ಲರರಿವಿನ ಮೂಲ ಪರಶಿವ
ನಲ್ಲಿ ಪರತರಭಕ್ತಿ ಬಲಿವುದೆ ?
ಅಲ್ಲದೀಭವದಿಂದ ಬಿಡುಗಡೆ ಪಡೆಯಲಾಗುವುದೆ ? ॥ ೨೦ ॥

ಜ್ಞಾನಕನ್ನಡಿ ಮಲಿನಚಿತ್ತದೊ
ಳೇನುಕಾಣದತೆರದೊಳಾಗಿದೆ
ಜ್ಞಾನಭಸಿತದೆ ಗುರುವು ಬೆಳಗುವ ಯೋಗರತಿಯೊಳಗೆ ।
ಜ್ಞಾನಕನ್ನಡಿ ಬೆಳಗಿದಾತಂ
ತಾನೆತನ್ನೊಳು ಕಾಣ್ಬ ಶಿವನಂ
ಜ್ಞಾನಿ ವರಗುರು ಶರಣನೆಂದೇ ಕೀರ್ತಿಗೊಳ್ಳುವನು ॥ ೨೧ ।

ಸ್ವಸ್ವರೂಪ ಜ್ಞಾನಬಲದಿಂ
ದೀಶಸಾಕ್ಷಾತ್ಕಾರ ಪಡೆದವ
ನೀಶರೂಪದೊಳಿರುವ ಗುರುವರ ಕೃಪೆಯಮಾಡಲ್ಕೆ ।
ಈಶಸೃಷ್ಟಿಯೊಳಾವಸಿದ್ಧಿಯು
ಲೇಸುಮಾಡಲು ಹಿಂದೆಬೀಳುವು
ದೇಸುಮಾತ್ರಕು ಕೊರತೆಯಿರದೈ ಲೋಕದೋಳಿಲ್ಲಿ ॥ ೨೨ ॥

ಗುರುವು ಮೋಕ್ಷಕೆ ಕಲ್ಪತರುವೈ
ಕರುಣಾಸಾಗರ ವರಶಿವಾದ್ವೈತಿ
ಕಂತ ನಿಜಗುಣನಿರವು ಜಗದೊಳು ವಿರಳ ವರಪೂಜ್ಯ ।
ಸರುನ ಸಾಗರಗಳಲಿ ಕೀರವು
ಮೆರೆವ ಪರ್ವತಗಳಲಿ ಮೇರುವು
ಮೆರೆದಿ ಚಂದನಮಣಿಗೆ ಕೌಸ್ತುಭ ದೇವಶಿವನಂತೆ ॥ ೨೩ ॥

## (೪೦) ಶೀಲಸಂಪಾದನ ಸ್ಥಲಂ

ಗುರುವು ನೀಡಿದ ತತ್ತ್ವಮನನವು
ಕರಣನಂ ಶಿವಪದಕೆ ನಡೆಪುದು
ಹರನ ಶರಣನ ತತ್ತ್ವಮನನವು ಶೀಲವೆನ್ನಿಪುದು ।
ಹರನಶರಣರ ದುಃಖ ನೀಗುವ
ಪರನು ಕರುಣಾಕರನು । ಶಂಕರ
ಪರಮಪದದೋಳಚಲಚಿತ್ತವೆ ಶೀಲವೆನ್ನಿಪುದು ॥ ೨೪ ॥

ಯಾರದರಿವದು ಶಿವಕೆಮೀಸಲೊ
ಯಾರು ಶಿವನೋಳ್ ಧ್ಯಾನನಿಷ್ಠರೊ
ಯಾರು ಶರಣಾಗತರೊ ಶಿವನನು ಬೆರೆಯಲಾತುರರೋ ।
ಯಾರ ಹೃದಯವು ಬೇರೆಯರುವಿಗೆ
ಧೀರವಿಮುಖವೊ ಯಾರು ಮನಸಾ
ವೀರಶಿವನನೆ ನೆನೆವನವನೇ ಶೀಲಸಂಪನ್ನ ॥ ೨೫ ॥

ಯಾವ ಹದಿಬದೆ ಧರ್ಮಸಿದ್ಧಿಗೆ
ಜೀವದೋಪರಿ ಪತಿಯನೊಲಿವಳೊ
ಕಾವ ಶಿವನನ್ನಂತೆ ಶರಣನುವೊಲಿದು ವರಶೀಲಿ ।
ಯಾವಸತಿ, ಪತಿಯಲ್ಲದನ್ಯರ
ಸೇವೆಮಾಡಲು ನಿಂದ್ಯಗೊಳ್ಳಳೊ
ದೇವಸೇವೆಯುಮಂತೆ ಶರಣಗೆ ನಿಂದ್ಯಮಾಗಿಹುದು ॥ ೨೬ ॥

ಹೆಚ್ಚು ಮಾತುಗಳೇಕೆ ಕೇಳ್ವೆ
ಸಚ್ಚಿದಾನಂದಾತ್ಮ ಶಿವನನು
ನೆಚ್ಚಿಮೆಚ್ಚಿದ ಶರಣನಿಷ್ಠೆಯೆ ಶೀಲವೆನ್ನಿಪುದು ।
ಉಚ್ಚತರವಹ ಶೀಲವಂತನೆ
ಮೆಚ್ಚಿ ಶಿವನೋಳೈಕ್ಯಪೊಂದುವ
ಸಚ್ಚರಿತ್ರನು ಶರಣಶಿವತತ್ಪರನು ; ಶಿವಯೋಗಿ ! ॥ ೨೭ ॥

ಮಂಗಳಾತ್ಮಕನಂಗಲಿಂಗಿಯು
ಸಂಗಮೇಶ್ವರ ಶಿವನ ಶರಣನು
ಲಿಂಗಪತಿಯನು ತಾನೆ ವರಸತಿಯಾಗಿಯೊಲಿದವನು ।
ತುಂಗಶಿವರತ ಶೀಲಭೂಷಣ
ನಂಗಲಿಂಗದೊಳೈಕ್ಯಗೊಳ್ಳುವ
ಮಂಗಳಾಕರನಯ್ಯ ಶರಣನು ಬುಧರ ಮತವಿಂತು ॥ ೨೮ ॥

ಇಂತು ರೇಣುಕಗೀತೆ ಬೋಧಿಪು
ದೆಂತು ಶರಣನು ನೀಗೆ ತಾಮಸ
ಸಂತಗುರು ನಿರ್ದೇಶನಂದೊಳು ಶೀಲಿಯಾಗುವನು ।
ಶಾಂತಶೀಲನು ಲಿಂಗಪತಿಯ
ನ್ನೋಂತು ವರಸತಿಯಾಗಿ ಸೇವಿಪ
ನೆಂತು ಶಿವನೋಳೈಕ್ಯಕರ್ಹತೆಪಡೆದ ಶರಣಾರ್ತಿ ॥ ೨೯ ॥

ಹದಿಮೂರನೆಯ ಸಂಧಿ ಸಂಪೂರ್ಣಂ.

ಅಂತು ಸಂಧಿ ಹದಿನಾಲ್ಕಕ್ಕಂ ಪದನು ಐದುನೂರೆಪ್ಪತ್ತಕ್ಕಂ
ಮಂಗಳಮಸ್ತು.

# ಹದಿನಾಲ್ಕನೆಯ ಸಂಧಿ

## ಐಕ್ಯ ಸ್ಥಲಂ

ಸೂಚನೆ :—ಜ್ಞಾನಭೂಷಣ ರೇಣುಕಾರ್ಯರು
ಮೌನಿಗೊರೆದರು ಶಿವನಶರಣಂ
ಜ್ಞಾನಮಾರ್ಗದೊಳೈಕ್ಯತಾಣಕ್ಕೇರ್ವ ಮರ್ಮವನು ॥

ತಾನುನೀಗಲು ಕಾಯಕತ್ತಲೆ
ಜ್ಞಾನ ನಿರ್ದೇಶನದೆ ನಡೆಯಲು
ಮೇಣು ಸಂಪಾದಿಸಲು ಶೀಲವನೈಕ್ಯನೆಂತಹನು ? ।
ಜ್ಞಾನಭೂಷಣ ಪರಮಗುರುವರ
ನೀನೆ ಪೇಳ್ವೆ ಶಿವನ ಶರಣನು
ಮಾಣಸೋಪರಿ ಶಿವನೊಳೈಕ್ಯವ ಪಡೆವ ಮರ್ಮವನು ॥ ೧ ॥

ಅಂತರಂಗದ ಲಿಂಗಪೂಜಿಸು
ಶಂತರಂಗಜ್ಯೋತಿಲಿಂಗದೆ
ಶಂತಮಯ ಶಿವಯೋಗ ಸುಖರತನೈಕ್ಯ ಕೇಳಯ್ಯ ।
ಸಂತತಂ ಶಿವಸಂಗ ಭಾವಿಪ
ನಂತೆ ಶಿವಸುಖನಿದ್ರೆಗೈಯುವ
ನಿಂತು ಶಿವಜೀವೈಕ್ಯದರಿವಿಂದೈಕ್ಯನೆಂದೆನಿಪ ॥ ೨ ॥

ಐಕ್ಯದೀಸ್ಥಲ ಕವಲುಗೊಳ್ಳುತ
ಲೈಕ್ಯಮಾಚಾರ್ ಸಂಪದಸ್ಥಲ
ಮೇಕಭಾಜನ ಸಹಜಭಾಜನವೆಂದು *ನಾಲ್ಕಾಯ್ತು ।

---

*ಐಕ್ಯಸ್ಥಲದ ನಾಲ್ಕು ಪ್ರಭೇದಗಳು :—ಐಕ್ಯಸ್ಥಲಂ, ೨ ಆಚಾರ ಸಂಪತ್ತಿಸ್ಥಲಂ ೩ ಏಕಭಾಜನಸ್ಥಲಂ ೪ ಸಹಭಾಜನಸ್ಥಲಂಗಳಿವು ನಾಲ್ಕುವಿಧ.

ಐಕ್ಯದೀಸ್ಥಲಗಳನು ಬಣ್ಣಿಪೆ
ನೇಕನಿಷ್ಠಾಭಾವದಾಲಿಸು
ತ್ತೈಕ್ಯನಾಗೈ ಕ್ರಮದೊಳಾಚರಿಸಿಂತು ಶಿವನಲ್ಲಿ ॥ ೩ ॥

## (೪೧) ಐಕ್ಯ ಸ್ಥಲಂ

ಐಕ್ಯ ವಿಷಯಾನಂದ ವಿಮುಖ
ನೈೖಕ್ಯನಂತಃಕರಣಶುದ್ಧ
ನೈೖಕ್ಯನಿಃಸ್ಪೃಹ ನಿರ್ಮಲಾಶಯನಾದ ಶಿವಯೋಗಿ ।
ಐಕ್ಯ ಪರಮಾನಂದಸಾಗರ
ಹೊಕ್ಕು ಮಜ್ಜನಗೈವನದರಿಂ
ದೈಕ್ಯ ಪರಶಿವತತ್ತ್ವರೂಪವ ಧರಿಸಿ ಶೋಭಿಪನು ॥ ೧ ॥

ಯಾರ ಮನಮದು ನಿಷ್ಕಲಂಕವೊ
ಮೂರುಮಲಗಳ ಸಂಗದೂರವೊ
ಯಾರು ಶಿವತಾನೆಂದು ಭಾವಿಪನಾತ ಶಿವದೈಕ್ಯ !
ಧೀರ ಶಿವನೋಳೈಕ್ಯಭಾವದೆ
ಚಾರುಶಿವನನೆ ವಿಶ್ವದೀಕ್ಷಿಪ
ತೋರದಾತಗೆ ಮಾಯೆಕಲ್ಪಿತ ಜಗದ ವೈಭವವು ॥ ೨ ॥

ಬ್ರಹ್ಮಸೃಷ್ಟಿಯ ಭೇದಬುದ್ಬುದ
ಹೊಮ್ಮಿವಿಗುಣಿಸಿ ಗಣನೆ ಮೀರಲು
ತಮ್ಮ ಮೂವತ್ತಾರು ತತ್ತ್ವದ ತೆರೆಯುಮಸಗಲ್ಕೆ ।
ಬ್ರಹ್ಮಮಾಯೆಯ ಕಡಲಿನಬ್ಬರ
ಹೊಮ್ಮಿ ಮೊಳಗಲು ಘೋರಘೋರನೆ
ಚೆನ್ನಶಿವಲಿಂಗೈಕ್ಯವೆಂಬುದು ಲಯದ ವಡಬಾಗ್ನಿ ॥ ೩ ॥

ಜೀವಿ ಮಾಯಾಶಕ್ತಿರೂಪದ
ಭಾವಬಂಧಿತನಾದಕತದಿಂ
ಕಾವ ಶಿವನೊಳು ಭೇದಬುದ್ಧಿಯ ತಳೆದು ಕಳವಳಿಪ ।
ಜೀವಶಿವರೊಳೈಕ್ಯಮಾತ್ರದೆ
ಭಾವಬಂಧಿಪ ಮಾಯೆಮರ್ದನ
ಗೈವ, ಶಿವಲಿಂಗೈಕ್ಯಕನ್ಯವ ಕಾಣ ಶಿವಯೋಗಿ ॥ ೭ ॥

ಪಶುವು ಜೀವಿಯು ಪತಿಯು ಶಿವನಂ
ವಿಷಮಬುದ್ಧಿಯ ಮೋಹಕಲ್ಪಿತ
ವಶದಿ ತಾನಿದಿರಿಟ್ಟು ಹುಡುಕುತಲಿಹುದು. ಸಂತತವು ।
ಪಶುವು ಪತಿಯೊಳು ಲಯವನೈದಲು
ಪಶುವು ತಾನಾರ್ ? ಪತಿಯು ತಾನಾರ್ ?
ಪಶುವು ತೋರದು ಪತಿಯು ತೋರನ್ನುಭಯಮಳಿಯಲ್ಕೆ ॥ ೮ ॥

ಭಾರಿಭೇದದ ಹುತ್ತಶಯನದಿ
ಘೋರಸಂಸಾರ್ ಸರ್ಪಮಲಗಿದೆ
ತೀರದಿರುವೀ *ಪಂಚಭೇದದ ರೋಷರುಜೆಯಿಂದ ।
ಪಾರಮಾರ್ಥದೆ ಪರಮಪಾವನ
ವೀರಶಿವಲಿಂಗೈಕ್ಯಭಾವವು
ಪೂರಗುಣಮನ್ನೀವ ದಿವ್ಯೌಷಧವು ತಿಳಿಯಯ್ಯ ॥ ೯ ॥

ವೀರದೇಶಿಕ ಭೇದಬುದ್ಧಿಯ
ಘೋರ ಸಂಸಾರ್ ಸಾಗರೋತ್ತರ
ಕೇರ್ವ ಶಿವಲಿಂಗೈಕ್ಯನಾವೆಯ ಪಾರುಗಾಣಲ್ಕೆ ।

---

*ಪಂಚಭೇದಗಳು:—೧ ಜಡಾಜಡಭೇದ, ೨ ಜೀವಾಜೀವಭೇದ, ೩ ಜೀವ ಜಡಭೇದ, ೪ ಜೀವೇಶ್ವರಭೇದ ೫ ಜಡೇಶ್ವರಭೇದ.

ಘೋರ ರಾಕ್ಷಸಿಕೃತ್ಯವೆಸಗುವ
ಘೇರಯಿಸಿದಜ್ಞಾನತಿಮಿರವು
ವೀರ ಪರಮಾದ್ವೈತಸೂರ್ಯೋದಯದಿ ಪರಿಹರವು ॥ ೧೦ ॥

ಘೋರ ಭವಭಯ ದುಃಖವಶದಿಂ
ಪಾರುಗಾಣಲು ಬೇರೆ ನೇರದ
ದಾರಿಗಾಣನು ಯೋಗಿ ಪರಮಾದ್ವೈತಭಾವವಿನಃ ।
ವೀರಶಿವಲಿಂಗೈಕ್ಯಯೋಗದೊ
ಳಾರರಕ್ಷಣಸುಖಿಪ ಸುಖಮಂ
ಬೇರೆಭೋಗದೆ ಭೋಗಿಭೋಗಿಸ ಕೋಟಿವರುಷದೊಳು ॥ ೧೧ ॥

ಚಿತ್ತವೃತ್ತಿಯೊಳಡಗೆ ಜಗತಾ
ಸತ್ಯಶಿವನಾನಂದ ಪರವಶ
ವೆತ್ತ ಯೋಗಾನಂದರತಿಯನು ಮುಕ್ತಿಯೆನ್ನುವರು
ಎತ್ತಸಾಟಿಯು ಮೂರುಲೋಕಂ
ಮತ್ತನಾದೀ ಪ್ರೇಮಲೋಲಗೆ
ಮತ್ತೆ ಶಿವನೊಳೈಕ್ಯನಾದಗೆ ಲೀಲಶೀಲಂಗೆ ॥ ೧೨ ॥

## (೪೨) ಆಚಾರಸಂಪತ್ತಿ ಸ್ಥಲಂ

ಶಿವನೊಳೈಕ್ಯದಿ ಶಿವನೆ ತಾನಿರ
ಲವನು ದೇಹವಧ್ವಂಸಲೇನ
ಯ್ಯವನ ಮುಟ್ಟವು ಜಾತಿನೀತಿಯ ಕರ್ಮಸೂತಕವು ।
ಶಿವನ ಯೋಗಜ್ಞಾನನಿಷ್ಠೆಗೆ
ಶಿವನೊಳೈಕ್ಯಜ್ಞಾನ ಬಲಿಯು
ಲ್ಲವನು ಗೈಯುವ ಬಿಡುವ ಕರ್ಮಗಳೆಲ್ಲ ಸಮವಯ್ಯ ॥ ೧೩ ॥

ಶಿವನೊಳೈಕ್ಯವು ಸಿದ್ಧಿಯಾಗ
ಲ್ಲವನ ಸಮತಾದೃಷ್ಟಿ ಕಾಂಬುದು
ಶಿವನನೆಲ್ಲಾವಸ್ತುವಂತರದಾತ್ಮರಾಮದಲಿ
ಅವನು ಗೈಯುವ ಸರ್ವಕರ್ಮವು
ಶಿವನಿಗರ್ಪಿತವಾದಕತದಿಂ
ದವನಿಗಿಲ್ಲವು ಗೈವಕರ್ಮದ ಫಲದ ಸಂಚಯವು ॥ ೧೪ ॥

ಸರ್ವಸಮತಾದೃಷ್ಟಿ ಸಮನಿಸೆ
ಸರ್ವರೊಳಗುಂ ಶಿವನೆ ಕಾಂಬನು
ಹಾರ್ವನಂತ್ಯಜ ಪಾಪಿಪಾವನರೆಲ್ಲ ಶಿವಮಯರು ।
ಸರ್ವವರ್ಣಾಶ್ರಮದ ಧರ್ಮದೆ
ಸರ್ವಕರ್ಮವ ಫಲವ ಬಯಸದೆ
ಸರ್ವಸಮತಾದರ್ಶಿಗೈಯುವ ಲೋಕಹಿತಕಾಗಿ ॥ ೧೫ ॥

ನಿರ್ಮಲಂ ಶಿವಜ್ಞಾನದಗ್ನಿಗೆ
ಕರ್ಮಬೀಜವು ಸೀಯೆ ಸುಟ್ಟದೆ
ಕರ್ಮದೇಹಿಗಳಂತೆ ತೋರುವನೈಕ್ಯ ಶಿವಯೋಗಿ ।
ಕರ್ಮಧರ್ಮಕ್ಕಂಟಕೊಳ್ಳದೆ
ಕರ್ಮಭೂಮಿಯೊಳಿಹನು ಯೋಗಿಯು
ನಿರ್ಮಲಂ ಶಿವಜ್ಞಾನದಿಂ ಸ್ಥಿರಮಾದವಿರತಿಯೊಳು ॥ ೧೬ ॥

ಸರಸಿಯೊಳಿಹ ಪದ್ಮಪತ್ರದ
ತೆರದಿ ಯೋಗಿಯು ಕರ್ಮಕಂಟದೊ
ಳಿರುವ ಜಗದೊಳು ಪರಮವಿರತಂ ಜ್ಞಾನವಾಧರಿಸಿ ।
ಪರಮಯೋಗಿಯು ನಡೆಯೆ ನಿಂತಿರ
ಲೊರಗಲೆದ್ದಿರೆ ಪರಮಪೂಜಾ
ಪರನು ಶಿವನನ್ನರಿತ ಯೋಗಾರೂಢನನವರತ ॥ ೧೭ ॥

ಪ್ರೇಮಪೂರ್ವಕ ನೋಡಿದೆಡೆಯೊಳ್
ಸ್ವಾಮಿ ಶಿವನನೆ ಕಾಣ್ಬ ಲೋಕದೊ
ಳಾಮಹಾತ್ಮಗೆ ಶಿವನು ಕಾಣದ ತಾಣತಾನಿಲ್ಲ।
ಧ್ಯಾನಯೋಗಿಯ ಹೃದಯಮೆಲ್ಲಂ
ಸ್ವಾಮಿ ಶಿವಮಯಮಾದಕಾರಣ
ತಾನು ಚಿಂತಿಪುದೆಲ್ಲ ಚಿನ್ಮಯಮಾದ ಶಿವರೂಪ ॥ ೧೮ ॥

ಇಚ್ಛೆಯಿಂ ಶಿವಯೋಗಿ ನುಡಿದ
ದ್ದಚ್ಚುಮೆಚ್ಚಿನ ನುತಿಯು ಶಿವನಿಗೆ
ಸಚ್ಚಿದಾನಂದಾತ್ಮಕಂ ಶಿವನಂತು ಸರ್ವಾತ್ಮ।
ಸಚ್ಚರಿತ್ರಂ ಶಿವನಯೋಗಿಯ
ದಿಚ್ಛೆಯಿಂದಾವಾವ ಚೇಷ್ಟೆಯ
ಮೆಚ್ಚಿ ಮಾಡುವನದುವೆ ಪೂಜೆಯು ಪರಮಶಿವನಿಂಗೆ ॥ ೧೯ ॥

## (೪೩) ಏಕಭಾಜನ ಸ್ಥಲಂ

ಶಂಭುಮಯಮಿೂ ಜಗವಿದೆಲ್ಲವು
ನಂಬಿ ಭಾವಿಪನಾತ್ಮದಾತ್ಮವು
ಶಂಭು ಪರಮನುಮಾತ್ರ ಸಕಲಾಧಾರನೆಂದೆನುತ।
ನಂಬಿ ಭಾವಿಪ ಭಾವದೇಕತೆ
ಶಂಭುಪರವೈಕೇಕದಾಶ್ರಯ
ತುಂಬೆ ಹೃದಯಂ ಸುಪ್ರಸನ್ನತೆ “ ಐಕ್ಯಭಾಜನನು ” ॥ ೨೦ ॥

ಶಿವನೊಳಿಹುದೀ ಸರ್ವಜಗವುಂ
ಶಿವನು ತೋರುವ ಜಗದೊಳೆಲ್ಲುಂ
ಶಿವನು ಜಗದಾಧಾರ। ಜಗಮಾಧೇಯ ಶಿವನಿಂದ।
ಶಿವನರೂಪದೊಳೇಕೊಭಾವದಿ
ಶಿವನೊಳೈಕ್ಯವ ಪಡೆದ ಯೋಗಿಗೆ
ಶಿವನಹೊರತಿನ್ನೆಲ್ಲವುಂ ನಿಷ್ಫಲವು ಜಗದೊಳಗೆ ॥ ೨೧ ॥

ಜ್ಞಾನಬೆಳಗಿನೊಳೆಲ್ಲಜಗವಂ
ಜ್ಞಾನಿ ಬೆಳಗುವನಿಲ್ಲ ಜಗದೊಳ್
ಜ್ಞಾನಕಿಂತಲು ಮಿಗಿಲು ಪರಮಜ್ಞಾನರತನಾಗು ।
ಜ್ಞಾನಸತ್ಯಂ ಜ್ಞಾನಮತುಲಂ
ಜ್ಞಾನಿ ಪರಶಿವನಿರುವನದರಿಂ
ಜ್ಞಾನಿಗಿಲ್ಲವು ಮಾಯೆಕಲ್ಪಿತ ಜಗದ ಪರಿಕಲ್ಪ ॥ ೧೨ ॥

ಯಾವ ಯೋಗಿಯು ವೃತ್ತಿಶೂನ್ಯನೊ
ಯಾವಗಂ ತಾ ಕ್ಷೋಭರಹಿತನೊ
ಶೈವಭಾವದೊಳೇಕ ಪರಶಿವಲೀನ ಸದುಹೃದಯ ।
ಯಾವಯೋಗಿಯ ಹೃದಯಸರ್ವಂ
ಯಾವಗಂ ಶಿವಗಾಗಿ ರಮಿಪುದೊ
ಭಾವನಾಮಯನಾತ ಜೀವನ್ಮುಕ್ತನೆನ್ನಿಸುವ ॥ ೧೩ ॥

## (೪೪) ಸಹಭಾಜನ ಸ್ಥಲಂ

ಗುರುವು, ಶಿಷ್ಯಂ, ಶಿವರೊಳೊಂದೇ
ಪರಮತತ್ತ್ವವ ಕಂಡು ಭಾವಿಪ
ತೆರವು ತಮುವನ್ನರಿಯನಾ ಸಹಭಾಜನ ಸ್ಥಲಿಯು ।
ಗುರುವು ವಿಶ್ವವು ಶಿವನನಂತರ
ದಿರುವ ಸಾಕ್ಷಾದಾತ್ಮರೂಪದೊ
ಳಿರಿಸಿ ಯೋಜಿಸುತೊಂದೆಭಾವದೆ ಕಾಣ್ಬ ಸಹಭಾಜನ್ ॥ ೧೪ ॥

ಇವನು ಗುರುವೈ ಮೇಣು ಶಿವನಿವ
ಭುವನದೊಳಿಹ ಚರವು ಚಿರಮಿಂ
ಶಿವನು ಬಲ್ಲವ ನಾನೆಬೇರೆನೆ ವಿಶ್ವಭಾಜಕನು ।
ಶಿವನೆಯೀಶನು ನಾನು ಸೇವಕ
ನಿವನು ಗುರುವೈ ನಾನು ಶಿಷ್ಯನು
ಭುವಿಯ ಭೇದಪಿದೆಲ್ಲ ಬಿಟ್ಟದ್ವೈತಪದಯುತನು ॥ ೧೫ ॥

ವಿಶ್ವಭಾಸಕದಾತ್ಮದಗ್ನಿಗೆ
ನಶ್ವರೋಭಯ ಭೇದಬುದ್ಧಿಯ
ವಿಶ್ವಹೋಮಿಯು ಹೋಮಮಾಡುವ ಸರ್ವಸಮತೆಯೊಳು ।
ವಿಶ್ವಜಡ ಚೇತನವು ನಾನೇ
ವಿಶ್ವನಾಥನು ಗುರುವು ನಾನೇ
ವಿಶ್ವಹೋಮಿಯು ಪರಮಸಂಯಕ್‌ಜ್ಞಾನಿ ತಾನೆನುವ ॥ ೨೬ ॥

ಜ್ಞಾನರೂಪಾಧಾರಚಕ್ರದೆ
ತಾನೆತಾನಾಗುರಿಯುವಗ್ನಿಗೆ
ತಾನು ತನ್ನವರಿತರರೆಂಬುವ ಭೇದಮಯ ಜಗವ ।
ಜ್ಞಾನಜುವುವಿಂದೆತ್ತಿ ಹೋಮವ
ತಾನೆ ಮಾಡ್ದಗೆ ವಿಶ್ವವೃತ್ತಿಯ
ದೇನುಮಿಗದೈ ಜ್ಞಾನಯಜ್ಞಿಯೆ ವಿಶ್ವಹವ್ಯಭುಕ ॥ ೨೭ ॥

ಭುವನಪಾವನ ಜ್ಞಾನರೂಪನು
ಶಿವನ ಪರಮಾನಂದರೂಪನು
ಮವಗೆ ವೃತ್ತಿಗಳೇನುಮಾಡ್ಪುವು ಲಿಂಗಲೀನಂಗೆ ।
ವಿವಿಧ ಬಾಧೆಗಳಳಿಸಿದಾತಗೆ
ಭವಕೆ ಬಂದಿಪ ದೋಷರಹಿತಗೆ
ಶಿವನ ಚಿನ್ಮಯ ಭಾವನಾತ್ಮಗೆ ಸಹಜಸಾಮರಸ ॥ ೨೮ ॥

ಅವನಿ ಸಂಸ್ತುತನವನು ಯೋಗಿಯು
ಶಿವನ ತನ್ಮಯಭಾವನಾತ್ಮನು
ಭುವನಪಾವನ ಪರಮಲಿಂಗದೊಳೈಕ್ಯನೆನ್ನುವರು ।
ಶವಿವ ಮೋಹವನುಳಿಸದಳಿಸುವ
ಶಿವನ ಸತ್ಯಾನಂದಬೆಳಗುತ
ಲವನ ಬೆರವೀವಿದ್ಯೆ ಕೀರ್ತಿತ ವೀರಚಿರಮುಕ್ತಿ ॥ ೨೯ ॥

ಭಕ್ತಿಯಿಂ ಪರಮೈಕ್ಯ ದೊರೆಗುಂ
ಮುಕ್ತಿದಾಯಕ ಯೋಗ್ಯಮಾರ್ಗದೊ
ಳುಕ್ತ ಪರಮಾದ್ವೈತತತ್ತ್ವದೆ ನಡೆವ ಶಿವಯೋಗಿ ।
ಮುಕ್ತಿದೇವಿಯು ಬಂದು ನೆಲಸಲು
ಶಕ್ತ ಹೃದಯನ್ನೂರ್ಧ್ವರೇತಸಿ
ಶಕ್ತಿಸಂಯುತ ಶಂಭುಪರಮನೊಳೈಕ್ಯನೆಂದೆನಿಸ ॥ ೩೦ ॥

ಇಂತು ರೇಣುಕಗೀತೆ ಬೋಧಿಪು
ದಂತರಂಗಜ್ಯೋತಿ ಬೆಳಗಿನೊ
ಳಿಂತು ಶರಣನು ಶಿವನನವಿನಾಭಾವದಿಂ ಬೆರೆದು ।
ಶಂತಶಿವಲಿಂಗೈಕ್ಯನಾಗುವ
ನಂತೆ ಕಾಯವ ಕಾಯಮಾಡುವ
ನಂತು ಮೋಕ್ಷದ ಲಕ್ಷ್ಮಿನೆಲೆಯೆನೆ ಸಂಧಿ ಸಂಪೂರ್ಣ ॥ ೩೧ ॥

ಹದಿನಾಲ್ಕನೆ ಸಂಧಿ ಸಂಪೂರ್ಣಂ.

ಇಂತು ಸಂಧಿ ಹದಿನೈದಕ್ಕಂ ಪದನಾರುನೂರೊಂದಕ್ಕಂ
ಮಂಗಳಮಸ್ತು.

|| ಓಂ ||

ಶ್ರೀ ಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು

# ಶ್ರೀ ರೇಣುಕ ಗೀತೆ

## ಶಿವಾದ್ವೈತ ಸಿದ್ಧಾಂತ

## ಭಾಗ ೨

## ಹದಿನೈದನೆಯ ಸಂಧಿ

### ಭಕ್ತಸ್ಥಲಂ

ಸೂಚನೆ :—ಅಂಗಷಟ್‌ಸ್ಥಲ ಬೋಧಮಿತ್ತಾ |
ಲಿಂಗಮೂರುತಿ ರೇಣುಕಾರ್ಯರು |
ಲಿಂಗಷಟ್‌ಸ್ಥಲದಲ್ಲಿ ಭಕ್ತಿಯಮಾರ್ಗ ಪೇಳಿದರು ||

ಅಂಗಷಟ್‌ಸ್ಥಲಗಳನು ತಿಳಿದವ
ಮಂಗಳಾಂಗನು, ಷಟ್‌ಸ್ಥಲೋಕ್ತದೊ
ಳಂಗದಾಚಾರ್ಶೀಲಸಂಪದ ಪಡೆದ ಸಂಪನ್ನ |
ಮಂಗಳಾತ್ಮಕ ಲಿಂಗಬೆಳಗಿನ
ಲಿಂಗದೀಸ್ಥಲಗಳಲಿ ನಡೆಯುವ
ತುಂಗಮಹಿಮನು ನಿಜಕು ಜೀವನ್ಮುಕ್ತ ಶಿವಯೋಗಿ || ೧ ||

ಅಂಗಶುದ್ಧಿಗೆ ಭಕ್ತಿಯಿಂದಾ
ಲಿಂಗದೈಕ್ಯದ ಷಟ್‌ಸ್ಥಲಂಗಳ
ಮಂಗಳಾತ್ಮಕವಾದ ಬೋಧೆಯೊಳರಿತೆನೀವರೆಗೆ |

ಅಂಗಜಾಂತಕ ಯೋಗಿ ವರಗುರು
ಲಿಂಗಮೂರುತಿ ಜಂಗಮಾರ್ಯನೆ
ಲಿಂಗಷಟ್‌ಸ್ಥಲಗಳನು ತಿಳಿಸೈ ರೇಣುಕಾಚಾರ್ಯ ॥ ೨ ॥

ಗುರುವು ದೀಕ್ಷಾಸ್ಥಲವು ಮೊದಲಾ
ಗಿರುವ ಜ್ಞಾನಂ ಶೂನ್ಯದಾಸ್ಥಲ
ದೊರೆಗೆ ಪಸರಿಸಿ ಷಟ್‌ಸ್ಥಲಾಶ್ರಿತ ಲಿಂಗದೀಸ್ಥಲವು ।
ಮೆರೆವುವವರೊಳ್ ಶ್ರೇಷ್ಠಗುಣದಿಂ
ಭರಿತ ಭಕ್ತಸ್ಥಲದೊಳಾಶ್ರಯಿ ।
ಸಿರುವ । *ನವವಿಧಮಾದ ಭೇದಗಳವನು ತಿಳಿಯಯ್ಯ ॥ ೩ ॥

ಅರಿಯಲಿದು ದೀಕ್ಷಾಗುರುಸ್ಥಲ
ಮರಿಯೆ ಶಿಕ್ಷಾಗುರುವಿನಸ್ಥಲ
ವರಿಯೆ ಪ್ರಾಜ್ಞಾಗುರುವಿನಸ್ಥಲವಿಂತು ಮೂರರೊಳು ।
ಕರುಣೆಗೊಂಡಾಕ್ರಿಯೆಯ ಲಿಂಗವು
ವಿರತಭಾವಂ ಜ್ಞಾನಲಿಂಗವು
ದೊರೆವುವೈ ಸ್ವಸ್ಥಲವು ಚರಪರಮೆಂಬಿವೋರಂತೆ ॥ ೪ ॥

## (೧) ದೀಕ್ಷಾಗುರುಸ್ಥಲಂ

ದೇವಗುರುವರನೀವದೀಕ್ಷೆಯು
ಜೀವಿಗೀವುದು ಪರಮಜ್ಞಾನವ
ಗೈವುದೈ ಭವನಾಶವದರಿಂದವನೆ ದೀಕ್ಷೆಗುರು ।

---

* ಭಕ್ತಲಿಂಗಸ್ಥಲದ ಪ್ರಭೇದಗಳು :—೧) ದೀಕ್ಷಾಗುರುಸ್ಥಲಂ ೨) ಶಿಕ್ಷಾಗುರುಸ್ಥಲಂ ೩) ಜ್ಞಾನಗುರುಸ್ಥಲಂ ೪) ಕ್ರಿಯಾಲಿಂಗಸ್ಥಲಂ ೫) ಭಾವಲಿಂಗಸ್ಥಲಂ ೬) ಜ್ಞಾನಲಿಂಗಸ್ಥಲಂ ೭) ಸ್ವ ಸ್ಥಲಂ ೮) ಚರಸ್ಥಲಂ ೯) ಪರಸ್ಥಲಂಗಳೆಂತು ನವವಿಧ.

ಯಾವುದರಿತರೆ ಗುಣದ ರೂಪದ
ಭಾವಬಂಧದೆ ಮುಕ್ತಮಾಡುತ
ಲೀವುದೈ ಶಿವಭಾವಮದುವೇ ಜ್ಞಾನಮೆನ್ನಿಪುದು ‖ ೫ ‖

ಗುರುವುಶಬ್ದದ ಮೊದಲಿನಕ್ಷರ
ವೊರೆವುದಾಗುರು ಗುಣಕತೀತನು
ಎರಡನೇಯ 'ರು'ಕಾರ ರೂಪಾತೀತನೆನ್ನುವುದು ।
ಗುರುವುರೂಪವು ಗುಣಮದಿಲ್ಲದ
ಪರಮದರಿವನ್ನೀವನದರಿಂ
ಗುರುವಿಗಧಿಕಂ ಯಿಲ್ಲವೆಂದೇ ಸ್ಮೃತಿಯು ಸಾರುವುದು ‖ ೬ ‖

ಯಾರು ಶಾಸ್ತ್ರಾರ್ಥವನು ಬೋಧಿಪ
ರಾರು ಬೋಧಿಸಿದಂತೆ ನಡೆಯುವ
ರಾರು ಧರ್ಮಾಚಾರವಂ ನೆಲೆಗೊಳಿಸುವರೊ ಮತ್ತೆ ।
ಯಾರು *ಷಡ್ವಿಧದಧ್ವಗಳನುಂ
ಮೀರಿ ವರಶಿವಯೋಗಮಾರ್ಗದೆ
ಘೋರಿ ಶಿಷ್ಯೋದ್ಧಾರಗೈಯುವನವನೆ 'ಆಚಾರ್ಯ' ‖ ೭ ‖

ತನ್ನ ವರಶಿವಯೋಗದಿಂದಲೆ
ಮೃಣ್ಮಯದಜಗ ಚಿನ್ಮಯದಶಿವ
ವನ್ನುಮಾಡುವಬಲ್ಲಿದನು ಗುರು ವಿಶ್ವಭಾಸಕನು ।
ತನ್ನೊಳಡಗಿಹ ದಿವ್ಯಚೇತನ
ವನ್ನೆ ಜಡಚರವಸ್ತುವನಿತರೊ
ಳಿನ್ನು ಚೋದಿಸಬಲ್ಲ ಗುರುವೆ ವಿಶ್ವಭಾಸಕನು ‖ ೮ ‖

---

* ೧) ಭುವನ ೨) ಪದ ೩) ವರ್ಣ ೪) ಕಲಾ ೫) ತತ್ತ್ವ ೬) ಮಂತ್ರಾಧ್ವಗಳೆಂದು ಆರು ವಿಧ.

## (೨) ಶಿಕ್ಷಾಗುರುಸ್ಥಲಂ

ಕರುಣದೀಕ್ಷೆಯನೀವ ಗುರುವೆ
ಪರಮ ಶಿಕ್ಷಾಗುರುವುರೂಪದೆ
ಪರಶಿವಾದ್ವೈತಾತ್ಮವಿದ್ಯೆಯ ಶಿಷ್ಯಗೊರೆಯುವನು ।
ಶರಣಸಂಕುಲಕಿತ್ತು ರಕ್ಷೆಯ
ಚರಣಶಿಷ್ಯನ ಶಂಕೆ ಪರಿಹರಿ
ಸಿರದೆ ಮೋಕ್ಷವನಿತ್ತು ರಕ್ಷಿಪನಯ್ಯ ವರಗುರುವು ॥ ೯ ॥

ಭುವಿಗೆ ಕವಿದಿಹ ಭವದ ಕತ್ತಲೆ
ಜವದಿ ಪರಿಯಲು ಯಾರ ವಚನವು
ದಿವವನೇರಿದ ಚಂದ್ರನೋಲಿರಲಾತನಾಚಾರ್ಯ ।
ಭುವಿಯ ಭೇದಭ್ರಾಂತಿನಾಶಕ
ಶಿವನಯೋಗದ ಮರ್ಮಪೇಳುವ
ನವನು ದಿವ್ಯಜ್ಞಾನಿ ಮೇಣಾಚಾರ್ಯವರ್ಯನಿಹ ॥ ೧೦ ॥

ಪೂರ್ವಪಕ್ಷದ ಭೇದಕಲ್ಪನೆ
ಯಾರಭೇದವ ಮಾಡಿತೋರುವ
ನಾರು ಪರಶಿವಯೋಗ ಸಿದ್ಧಾಂತವನು ಸಾರುವನೋ ।
ಯಾರ ನಿರ್ಮಲ ಬೋಧವಚನದ
ಧಾರೆ ಸಂಶಯವೆಂಬ ಕಾಡನು
ಭಾರಿ ಕೊಡಲಿಯತೆರದಿ ಕೊಚ್ಚುವುದಾತ ವರಗುರುವು ॥ ೧೧ ॥

ಯಾರ ವರವುಪದೇಶದರ್ಪಣ
ಚಾರುಮೋಕ್ಷದ ಲಕ್ಷ್ಮಿಬಿಂಬವ
ತೋರಿಕೊಡುವುದೊ ಧೀರನಾಗುರು ಭವದ ತಾರಕನು ।
ವೀರ ವರಗುರು ಶಿಷ್ಯಹೃದಯದೆ
ಚಾರುರೂಪದೊಳಾತ್ಮಚಿತ್ರವ
ತೋರಿ ನಿಜದರಿವಿಂದ ಬೆಳಗುವನವಗೆ ಸಮನಾರು ॥ ೧೨ ॥

ವರಶಿವಾದ್ವೈತವನು ಬೋಧಿಸಿ
ನರರ ಭವರೋಗವನು ನೀಗುವ
ಪರಮ ದೇಶಿಕನಾರ್ಗೆ ಲಭಿಸುವನಯ್ಯ ಜಗದೊಳಗೆ !
ಗುರುವು ಕರುಣಾಮೃತವ ನೀಂಟಲು
ಪರಮ ಶಿವಕೃಪೆ ಪಡೆದುಬಂದವ
ನಿರಲುಬೇಕೈ ಗುರುವು ಸಾಕ್ಷಾತ್ ಶಿವನರೂಪಲ್ತೆ ॥ ೧೩ ॥

## (೩) ಜ್ಞಾನಗುರುಸ್ಥಲಂ

ವೇದವೇದಾಂತಾಗಮಂಗಳ
ಬೋಧಗೊಡುವವ ಶಿಷ್ಯಶಂಕಾ
ಬಾಧೆದೂರನು ಗುರುವು ಸಂಯಕ್‌ಜ್ಞಾನಿಯೆಂದೆನಿಪ ।
ಬೋಧೆಗೊಡಲವ ಬಲ್ಲಭೇದಾ
ಭೇಧೆಯೋಗ ಸ್ವಾನುಭವದೋ
ಳಾದಿಗಾದಿಯ ಬೋಧನೂಲದ ಪರಮತತ್ತ್ವವನು ॥ ೧೪ ॥

ವರನಿರಂಜನ ನಿರ್ಗುಣಪ್ರಭು
ನಿರವಯವನಾವರ ಚಿದಂಬರ
ನಿರವನರಿವಿನ ಯುಕ್ತವಚನಾಮೃತದೆ ಬೋಧಿಸುತ ।
ಶರಣಶಿಷ್ಯನೊಳಿದೆಯ ಕನ್ನಡಿ
ಯೊರಸಿ ಬೆಳಗಲ್ ಜ್ಞಾನಿವಾಣಿಯ
ಮರೆಯಲಡಗಿಹ ಪರಮತತ್ತ್ವವು ಕರತಲಾಮಲಕಂ ॥ ೧೫ ॥

ಬೆಳಗಿ ಹೊಳೆಯುವ ಗಗನಚಂದ್ರಮ
ಕಳೆಯ ಬೀರುತ ಕತ್ತಲೋಡಿಪ
ಪಳಿಯುತಳಿಯುತ ಕತ್ತಲಡಕಿಪ ಚಿರಕಲಂಕಿತನು ।
ಅಳಿವುಬೆಳವಿನ ಹಾನಿವೃದ್ಧಿಯ
ಕಳೆಯುಕತ್ತಲೆಯೆಂಬುದಿಲ್ಲದೆ
ಹೊಳೆವ ವರಗುರು ಪೂರ್ಣಚಂದ್ರನು ನಿಷ್ಕಲಂಕಿತನು ॥ ೧೬ ॥

ಮಣಿವಿನಿರ್ಮಿತ ದೀಪಬೆಳಗ
ಲ್ಕಣಗುವುದು ಬಳಿಯಿದ್ದ ಕತ್ತಲೆ
ಚಣಕೆ ಸುತ್ತಲ ಕತ್ತಲಳಿಯುವುದರಿವಿನಾರತಿಗೇ |
ಕ್ಷಣದೊಳಜ್ಞಾನಾಂಧಕಾರವ
ಗಣಿಸದಡಗಿಪನಯ್ಯ ಗುರುವರ
ಮಣಿಯು ಹೊರಗನುಬೋಧ ವೊಳಹೊರಗೆಲ್ಲ ಬೆಳಗುವುದು ॥ ೧೭ ॥

ತ್ಯಾಗಯೋಗಗಳೊಡನೆ ನಡೆಯಿಸಿ
ಭೋಗಮೋಕ್ಷವನಿರದೆನೀಡುವ
ನಾಗಿ ಜಗದೋದ್ಧಾರಿ ಪರಮಾಚಾರ್ಯ ವರಗುರುವು |
ಆಗುಹೋಗಿನ ಭಯವಿದೂರರು
ರಾಗವಿರಹಿತರಾಗೆ ಶಿಷ್ಯರಿ
ಗಾಗಿ ಪರಮಜ್ಞಾನ ಕರುಣಿಪ ಗುರುವು ಶಿವನಲ್ತೆ ॥ ೧೮ ॥

ಬಾನಿನೊಳುತಾ ಮೂಡಿಬರುತಲ
ದೇನು ಕವಿದಿಹ ಕತ್ತಲೋಡದೆ
ತಾನು ಕಣಿವೆಗು ತಿಂಗಳೋಡದೆ ಚಾರುಚಂದ್ರಮನಿಂ |
ಜ್ಞಾನಸಾಗರವನ್ನೆ ವರ್ಧಿಪ
ನೂನಚಂದ್ರಮನಯ್ಯ ಗುರುವರ
ತಾನು ಸಂಸಾರಾಂಧಕಾರವನಿರದೆ ಪರಿಹರಿಪ ॥ ೧೯ ॥

ರವಿಯು ಹೊರಗಿನ ಕತ್ತಲನು ಕಳೆ
ಯುವನು ಗುರುವುಮ್ಮೊಳಹೊರಗಿನಾ
ಕವಿದಕಗ್ಗತ್ತಲೆಯ ಕಳೆಯುವನಾದಕಾರಣವು |
ಅವನಿಯೊಳ್ ಥಳಥಳಿಪ ರವಿಯಿಂ
ಶಿವನರೂಪದ ಗುರುರವಿಯು ತಾ
ಭುವಿಗೆ ವಂದ್ಯನು ದೇಶಿಕೇಂದ್ರನುಮೆಂದುದಾಗಮವು ॥ ೨೦ ॥

ಗುರುಕಟಾಕ್ಷವು ಲೇಶಮಾತ್ರಂ
ಸ್ಫುರಿಸಲೀವುದು ದೈವಯೋಗವ
ನರರಿ ಮೌನ, ಧ್ಯಾನ, ಧಾರಣ, ಬೇಕೆಯಿಲ್ಲದಕೆ ।
ವರದಗುರುಕೃಪೆಯಾಗಲಾಕ್ಷಣ
ಇರದೆ ಜೀವಿಯು ಮುಕ್ತನಾಗುವ
ಪರಮಶಾಂಭವ ವೇಧವಿಂದಿದಕೆಂದುದಾಗಮವು ॥ ೨೧ ॥

ಜ್ಞಾನ ಗುರುವರ ಶಿಷ್ಯನೆದೆಯೊಳು
ಜ್ಞಾನನಿರ್ಮಲವನ್ನು ಬೆಳಗಲು
ಜ್ಞಾನಬಲದಿಂ ಜೀವಿ ಜೀವನ್ಮುಕ್ತನಾಗುವನು ।
ಜ್ಞಾನ ನಿರ್ಮಲ ಶಿವನಭಾವದೆ
ತಾನು ತನ್ನೊಳು ಗೈವನದರಿಂ
ಜ್ಞಾನಸಾಗರನೆಂದು ಗುರುವನು ಕೀರ್ತಿಸುತ್ತಿಹರು ॥ ೨೨ ॥

## (೪) ಕ್ರಿಯಾಲಿಂಗ ಸ್ಥಲಂ

ಜ್ಞಾನಗುರುವರ ಶಿಷ್ಯನಂಗದೆ
ಮೌನಲಿಂಗವ ಮೂರ್ತಿಗೊಳಿಸಲು
ಲೀನವಾಗುವುವಯ್ಯ ಸರ್ವಕ್ರಿಯೆಯು ಲಿಂಗದೊಳು ।
ತಾನುತಾನಾದಿಷ್ಟಲಿಂಗವು
ತಾನು ತಾನಾರೆಂಬುದರಿಯಲು
ತಾನು ಕಾರಣವೆಂದು ಸರ್ವಾಗಮವು ಸಾರುವವು ॥ ೨೩ ॥

ಜಂಗಮವು ಶಿವಲಿಂಗರೂಪವು
ಲಿಂಗ ನಿತ್ಯಾನಂದರೂಪವು
ಲಿಂಗದೊಳು ಸದ್ರೂಪಲಿಂಗವು ಸರ್ವಸಿದ್ಧಿದವು ।
ಲಿಂಗವೇ ಚಿಜ್ಜ್ಯೋತಿರೂಪವು
ಮಂಗಳಾತ್ಮಂ ಬ್ರಹ್ಮ ಕೇವಲ
ನಂಗಸಂಗತ ಲಿಂಗಪೂಜೆಯು ಕಾಮಿತಾರ್ಥದವು ॥ ೨೪ ॥

ಯಜಿಸಿ ಯೋಗಾರೂಢ ನಿಷ್ಠಂ
ತ್ಯಜಿಸಿ ಕರ್ಮಾಸಕ್ತಿಯೆಲ್ಲವ
ಭಜಿಸಿ ಪೂಜಿಸಿ ಲಿಂಗನಿಷ್ಠಾವಂತನಾಗಿಹನು ।
ನಿಜದೆ ಪೂಜಿಸುತ್ತೈದೆ ಯೀಕ್ಷಿಸೆ
ಸಜಲನೇತ್ರದೊಳಾಲಿ ನಿಲ್ಲಲು
ಭುಜಗಹೊತ್ತೀವಿಶ್ವವಡಗಿಹ ಲಿಂಗವೇ ಶ್ರೇಷ್ಠ ॥ ೧೭ ॥

ಸಕಲ ಯಜ್ಞಾಚರಣದ್ವೈತರು
ವಖಿಲಫಲಗಳು ಲಿಂಗಪೂಜೆಯ
ಸುಖದೊಳೊಂದಂಶಕ್ಕೆ ಸಮನಿರದೆಂದು ಪೂಜುವುದು ।
ಸಕಲ ನಿಷ್ಕಲದಿಷ್ಟಲಿಂಗವ
ನಖಿಲ ಸತ್ಫಲ ಬಯಸಿ ಭಕ್ತರು
ಸಕಲ ಕಾಮನೆಯಳಿದು ಸಿದ್ಧರು ನಿತ್ಯವರ್ಚಿಪರು ॥ ೧೮ ॥

ಅಗ್ನಿಹೋತ್ರದೆ ಯಜ್ಞತಪದೊಳು
ಮಗ್ನರಾದರದೇನು ಫಲವೈ
ಮಗ್ನರಾಗಿರಿ ಲಿಂಗಪೂಜೆಯು ಸರ್ವಸಿದ್ಧಿಕರ ।
ಅಗ್ನಿಹೋತ್ರದೆ ಯಜ್ಞತಪದೊಳು
ತಜ್ಞರಾದರೆ ಜೀವಕಾಲವ
ನಗ್ನಿಹೋಮವು ಕಾಲಗರ್ಭವು ನುಂಗಿನೊಣೆಯುವವು ॥ ೧೯ ॥

ಜಗದ ಸೃಷ್ಟಿ ಸ್ಥಿತಿ ಲಯಂಗಳು
ಯುಗಯುಗಂಗಳೊಳಿರದೆಯುರುಳಿಹ
ವಗಣಿತಂ ಮಹಿಮಾಂತಲಿಂಗದ ಪರಮಕೃಪೆಯಿಂದ ।
ಜಗದ ಕರ್ತಂ ಬ್ರಹ್ಮದೇವರು
ಜಗದ ರಕ್ಷಕ ವಿಷ್ಣುದೇವರು
ಜಗದ ಭಕ್ಷಕ ರುದ್ರದೇವರು ಲಿಂಗದಡಗಿಹರು ॥ ೨೦ ॥

## (೫) ಭಾವಲಿಂಗ ಸ್ಥಲಂ
## (ಪ್ರಾಣಲಿಂಗ ಸ್ಥಲ)

ಎಂತು ಲಯವ್ರೋ ಕ್ರಿಯೆಯು ಲಿಂಗದೊ
ಳಂತೆ ಭಾವವು ಲಯವನೈದಲ
ನಂತಶಾಂತನು 'ಭಾವಲಿಂಗಸ್ಥಲಿಯು'ಯೆಂದೆನಿಪ ।
ಶಂತಮಯವಹ ಲಿಂಗಭಾವದೊ
ಳಿಂತು ಭಾವನೆಯಲ್ಲವರ್ಪಿಸೆ
ನಂತಶಾಂತಿಯ ಪಡೆಯಿರೆನುವರು ದೇಶಿಕೋತ್ತಮರು ॥ ೯ ॥

ಭಾವದಿಂದಲೆ ದೇವಶಿವನ
ನ್ನೋವಿ ಪಡೆಯಲು ಸಾಧ್ಯವದರಿಂ
ಭಾವಪೂಜೆಯದುತ್ತಮೋತ್ತಮಭಾವದೀಸ್ಥಲಿಗೆ ।
ದೇವಶಿವತಾ ನಿತ್ಯ, ಪೂರ್ಣನು,
ದೇವದೇವನು, ನಿರ್ಗುಣೋತ್ತಮ
ಭಾವಕಲ್ಲದೆ ಬಾಹ್ಯಪೂಜೆಯೊಳೆಂತೊಲಿವನಯ್ಯ ॥ ೧೦ ॥

ಪರಮಲಿಂಗವಖಂಡರೂಪವು
ಶರಣ ಪರಮಾನಂದರೂಪಮ
ದರಿತನರಿವಿಗೆ ಬೋಧರೂಪವು ಭಕ್ತರಾಶ್ರಯವು ।
ಕೊರೆದ ಮೃಣ್ಮಯಲಿಂಗಕಿಂತಲು
ಶರಣ ಹೃದಯದಿ ಹೊಳೆದು ಬೆಳಗುವ
ಪರಮಪಾವನ ಭಾವಲಿಂಗಮದುತ್ತಮೋತ್ತಮವು ॥ ೧೧ ॥

ಬಳಿಕ ಬಾಹ್ಯದ ಲಿಂಗಪೂಜೆಯ
ನುಳಿದು ಹೃದಯದೆ ಭಾವಲಿಂಗವು
ಹೊಳೆಯೆ ಪೂಜಲು ಭಾವಲಿಂಗಸ್ಥಲಿಯು ತಾನೆನಿಪ ।

ನಳಿನ ಹೃದಯಾಧಾರಮೂಲದೆ
ಬೆಳಗೆ ನಾಶಿಕದಗ್ರಭಾಗದೆ
ಹೊಳೆವ ನಿರ್ಮಲ ಭಾವಲಿಂಗವ ಪೂಜು ಶಿವಯೋಗಿ ॥ ೩೨ ॥

ಜ್ಯೋತಿಯನು ತಾ ಸ್ವಾನುಭಾವದೊಳು
ಜ್ಯೋತಿಲಿಂಗದೆ ಕಂಡುಕೊಂಡವ
ನೋತುಪೂಜುವ ಭಾವಲಿಂಗವ ಭಾವಪುಷ್ಪದೊಳು ।
ಏತಕವ ಶಿಲೆಮಣ್ಣು ಮರಕೃತ
ಕೋತು ಕರ್ಮದ ಲಿಂಗಪೂಜುವ
ಜಾತಿನೀತಿಯ ನಿತ್ಯವಿಧಿಗಳು ಗೌಣಭಕ್ತ ಕೃತಿ ॥ ೩೩ ॥

## (೬) ಜ್ಞಾನಲಿಂಗಸ್ಥಲಂ

## (ತೃಪ್ತಿಲಿಂಗಸ್ಥಲ)

ಭಾವಜನ್ಯ ಜ್ಞಾನಮೆಲ್ಲವು
ಭಾವಲಿಂಗದೆ ಲಯವನೈದುವು
ದಾವಲಿಂಗಂ ಜ್ಞಾನಕಾಶ್ರಯಮೆಂದು ತಿಳಿಯುವನೋ ।
ದೇವಮೂರ್ತಿತ್ರಯರೊಳಾಶ್ರಿತ
ದೇವ ಸತ್ತ್ವರಜಸ್ತಮೋಗುಣ
ಭಾವಕಾಚಿನದರಿತ ಯೋಗಿಯು ಜ್ಞಾನಲಿಂಗರತ ॥ ೩೪ ॥

ಮಾಣದಿಷ್ಟದ ಲಿಂಗ ಪೂಜಿಸಿ
ಜಾಣ ಪಡೆವನು ಕಾಯಶುದ್ಧಿ
ಪ್ರಾಣಲಿಂಗವ ಪೂಜಿ ನಿರ್ಮಲಭಾವ ಪಡೆಯುವನು ।
ಜ್ಞಾನಲಿಂಗವನರ್ಚಿಪಾತಂ
ಜ್ಞಾನ ಕೇವಲಿ! ನಿತ್ಯತೃಪ್ತಂ
ಜ್ಞಾನಲಿಂಗನ ಪೂಜೆಯದರಿಂದುತ್ತಮೋತ್ತಮವು ॥ ೩೫ ॥

ಪರಮಭಾಸುರನಿಂಗೆ ಶಿವನಿಂ
ಗಿರುವ *ಚರಚಿರರೂಪವನಿತುಂ
ಬರಿಯ ಕಲ್ಪಿತಮಿರುವುದದರಿಂ 'ಜ್ಞಾನ'ಲಿಂಗಯ್ಯ।
ಅರಿವಿನಾಗರನಾದ ಶಿವನ
ನ್ನರಿತ ಪರಮಾನಂದ ಕೇವಲಿ
ಗಿರದೆ ಕರೆವರು ಬುಧರು 'ಪರಮಜ್ಞಾನಿ'ಯೆಂದೆನುತ ॥ ೩೬ ॥

ತೋರಿ ಬಾಹ್ಯದೊಳಿಷ್ಟಲಿಂಗವ
ಚಾರು ಸೂಕ್ಷ್ಮಪ್ರಾಣಲಿಂಗವ
ನಾರುಪೂಜಿಸನಾರುಚಿಂತಿಸ ಹೃದಯಮಾತ್ರದೊಳು।
ಯಾರುಜ್ಞಾನಂ ಪೂರ್ಣಲಿಂಗವ
ಸೇರಿ ಬೆರೆಯುತಲೊಂದುಗೂಡುವ
ಧೀರನವನೇ 'ಜ್ಞಾನಿ!' ವರಶಿವಯೋಗಿ ಮುಕ್ತಿಪದಿ ॥ ೩೭ ॥

## (೭) ಸ್ವಸ್ಥಲಂ

*ಸ್ವಾನುಭಾವಿಯ ಜ್ಞಾನಲಿಂಗನ
ಜ್ಞಾನಮದುವೇ ಜ್ಞಾನದೊಳು ಲಯ
ಮಾನವಾಗಲ್ಕವನುತಾ ಸ್ವಸ್ಥಲದ ಜಂಗಮನು।
ಜ್ಞಾನಲಿಂಗಾನಂದ ಜಂಗಮ
ತಾನೆ ಸಕಲಾಕಾರಕಾತ್ಮಂ
ಸ್ವಾನುಭಾವಿಯು ಮಾನಿಯೋತ್ತಮ! ನಿಷ್ಠಸಂತುಷ್ಟ ॥ ೩೮ ॥

---

*ಇಷ್ಟಲಿಂಗದಲ್ಲಿ=ಕ್ರಿಯೆ
ಪ್ರಾಣಲಿಂಗದಲ್ಲಿ=ಭಾವ
ಜ್ಞಾನಲಿಂಗದಲ್ಲಿ=ಅನುಭವ ಲಯ
ವಾಗಿರುತ್ತದೆ.

ಜ್ಞಾನಲಿಂಗದಲ್ಲಿ ಸ್ವಾನುಭವವನ್ನು ಲಯಗೊಳಿಸುವವನೆ "ಸ್ವಯಲಿಂಗ"

ವಿಷಯಮಮತಾರಹಿತ ನಿಜತನು
ವಿಷಯದೊಳಭಿಮಾನಶೂನ್ಯನು
ವಿಷಮ ಸಂಸಾರಕ್ಲೇಶದೂರನು ಬೇಡಿ ಭುಂಜಿಸನು
ವಿಷವಿದಮೃತವಿದೆಂದು ಗಣಿಸದೊ
ಳಸಮನಯನನತೆರದೆ ಸಮಮತಿ
ಯೆಸವ ಜೀವನ್ಮುಕ್ತಪದಯುತನಾಗಿ ಜಗದೊಳಗೆ ॥ ೩೯ ॥

ಭಸ್ಮಲೇಪಿತನೇಂದ್ರಿಯಂ ಜಯಿ
ತುಷ್ಟನಾತಂ ಪ್ರಾಪ್ತಮಾತ್ರದೊ
ಳಿಷ್ಟಭೇದವಕಾಣ ಲೋಕದೆ ತಿರುಕನರಸರೊಳು ।
ಸೃಷ್ಟಿಯೊಳೆಲ್ಲೆಲ್ಲು ಶಿವನಂ
ಸೃಷ್ಟಿಗೀಶನ ಕಂಡು ಪುಲುಕಿಪ
ನಿಷ್ಟಲಿಂಗಾನಂದ ಜಂಗಮನಿಂತು ಲೀನಾತ್ಮ ॥ ೪೦ ॥

ಜಂಗಮನು ಶಿವಯೋಗಸಿದ್ಧನು
ಲಿಂಗನೆನೆವನು ಲಿಂಗಮರಿವನು
ಲಿಂಗವಿತ್ತುದನುಂಡು ತಣಿದೇಕಾಂತದೊಳಿಹನು ।
ಲಿಂಗಪರಮನೊಳೈಕ್ಯರತನಿಗೆ
ತುಂಗಕರ್ಮಗಳಿಂತು ನಾಲ್ಕೇ
ಲಿಂಗದೊಳುಳಿದೆಲ್ಲಕರ್ಮವ ಶೂನ್ಯಗೈದಿಹನು ॥ ೪೧ ॥

## (೮) ಚರಸ್ಥಲಂ

ತನ್ನದೆಂಬಭಿಮಾನ ತುಳಿಯುತ
ಲಿನ್ನು ತನ್ನನ್ನರಿತ ಜಂಗಮ
ತನ್ನರಿವಿನಾನಂದದಾರತಿಬೆಳಗೆ ಸಂಚರಿಪ ।
ತನ್ನತಾನೇ ಬೆಳಗಬಲ್ಲವ
ಗಿನ್ನು ತಾನೆದುರಿಲ್ಲ ಜಗದೊಳು
ಚೆನ್ನಭಕ್ತರೊಳಿನ್ನು ಕೀರ್ತಿತ ಚರದ ಜಂಗಮನು ॥ ೪೨ ॥

ಸೋಮಶೇಖರನಂತೆ ಶಾಂತನು
ಕಾಮಸಂಹರನಂತೆ ದಾಂತನು
ಕಾಮ, ಮದ, ಮತ್ಸರವು ಲೋಭ ಕ್ರೋಧ ಮೋಹಗಳ |
ನಾಮಶೇಷದಿ ಸುಟ್ಟುಬಿಟ್ಟವ
ಸೌಮ್ಯ ಸಮತಾಬುದ್ಧಿಯೊಳು ತಾ
ಸ್ವಾಮಿಶಿವನೊಲು ಚರಿಪ ಜಗದೊಳು ಚರದ ಜಂಗಮನು || ೪೩ ||

ಹೀನವಿದು ಮೇಣ್ ಮುಖ್ಯಮಾದುದ
ನೇನನೊಂದರ ಚಿಂತೆ ಕಲ್ಪನೆ
ತಾನುಮಾಡದೆ ಸರ್ವಶಿವಮಯವೆಂದು ಸಂಚರಿಪ |
ತಾನು ಚರಿಸುತಲಿರುವನಿಲ್ಲದೆ
ತಾನು ತನ್ನನೆ ಕಾಣ್ಬನೆಲ್ಲುಂ
ಮಾನದಿಂದಪಮಾನದಿಂದಚಲಾಯನಾತ್ಮರತಿ || ೪೪ ||

ಚೆನ್ನ ಶಿವಕೃತ ತತ್ತ್ವದರಿವಿಂ
ದಿನ್ನು ತಣಿದಾನಂದ ಜಂಗಮ
ತನ್ನ ಲೋಕಾತೀತಗುಣದಿಂ ಜಗವನೆಚ್ಚರಿಪ ||
ತನ್ನನೋಡುವ ಜಗದ ಕಣ್ಣಿಗೆ
ಮುನ್ನಿನಂತೆಯೆ ತೋರ್ಪನಾದರು
ಮುನ್ನತೋನ್ನತವನ್ನು ಗೈದಚ್ಚರಿಯನುಕ್ಕಿಸುವ || ೪೫ ||

ಸಮತೆ ಸಮನಿಸುತಾದ ಯೋಗಿ
ದ್ವಿಮುಖಜಗದೊಳು ಧರ್ಮಕರ್ಮದೆ
ಸಮಯವರ್ತಿಗಳಾದ ಮಾನವರಂತೆ ವರ್ತಿಸನು |
ವಿಮುಖಚಿತ್ತನು ಹರಿವಿರಂಚಿಯ
ಸಮದ ಪದದೊಳಾತ್ಮರತಿಸುಖ
ದಮಿತ ಪರಮಾನಂದಸಾಗರದಲ್ಲಿ ಮುದಗೊಳುವ || ೪೬ ||

## (೯) ಪರಸ್ಥಲಂ

ತಾನೆತಾನಾಗಿರುವ ಚರವರ
ತಾನು ತನ್ನಂ ತಿಳಿದಮೇಲಾ
ಜ್ಞಾನಕಿತರೇತರದುಮಿಲ್ಲ ಶ್ರೇಷ್ಠಮೆಂದಿಹನು
ಜ್ಞಾನ ಪರತರಲಿಂಗಮಿಹುದೈ
ಜ್ಞಾನಲಿಂಗವನರಿಯಲಾತಂ
ಜ್ಞಾನಿ "ಪರಜಂಗಮ"ನುಯೆಂದೇ ಕೀರ್ತಿಗೊಳ್ಳುವನು ॥ ೪೭ ॥

ಸರ್ವತಂತ್ರದಿ ತಾ ಸ್ವತಂತ್ರನು
ಸರ್ವಕೃತದೊಳ್ ಸ್ವೇಚ್ಛವರ್ತಿಯು
ಸರ್ವಜಗದೊಳ್ ಸ್ವಪರಮೆಂದೇನಾತಭಾವಿಸನು ।
ಸರ್ವದೇವರದೇವ ಶಿವನೊಲು
ಸರ್ವಜಗಜಾಲಂ ತೃಣೀಕೃತ
ನೊರ್ವಪರಶಿವಯೋಗಿಯೊತ್ತಮ ಪರಮಪೂಜಿತನು ॥ ೪೮ ॥

ವರ್ಣದಾಶ್ರಮ ಧರ್ಮಮಾರ್ಗದೆ
ವರ್ಣಿಸಿಹರ್ಕೈ ಪ್ರಾಕೃತಂಗಳ
ವರ್ಣನೆಗೆ ತಾ ನಿಲುಕನಾಶಿವನೊತ್ತಮೊತ್ತಮನು ।
ವರ್ಣರೂಪಮದೊಂದುಮಿಲ್ಲದ
ವರ್ಣನೀಯನ ಶಿವನನಾತ್ಮದೆ
ವರ್ಣದಾಶ್ರಮ ಧರ್ಮವಿಮುಖಂ ಯೋಗಿ ಕಾಣುವನು ॥ ೪೯ ॥

ಜಗಕತೀತನು ಜಗದಪತಿ ಶಿವ
ಬಗೆಗೆ ನಿಲುಕದ ಚಿತ್ಸ್ವರೂಪನು
ಜಗದ ಭೇದಾಭೇದಮಾಗಲು ಯೋಗಿ ಶಿವನಹನು ।
ನಿಗಮವಾಗಮ ವೇದ ಬೋಧಕೆ
ಸಿಗದ ಶಿವನನು ಯೋಗಿ ಕಾಣ್ಬನು
ಬಗೆವತಾನವನೆಂದೆ ! ವಿಹರಿಪ ಜಗದಿ ಮುಕ್ತಾತ್ಮ ॥ ೫೦ ॥

ಕರ್ಮಬದ್ಧರು ದೇವಜೀವರು
ಕರ್ಮಮುಕ್ತನು ಯೋಗಿಯೋತ್ತಮ
ಕರ್ಮಬದ್ಧರು ಕರ್ಮಮುಕ್ತಗೆ ಮಾಡ್ಪುದೇನನ್ನು ? ।
ಕರ್ಮಮುಕ್ತನು ಯೋಗಿ ಚರವರ
ನಿರ್ಮಲಾತ್ಮಂ ಸ್ಪರ್ಶಮಾತ್ರದೆ
ಕರ್ಮಬದ್ಧರ ಪಾಶ ಬಿಡಿಸುವ ಜಗದೆ ಸಂಚರಿಸಿ ॥ ೫೧ ॥

ನಿತ್ಯನಿರ್ಮಲ ನಿರುಪಮಾಧಿಕ
ಸತ್ತ್ವಚಿತ್ತಾನಂದದಾಯಕ
ಸತ್ಯವಸ್ತುವ ಬೆರಸಿ ಬೇರಿರದಾತ ಶಿವಯೋಗಿ ।
ಕಿತ್ತು ವರ್ಣದ ಧರ್ಮಶೃಂಖಲೆ
ಯಿತ್ತು ಜಗತಿಗೆ ಪರಮಸಂಪದ
ನಿತ್ಯಜೀವನ್ಮುಕ್ತಪದದೊಳು ಯೋಗಿ ಶೋಭಿಪನು ॥ ೫೨ ॥

ಇಂತು ರೇಣುಕಗೀತೆ ಬೋಧಿಪು
ದೆಂತು ಲಿಂಗಸ್ಥಲದ ಮೊದಲೊಳು
ನಿಂತ ಭಕ್ತಸ್ಥಲಿಯು ದೀಕ್ಷಾಗುರುವಿನಾಸ್ಥಲವು ।
ಅಂತ್ಯಗೊಳೆ ಪರಜಂಗಮಸ್ಥಲ
ಮೆಂತುತಾನೇ ಶಿವನು ತಾಶಿವ
ನಂತೆ ಜಗವುದ್ಧರಿಪನೆಂಬೀ ಸಂಧಿ ಸಂಪೂರ್ಣಂ ॥ ೫೩ ॥

ಹದಿನೈದನೆಯ ಸಂಧಿ ಸಂಪೂರ್ಣಂ.

ಸಂಧಿ ಹದಿನಾರಕ್ಕಂ ಪದನಾರು ನೂರೈವತ್ನಾಲ್ಕಕ್ಕಂ

ಮಂಗಳಮಸ್ತು.

## (೯) ಪರಸ್ಥಲಂ

ತಾನೆತಾನಾಗಿರುವ ಚರವರ
ತಾನು ತನ್ನಂ ತಿಳಿದಮೇಲಾ
ಜ್ಞಾನಕಿತರೇತರದುಮಿಲ್ಲ ಶ್ರೇಷ್ಠಮೆಂದಿಹನು
ಜ್ಞಾನ ಪರತರಲಿಂಗಮಿಹುದೈ
ಜ್ಞಾನಲಿಂಗವನರಿಯಲಾತಂ
ಜ್ಞಾನಿ "ಪರಜಂಗಮ"ನುಯೆಂದೇ ಕೀರ್ತಿಗೊಳ್ಳುವನು ॥ ೪೭ ॥

ಸರ್ವತಂತ್ರದಿ ತಾ ಸ್ವತಂತ್ರನು
ಸರ್ವಕೃತದೋಳ್ ಸ್ವೇಚ್ಛವರ್ತಿಯು
ಸರ್ವಜಗದೋಳ್ ಸ್ವಪರಮೆಂದೇನಾತಭಾವಿಸನು ।
ಸರ್ವದೇವರದೇವ ಶಿವನೊಲು
ಸರ್ವಜಗಜಾಲಂ ತೃಣೀಕೃತ
ನೊರ್ವಪರಶಿವಯೋಗಿಯೊತ್ತಮ ಪರಮಪೂಜಿತನು ॥ ೪೮ ॥

ವರ್ಣದಾಶ್ರಮ ಧರ್ಮಮಾರ್ಗದೆ
ವರ್ಣಿಸಿಹರೈ ಪ್ರಾಕೃತಂಗಳ
ವರ್ಣನೆಗೆ ತಾ ನಿಲುಕನಾಶಿವನೋತ್ತಮೋತ್ತಮನು ।
ವರ್ಣರೂಪಮದೊಂದುಮಿಲ್ಲದ
ವರ್ಣನೀಯನ ಶಿವನನಾತ್ಮದೆ
ವರ್ಣದಾಶ್ರಮ ಧರ್ಮವಿಮುಖಂ ಯೋಗಿ ಕಾಣುವನು ॥ ೪೯ ॥

ಜಗಕತೀತನು ಜಗದಪತಿ ಶಿವ
ಬಗೆಗೆ ನಿಲುಕದ ಚಿತ್ಸ್ವರೂಪನು
ಜಗದ ಭೇದಾಭೇದಮಾಗಲು ಯೋಗಿ ಶಿವನಹನು ।
ನಿಗಮವಾಗಮ ವೇದ ಬೋಧಕೆ
ಸಿಗದ ಶಿವನನು ಯೋಗಿ ಕಾಣ್ಬನು
ಬಗೆವತಾನವನೆಂದೆ ! ವಿಹರಿಪ ಜಗದಿ ಮುಕ್ತಾತ್ಮ ॥ ೫೦ ॥

ಕರ್ಮಬದ್ಧರು ದೇವಜೀವರು
ಕರ್ಮಮುಕ್ತನು ಯೋಗಿಯೋತ್ತಮ
ಕರ್ಮಬದ್ಧರು ಕರ್ಮಮುಕ್ತಗೆ ಮಾಡ್ಪುದೇನನ್ನ ? |
ಕರ್ಮಮುಕ್ತನು ಯೋಗಿ ಚರವರ
ನಿರ್ಮಲಾತ್ಮಂ ಸ್ಪರ್ಶಮಾತ್ರದೆ
ಕರ್ಮಬದ್ಧರ ಪಾಶ ಬಿಡಿಸುವ ಜಗದೆ ಸಂಚರಿಸಿ ॥ ೫೧ ॥

ನಿತ್ಯನಿರ್ಮಲ ನಿರುಪಮಾಧಿಕ
ಸತ್ತ್ವಚಿತ್ತಾನಂದದಾಯಕ
ಸತ್ಯವಸ್ತುವ ಬೆರಸಿ ಬೇರಿರದಾತ ಶಿವಯೋಗಿ |
ಕಿತ್ತು ವರ್ಣದ ಧರ್ಮಶೃಂಖಲೆ
ಯಿತ್ತು ಜಗತಿಗೆ ಪರಮಸಂಪದ
ನಿತ್ಯಜೀವನ್ಮುಕ್ತಪದದೊಳು ಯೋಗಿ ಶೋಭಿಪನು ॥ ೫೨ ॥

ಇಂತು ರೇಣುಕಗೀತೆ ಬೋಧಿಪು
ದೆಂತು ಲಿಂಗಸ್ಥಲದ ಮೊದಲೊಳು
ನಿಂತ ಭಕ್ತಸ್ಥಲಿಯು ದೀಕ್ಷಾಗುರುವಿನಾಸ್ಥಲವು |
ಅಂತ್ಯಗೊಳೆ ಪರಜಂಗಮಸ್ಥಲ
ಮೆಂತುತಾನೇ ಶಿವನು ತಾಶಿವ
ನಂತೆ ಜಗವುದ್ಧರಿಪನೆಂಬೀ ಸಂಧಿ ಸಂಪೂರ್ಣಂ ॥ ೫೩ ॥

ಹದಿನೈದನೆಯ ಸಂಧಿ ಸಂಪೂರ್ಣಂ.

ಸಂಧಿ ಹದಿನಾರಕ್ಕಂ ಪದನಾರು ನೂರೈವತ್ನಾಲ್ಕಕ್ಕಂ

ಮಂಗಳಮಸ್ತು.

# ಹದಿನಾರನೆಯ ಸಂಧಿ

## ಮಹೇಶ್ವರ ಸ್ಥಲಂ

ಸೂಚನೆ:— ಪರಮಮಂಗಳ ಲಿಂಗಮೂರುತಿ
ಕರುಣದೋದಿಸಿ ಬೋಧಿಸಿದರ್ಕೆ
ಪರಮಮಾಹೇಶ್ವರನ ಲಿಂಗಸ್ಥಲದ ವಿವರವನು ॥

ಲಿಂಗಭಕ್ತಸ್ಥಲದೊಳಾಶ್ರಯಿ
ಮಂಗಳಾತ್ಮಕಮಾದ ನವವಿಧ
ತುಂಗಮಹಿಮೆಯನರಿತೆನೈ ತವಕರುಣ ಬೋಧೆಯೊಳು ।
ಲಿಂಗಸಂಭವ ಗುರುಗಣೇಶ್ವರ
ಲಿಂಗಮಾಹೇಶ್ವರನನರಿಯುವ
ಮಂಗಳಾಕರ ಭೇದವಿವರಿಸಿ ಬೋಧೆ ನೀಡಯ್ಯ ॥ ೧ ॥

ಇಂತು ಬೇಡುವ ಮುನಿಯಗಸ್ತ್ಯನ
ಚಿಂತೆ ಚಿನ್ಮಯವಾಗುವಂದದೊ
ಳಂತರಂಗಕೆ ಬೆಳಗನೂಡಿದ ಮಧುರವಾಣಿಯೊಳು ।
ಸಂತ ಗುಣಮಣಿ ಶಾಂತಿಯೊಳು ಕೇ
ಳಿಂತು ಮಾಹೇಶ್ವರನು ಲಿಂಗವ
ನಂತರಂಗದೆ ಪೂಜ್ವನೆಂಬುವ ನವವಿಧಾನವನು ॥ ೨ ॥

[1]ಕ್ರಿಯೊಳಾಗಮ [2]ಭಾವದಾಗಮ
ತೋಯು [3]ಗಂಗಾಜ್ಞಾನದಾಗಮ
ವೀಯೆ [4]ಪರಮಸಕಾಯ [5]ವಿರತತರಕಾಯ [7]ಪರಕಾಯ ।
[6]ರಾಯಧರ್ಮಾಚಾರ ಶೀಲನೆ
ಮಾಯೊ [8]ಭಾವಾಚಾರ ಗಂಗಾ
ತೋಯುಮೇಣುಂ [9]ಜ್ಞಾನ ಗಂಗಾಚಾರ ತೋಯುದೊಳು ॥ ೩ ॥

---

[1] ಕ್ರಿಯಾಗಮಸ್ಥಲಂ [2] ಭಾವಾಗಮ ಸ್ಥಲಂ [3] ಜ್ಞಾನಾಗಮ ಸ್ಥಲಂ [4] ಸಕಾಯ ಸ್ಥಲಂ [5] ಅಕಾಯಸ್ಥಲಂ [7] ಪರಕಾಯ ಸ್ಥಲಂ [6] ಧರ್ಮಾಚಾರಸ್ಥಲಂ [8] ಭಾವಾಚಾರಸ್ಥಲಂ [9] ಜ್ಞಾನಾಚಾರ ಸ್ಥಲಂ

## (೧೧) ಕ್ರಿಯಾಗಮ ಸ್ಥಲಂ

ಪರದ ಜಂಗಮ ತಾನೆ ಸಾಕ್ಷಾತ್
ಕರುಣಶಂಕರನಂತೆ ಪೂಜ್ಯನು
ಗುರುವು ಪೂಜಾಕ್ರೀಯೆಯದರಿಂದಾಗಮೋಕ್ತವಿದು
ಉರಿಯದಗ್ನಿಯು ಯಜ್ಞಕುಂಡದೆ
ತಿರುವಿ ಮಂಥನಮಾಡದಿದ್ದೊಡೆ
ಯರುವಿನಾಗರ ಶಿವನು ಬೆಳಗನು ಲಿಂಗಪೂಜೆವಿನಃ ॥ ೪ ॥

ವಿಧಿಗೆ ಲೋಪವು ಬರದರೀತಿಯೆ
ಮುದದೊಳಾಶಿವನೊಲಿವಪರಿಯೊಳು
ಪದದೊಳಾಗಮ ಮಾನ್ಯಕರ್ಮವನಾಚರಿಸಬೇಕು ।
ವಿಧಿಯುತಾ ಶಿವನರಿವುಪಾಯವು
ಬುಧರು ಶಾಸ್ತ್ರೋಪರಿಯೊಳರ್ಚಿಸೆ
ಹೃದಯ ತನುಮನ ಮೀಸಲಿಡುವರು ಶಿವನಪೂಜೆಯೊಳು ॥ ೫ ॥

ಗುರುವು ಪೂಜುವಪರಿಯೆ ಪೂಜಿಸು
ಗುರುವಿನಾದೇಶವನು ಮಾನಿಸು
ಗುರುವು ಪೂಜೆಯು ಲಿಂಗಪೂಜೆಯು ಪರಮಶಿವಪೂಜೆ ।
ಪರಮಮಂಗಳ ಲಿಂಗಪೂಜೆಗೆ
ಸೆರುವಪೂಜಾವಸ್ತು ಸಂಗ್ರಹೆ
ನಿರತಮಾನಸಿ ಯೋಗಿಯಾಗುವನಿಲ್ಲಸಂದೇಹ ॥ ೬ ॥

ಕುರುಡ ಹೆಳವನತೆರದೊಳಿರುವವು
ಕರುಮಮತ್ತೀಜ್ಞಾನವದರಿಂ
ವಿರತಭಾವದೆ ಫಲವಬಯಸದೊಳವನನಾಚರಿಸು ।
ಪರಮಯೋಗಿಯು ಜ್ಞಾನಸಿದ್ಧರು
ನಿರತರೈ ನಿಷ್ಕಾಮಕರ್ಮದೆ
ತೊರೆದು ಫಲದಾಪೇಕ್ಷೆ ಸತತಂ ಕರ್ಮರತನಾಗು ॥ ೭ ॥

ಸರ್ವರೋಳಾಚಾರಶೀಲನೆ
ಸರ್ವಮಾನ್ಯನು ಮೇಣುಭೂಷಣ
ಸರ್ವನಿಂದಿತನಯ್ಯ ಆಚಾರ್ಶೀಲವಿಲ್ಲವನ ।
ಸರ್ವತತ್ತ್ವಾತೀತ ಪರಶಿವ
ಸರ್ವರಂತರ್ಯಾಮಿಯದರಿಂ
ಸರ್ವಯತ್ನದೊಳರಿತು ಪೂಜಿಸು ದೇಹವಿರುವನಕ ॥ ೮ ॥

## (೧೧) ಭಾವಾಗಮ ಸ್ಥಲಂ

ಜ್ಞಾನಯೋಗಿಯ ಭಾವಚಿಹ್ನಗ
ಳೇನುಮಿರುತಿಹವೆಲ್ಲ ಭುವಿಯೊಳು
ಮಾನವೋದ್ಧಾರಾರ್ಥಮಿರುವವು ಮುಕ್ತಿಕಾರಣಕೆ ।
ನಾನು ಶಿವನಿಹನೆಂಬ ಭಾವವು
ತಾನುಕಾರಣ ಶಿವನ ಬೆರೆಯಲು
ಜ್ಞಾನಕೇವಲಿಯಲ್ಲ ಮೇಣಾಚಾರಕೇವಲಿಯು ॥ ೯ ॥

ಜ್ಞಾನ ತಿಳಿವುದು ವಸ್ತುವಿವರಂ
ಧ್ಯಾನಮಾಪರವಸ್ತುಭಾವನ
ವೇನುಮದನೇ ಗಳಿಸಿಕೊಡುವುದು ಶಿವನ ಭಾವಿಪಗೆ ।
ಜ್ಞಾನಿಯದರಿಂದೊಳಗುಹೊರಗಿ
ನ್ನೇನುಬಿಡದೊಲು ತುಂಬಿತುಳುಕುವ
ನೂನಪರಮಾನಂದ ಪಡೆಯಲ್ ಧ್ಯಾನರತನಯ್ಯ ॥ ೧೦ ॥

ಮತಿಗೆ ಕೊಡದಿರಲರ್ಥವಾಣಿಯೆ ?
ಪತಿವಿಹೀನೆಯು ಸತಿ ಸುಶೀಲೆಯೆ ?
ಶ್ರುತಿಯ ಸಮ್ಮತಮಿರದೊಳರಿವುಂ ಜ್ಞಾನಮೆನ್ನಿಪುದೆ ? ।
ಪತಿತಪಾವನ ಶಿವನೊಳೊಲುಮೆಯು
ಸತತವುಂ ಭಾವಾತ್ಮಪೂಜಾ
ರತನದಲ್ಲದಗೆಂತು ಸಿದ್ಧಿಪುದಯ್ಯ ಜಗದೊಳಗೆ ॥ ೧೧ ॥

ದೃಷ್ಟಿಹೀನನಗೆ ಸೃಷ್ಟಿಸೊಬಗಿನೊ
ಳೆಷ್ಟುವೈವಿಧವಿದ್ದರೇನೈ
ನಿಷ್ಠೆಯಿರದಿರಲಿಷ್ಟಸಿದ್ಧಿಯ ಪಡೆಯಲೆಂತಳವು ? ।
ಸೃಷ್ಟಿಯಂತರ್ಯಾಮಿ ಶಂಕರ
ನಷ್ಟಭಾವದ ಬರಡುಯೋಗದೊ
ಳೆಷ್ಟುಮಾತ್ರಕು ನೋಡೆ ಸಿಕ್ಕನು ಭಾವಿತಾತ್ಮನವ ॥ ೧೨ ॥

ಭಾವಶುದ್ಧಿ ಧ್ಯಾನಪೂಜೆಗೆ
ದೇವದೇವಂ ಶಿವನೆಯೊಲಿಯುವ
ಭಾವಹೀನನ ಭವ್ಯಪೂಜೆ ವ್ಯರ್ಥಮಾಗುವುದು ।
ಭಾವ ಭರಿಸಲ್ ಭ್ರಮರ, ಕೀಟದ
ಭಾವದಂತೆಯೆ ರೂಪತಾಳ್ವುದು
ಭಾವತುಂಬಲು ಶಿವನು ; ಭಾವಿಪ ತಾನೆ ಶಿವನಹನು ॥ ೧೩ ॥

ಧ್ಯಾನಸುಲಭನೆ ? ನಿಷ್ಕಲಂಕನು
ತಾನಗೋಚರರೂಪ ವಿರಹಿತ
ಮೌನಿಮನವಂ ಮೀರಿನಿಂತವ ಮಂಗಳಾಕರನು ।
ತಾನೆತಾನಾಗಿರುವ ಶಿವನಂ
ಧ್ಯಾನಮಾಡಲ್ಕಾಗದಿರ್ದೊಡೆ
ಮೌನಭಾವದೆ ಶಿವವಿಭೂತಿಯನಾದರುಂ ನೆನೆಯೋ ॥ ೧೪ ॥

## (೧೨) ಜ್ಞಾನಾಗಮ ಸ್ಥಲಂ

ಭಾವನಾಗಮಯೋಗಿವರ್ಯಂ
ಗಾವುದರಿವಿನಕುರುಹುಮುಂಟಾ
ಶೈವಜ್ಞಾನವು ತಾನುಕಾರಣ ಮೋಕ್ಷ ಚಿರಸುಖಕೆ ।
ಶೈವಜ್ಞಾನವು ಭವದಿ ಬಂಧಿತ
ದೇವಮಾನವರಾದಿ ಮೋಕ್ಷಕೆ
ದೈವಯೋಗದೊಳಿಳಿದು ಬೆರೆತಾ ಜ್ಞಾನದಾಗಮವು ॥ ೧೫ ॥

ಭಾವಕೇವಲ ಕರ್ಮಕೇವಲ
ಯಾವುದಿಲ್ಲವು ಮೋಕ್ಷಫಲವನು
ಭಾವಕರ್ಮದೆ ಮಿಳಿತಗೊಳ್ಳಲು ಜ್ಞಾನ ಫಲಿಸುವುದು ।
ಯಾವನಾಗಲಿ ಕರ್ಮಮಾತ್ರದೆ
ಜೀವಕೋಟಿಯನೆತ್ತಿಬಂದರು
ಸಾವುಬದುಕಿನ ಚಕ್ರಗತಿಯಿಂ ಮುಕ್ತಿಯನು ಕಾಣ ॥ ೧೬ ॥

ಜ್ಞಾನಹೀನನ ಕರ್ಮಬಂಧಕೆ
ತಾನುಕಾರಣಮಿರುವುದದರಿಂ
ಜ್ಞಾನ-ಕರ್ಮದ ಮಧುರಮಿಲನದೆ ಮೋಕ್ಷಗಳಿಸಯ್ಯ ।
ಏನು ಕೇವಲ ಕರ್ಮಮಾತ್ರದೆ
ತಾನು ಫಲಿಸಿದ ಸಗ್ಗ ಚಿರಮೇ
ಜ್ಞಾನಪೂರ್ವಕ ಗೈವ ಕರ್ಮಕೆ ಮುಕ್ತಿ ಚಿರಸುಖವು ॥ ೧೭ ॥

ಶುದ್ಧಶಾಸ್ತ್ರದೊಳಿಂಗಿತಾರ್ಥವ
ಸಿದ್ಧ ಸದ್ಗುರುಬೋಧೆಯಿಂದರಿ
ತಿದ್ದು ಸತತಾಭ್ಯಾಸಮಾಡ್ಯೆ ಜ್ಞಾನರತನಾಗಿ ।
ಸಿದ್ಧಸಿದ್ಧಾಂತಮಿದು ತತ್ತ್ವದೆ
ಶುದ್ಧಮಾದುದು ವರಶಿವಾದ್ವೈತ
ತದ್ದೆ ಬೋಧೆಯು ತಿಳಿದುನಡೆಯಲು ಮುಕ್ತಿನೀಡುವುದು ॥ ೧೮ ॥

ಶಿವನರೂಪವು ಜಗವಿದೆಲ್ಲವು
ಶಿವನಹೊರತಿನ್ನಾವುದಿಲ್ಲವು
ಶಿವನೆ ನಾನಿಹನೆಂಬ ಭಾವಿಯು ಜ್ಞಾನಮುತ್ತಮವು ।
ಶಿವನು ಜಗದೊಳು ಜಗವು ಶಿವನೊಳು
ಶಿವನು ಜಗವುಂ ತಮಗೆತಾವೇ
ಶಿವನೆ ನಾನಿಹನೆಂಬ ಭಾವದೆ ಲಯವನೈದುವವು ॥ ೧೯ ॥

ಅಂಧಕಾಣನದೆಂತು ವಸ್ತುವು
ಮುಂದೆಯಿದ್ದುಂ ಜ್ಞಾನಹೀನನು
ಸಂದೆಯಾತ್ಮನು ಹೃದಯಸಂಸ್ಥಿತ ಶಿವನ ಮರೆತಿಹನು |
ಬಂಧಪರಿಹರ ಶಿವನ ದರ್ಶನ
ದಿಂದಮಾತ್ರವೆ ಸಾಧ್ಯಮಿಹುದೈ
ಬಂಧುಶಿವತಾ ಜ್ಞಾನನೇತ್ರಕೆಮಾತ್ರ ತೋರುವನು ॥ ೨೦ ॥

ದೀಪವಿಲ್ಲದ ಗೃಹದ ಕತ್ತಲ್
ವ್ಯಾಪಿಸಿಹುದೈ ಕುರುಡುಗವಿಸುತೆ
ದೀಪಹೊತ್ತಲು ಕತ್ತಲೋಡುತೆ ಮನೆಯು ಬೆಳಗುವುದು||
ಆ ಪರಾತ್ಪರವಸ್ತು ಹೃದಯದಿ
ದೀಪದೋಪರಿ ಬೆಳಗಿದಾಕ್ಷಣ
ತಾಪಹರಿಪುದು ! ಮೋಹನಾಶಂ ಜ್ಞಾನದಾರತಿಗೆ ! ॥ ೨೧ ॥

(೧೩) ಸಕಾಯ ಸ್ಥಲಂ

ಜಾಣಯೋಗಿಯು ಕಾಯವಿಡಿದಭಿ
ಮಾನಶೂನ್ಯನು ಕರ್ಮಶೂನ್ಯನು
ಕಾಣಲಿರುವೀ ಜ್ಞಾನರೂಪನು ತಾನು ಸರ್ವರಿಗು |
ತಾನು ಕಾಯವನೊಂದಿ ಜಗದೊಳು
ಮಾಣದಿರುತಿಹನಾತ್ಮರೂಪದೆ
ಮೇಣುಪಾವನ ಕಾಯತೋರಿ'ಸಕಾಯ'ನೆಂದೆನಿಪ ॥ ೨೨ ॥

ಕ್ರೀಯೆಯಾಗಲು ಕಾಯಸಾಧನ
ಕಾಯದಿಂದೇ ಜ್ಞಾನಸಾಧ್ಯಂ
ಕಾಯವಿಡಿದೇ ಯೋಗಿ ಸಂಚರಮಾಡ್ವ ಲೋಕದೊಳು |
ಕಾಯವಿಡಿದೇ ಭೋಗಭೋಗಿಪ
ಕಾಯವಿಡಿದೇ ಮೋಕ್ಷಸಾಧಿಪ
ಕಾಯವಿಡಿದೇ ಯೋಗರತಿಯೊಳು ನಡೆದು ಲಿಂಗೈಕ್ಯ ॥ ೨೩ ॥

ಅಗ್ನಿಯುರಿಯದು ಕಾಷ್ಟವಿಲ್ಲದೆ
ಯಜ್ಞರಾಜಿಸದಾಜ್ಯಸುರಿಯದೆ
ತಜ್ಞಯತಿವರನಾತ್ಮರಾಜಿಸದಂತೆ ದೇಹವಿನಾ ।
ಯಜ್ಞಸಂಹರ ರುದ್ರಪರಮನು
ಪೂಜೆಗೊಂಬುವ ಮೂರ್ತಿಯಾಗುತೆ
ಪೂಜ್ಯನಂತೇ ಯೋಗಿಯೋತ್ತಮ ಕಾಯವಿಡಿದಿರಲು ॥ ೧೪ ॥

ನಿಷ್ಕಲಂಶಿವ ಶುದ್ಧಶಂಭುವು
ಸಕಲನಾಗುತೆ ಮೂರ್ತಿಗೊಳ್ಳುವ
ನಖಿಲಲೋಕಾಂತರದ ಸೃಷ್ಟಿಯನಂತೆ ಸೃಷ್ಟಿಪನು ।
ಸಕಲ ದೇವಾಸುರರು ಮುನಿಗಳು
ಭಕುತಿಯಿಂದಿಷ್ಟಾರ್ಥಸಿದ್ಧಿಗೆ
ಸಕಲರೂಪದ ಕಾಯವಿಡಿದೇ ತಪವ ಗೈಯುವರು ॥ ೧೫ ॥

ಸಿದ್ಧಿಸರ್ವಂ ಸಿದ್ಧಿಪೊಂದಲು
ಶುದ್ಧತಪವೇ ಮೂಲಕಾರಣ
ಸಿದ್ಧಸಾಧಕರೆಲ್ಲ ತಪಕೂ ತನುವು ಸಾಧನವು ।
ಶುದ್ಧಧರ್ಮದ ನಡತೆ ನಡೆಯಲು
ಶುದ್ಧದೇಹಿಗೆ ಮಾತ್ರ ಸಾಧ್ಯವು
ಶುದ್ಧಕಾಯದೊಳಿದ್ದೆ ಸಾಧಿಸು ಸಿದ್ಧಿಸಂಪದವ ॥ ೧೬ ॥

## (೧೪) ಅಕಾಯಸ್ಥಲಂ

ಔಪಚಾರಿಕ ದೇಹಿಯೈ ಜಗ
ರೂಪದಾತ್ಮಂ ಜ್ಞಾನಯೋಗಿಯು
ಲೇಪಿಸಿಲ್ಲವು ಮಾಯೆಯವನನಕಾಯನಾಗಿರುವ ।
ಆ ಪರಶಿವಂಗೆಂಟುದೇಹದ
ರೂಪವಿರೆ ಜಗಕಂಟಿಕೊಳ್ಳದ
ರೂಪವಿರಹಿತನಂತೆ ಮಾಯಾರಹಿತ ಶಿವಯೋಗಿ ॥ ೧೭ ॥

ಲಿಂಗಲೀನಾನಂದಯೋಗಿಯೊ
ಳಿಂಗಸಂಬಂಧಧ್ಯಾಸನೆಲ್ಲಿಯು
ದಂಗತೋರಿಕೆ ಜಗದ ಕಣ್ಣ ಭ್ರಾಂತಿಯಿಂದೈಸೆ।
ಅಂಗದೋಳಭಿಮಾನಶೂನ್ಯಂ
ಗಂಗವೇ ಜಗವೆಂಬ ಯೋಗಿಗೆ
ಲಿಂಗರೂಪದೊಳೊಂದಿ ಬೆರೆದಗೆ ದುಃಖತಾನುಂಟೆ ॥ ೨೮ ॥

ಚಿನ್ನಲಿಂಗಜ್ಞಾನನಿಷ್ಠೆಯೊ
ಳಿನ್ನದೆಂಬಭಿಮಾನಶೂನ್ಯಗೆ
ಹೊನ್ನು ಮಣ್ಣಿನ ಹಮ್ಮಿನೋಳಿಹ ದುಃಖವಿನ್ನೆಲ್ಲಿ।
ಮುನ್ನೆಸುತ್ತಿಹ ದೇಹಭಾವನೆ
ಸೊನ್ನೆಗೈಯ್ಯುತಕಾಯನಾದಗೆ
ಚಿನ್ನ ಶಿವತಾನೆಂಬ ಭಾವಿಗೆ ಕರ್ಮದಿಂದೇನು ? ॥ ೨೯ ॥

## (೧೫) ಪರಕಾಯಸ್ಥಲಂ

ಪರಮ ಸತ್ಯಂಜ್ಞಾನ ಸುಖಿಯೋ
ಳಿರವುಕಾಯದ ಗುಣಗಣಂಗಳು
ಪರಮರತಿಯಿಂ ಪ್ರಕೃತಿಮಾರ್ಗವನುತ್ತರಿಸ್ಸಿಹನು।
ಪರಮಬೋಧಾನಂದ ಭಾಸುರ
ಪರಮಮಂಗಳ ಶಿವಶರೀರಿಯೊ
ಳಿರಲಸಾಧ್ಯಂ ಪ್ರಕೃತಿಗುಣ ಪರಕಾಯದೀಸ್ಥಲದಿ ॥ ೩೦ ॥

ಭವದಿ ಸಂಚಿತಕರ್ಮವೃತ್ತಿಗ
ಳವನು ಶಿವನೊಳು ಲಯವಗಯ್ಯಲು
ಶಿವಸಕಾಯನು ಶಿವನಭಾವಿಯು ತಾನು ಪರಕಾಯ।
ಶಿವನನರಿಯುತ ಶಿವನೊಳಾಶ್ರಿತ
ನವನು ಕರ್ಮೇಂದ್ರಿಯ ಮನೋರ್ಲಯಿ
ಭವದ ಬೀಜವಸುಟ್ಟು ಸಮ್ಯಕ್‌ಜ್ಞಾನಿ ಪರಕಾಯ ॥ ೩೧ ॥

ಶಿವನೆ ತಾನೆಂತೆಂಬ ಭಾವವ
ನವನು ತಾಳುವ, ಸಕಲ ಜಗವನು
ಶಿವನ ಚಿತ್ಕ್ರಿಯೆಯೆಂದುಕಾಣುವಗಿಲ್ಲವೈ ಭ್ರಮೆಯು ।
ಅವನಿಗಿಲ್ಲವು ದೈಹಿಕಭ್ರಮೆ
ಅವನು-ವರಪರಕಾಯನಿರುವನು
ಅವನರೂಪವು ಶಿವನಸಾಕ್ಷಾತ್‌ರೂಪ ನಿಶ್ಚಯವು ॥ ೩೨ ॥

ಸ್ವಸ್ವರೂಪವು ಶಿವನ ಸಾಕ್ಷಾತ್
ವಿಶ್ವರೂಪಮದೆಂದು ಭಾವಿಸಿ
ವಿಶ್ವದಂತರ್ಜ್ಯೋತಿ ತಾನೆಂತೆಂಬ ಪರಕಾಯ ।
ವಿಶ್ವದೊಳವ ಕಾಯವಿಡಿದುಂ
ವಿಶ್ವಕಂಟದ ದೇಹಶೂನ್ಯನು
ವಿಶ್ವಕಧಿಕಂ ಮುಕ್ತ ಶಿವಸಮನಿರುವ ಶಿವಯೋಗಿ ॥ ೩೩ ॥

ಯೋಗಿಗುಂ ಮೇಣಾತ್ಮಬೋಧಿಗು
ಯೋಗ ಶಿವನೊಳಾಗಲಾಕ್ಷಣ
ಹೋಗಲಿರಲೀ ದೇಹವದಕೇನ್ಮುಕ್ತನಾಗಿಹನು ।
ಹೇಗೆ ತಿಮಿರವದಿರಲು ಸಾಧ್ಯಮ
ದಾಗೆ ಸೂರ್ಯೋದಯವು ಜಗದೊ
ಳಾಗಲಾತ್ಮಜ್ಞಾನ ಸಂಸಾರ್ದುಃಖಮಿರಲುಂಟೆ ? ॥ ೩೪ ॥

ದೇಹದೊಳಭಿಮಾನಶೂನ್ಯನು
ದೇಹ ತನ್ನದು ಪರರದೆಂಬುವ
ದೇಹಭಾವವ ಭೇದಬುದ್ಧಿಯ ನೀಗಿ ನಿರ್ಮುಕ್ತ ।
ದೇಹಸರ್ವಂ ಸ್ವಸ್ವರೂಪವು
ದೇಹಮೆಂಟುಮ್ಮಿದ್ದು ಶಿವನಿ
ರ್ದೇಹನಾಗಿರುವಂತೆ ನಿತ್ಯಾನಿತ್ಯ ಪದಯುತನು ॥ ೩೫ ॥

## (೧೬) ಧರ್ಮಾಚಾರ ಸ್ಥಲಂ

ಧರುಮ ಸಂಗ್ರಹಿಗಿರಲಹಿಂಸೆಯು
ಪರಮಸತ್ಯಂ ಬ್ರಹ್ಮಚರ್ಯೆಯು
ಕರುಣೆದಾನಂ ಕ್ಷಮೆಯಸಂಗ್ರಹ ಪೂಜೆ ಜಪತಪವು |
ಪರಮಭಾಸುರ ಶಿವನಿಗರ್ಪಿತ
ಮಿರುವವರ ಪರಕಾಯನಿಷ್ಟದೊ
ಳಿರದೆ ಗೈವೀಧರ್ಮ ಜಗದೋದ್ಧಾರ ಕಾರಣವು ॥ ೩೬ ॥

ಭೋಗಿಭೂಷಣ ಶಿವನೆಪೇಳಿಹ
ನಾಗಮೋಕ್ತದ ಧರ್ಮಸಂಗ್ರಹ
ರಾಗರಹಿತರುಮಂತೆಯಾಚರಿಸುವರು ಶಿವಕೃಪೆಗೆ |
ತ್ಯಾಗಯೋಗಕು ಭೋಗಮೋಕ್ಷಕು
ಆಗಮೋಕ್ತದ ಧರ್ಮಸಂಗ್ರಹ
ಬೇಗಮಾಡೈ ಮೃಡನ ವರಕೃಪೆ ಹುಡುಕಿಬರುತಿಹುದು ॥ ೩೭ ॥

ಧರ್ಮವಿರದಿರೆ ಹಿಡಿಯಬೇಡವು
ಧರ್ಮವಿಹಿತವ ನಿಷ್ಠೆಯಾದರು
ಧರ್ಮರೀತಿಯೆ ಫಲವಬಯಸದೆ ತಿಳಿದು ಮಾಡುವುದು |
ಧರ್ಮರಕ್ಷೆಯ ಮಾಡುವಾತಗೆ
ಧರ್ಮ ತಾನೇ ರಕ್ಷಿಯಾಗ್ವುದು
ಧರ್ಮಧರ್ಮವ ಬೆಳೆಯಕೊಡುವುದು ತೃಪ್ತಿನೀಡುವುದು ॥ ೩೮ ॥

ಯೋಗಿಯೋತ್ತಮನಾತ್ಮದೊಳಗೇ
ಕಾಗಿ ಜಗವನು ಕಾಣ್ಬನದರಿಂ
ತ್ಯಾಗಿ ನಿಗ್ರಹವಂ ವಿರೋಧಿಪನೆಲ್ಲತನದೆನುತ |
ಏಕಮಾಶಿವವಿಶ್ವರೂಪದೊ
ಳೇಕನಿಷ್ಠೆಯನವನು ತುಂಬ
ಲ್ಲೋಕೆ ಸಿದ್ಧಿಯಸಿದ್ಧಿಗೊಡೆವೆಯು ಮೋಹವಿಭ್ರಮವು ॥ ೩೯ ॥

ಭೋಗಮೋಕ್ಷವು ಧರ್ಮದೊಳು ಶಿವ
ಯೋಗಿ ನಿಸ್ಪೃಹನಿರುವನಾದರು
ಯೋಗಮಾರ್ಗದೆ ಧರ್ಮದೀವಿಗೆ ಹಿಡಿದೆ ನಡೆಯುವನು ।
ಯೋಗಿ ತಣಿದುಂ ಜ್ಞಾನಸುಧೆಯೊಳು
ಲೋಗರೆಲ್ಲರು ನೋಡಿ ನಡೆಯಲು
ಜಾಗರಿರುವನು ಧರ್ಮನಡೆಯೊಳು ಧರ್ಮತಾ ತ್ಯಜಿಸ ॥ ೪೦ ॥

ಸತ್ಯಸಂಧಪ್ರಿಯನು ಶಿವನೈ
ಸತ್ಯನೋತ್ತಮ ಪೂಜೆಗೊಲಿಯುವ
ಸತ್ಯಪಥದೊಳು ನಡೆಯದವನಿಗೆ ಶಿವನುತಾನೊಲಿಯ ।
ನಿತ್ಯನಡೆಯೊಳು ಸತ್ಯವುಳ್ಳಗೆ
ಸತ್ಯದಾಚಾರ್ಶೀಲವುಳ್ಳಗೆ
ನಿತ್ಯಮಾಡುವ ಪೂಜೆ ಜಪತಪದಿಂದ ಶಿವನೊಲಿವ ॥ ೪೧ ॥

## (೧೭) ಭಾವಾಚಾರ ಸ್ಥಲಂ

ಯಾವಯೋಗಿಯ ಧರ್ಮನಡೆತಾ
ಭಾವಪೂರ್ಣವೊಮೇಣ್ ಶಿವಾಶ್ರಯ
ದಾವಭಾವದಿ ಕಾಯವಾಚಾಮನಸು ಕೂಡಿಹವೋ ।
ಭಾವನಾಮಯಮಿರುವ ಕರ್ಮವು
ಪಾವನಾದಪಿ ಪಾವನಂ ತಿಳಿ
ಭಾವಸಹಿತಂ ಶ್ರೇಷ್ಠ ಧರ್ಮವನಿಂತೆ ಯಾಚರಿಸು ॥ ೪೨ ॥

ಭಾವದಿಂದಲೆ ಹೃದಯಶುದ್ಧಿಯು
ಭಾವದಿಂದಲೆ ಕರ್ಮಸಿದ್ಧಿಯು
ಭಾವಯೋಗಿಯೆ ಭಾವಭರಿಸಲು ಶಿವನಭಾವವಿಡಿ ।
ಯಾವಯೋಗಿಯು ನಿತ್ಯಕರ್ಮವ
ಭಾವಪೂರ್ಣದೆ ಶಿವನಭಾವದೆ
ಗೈವನಾದರೆ ಗುಣದದೋಷದ ಬಂಧಿಯಾಗನವ ॥ ೪೩ ॥

ಹೃದಯದಂತರ್ಜ್ಞಾನ ಸೂರ್ಯನ
ಮುದದಿಯಾರಾಧಿಸಲು ಭಾವದೆ
ಬುಧರುಕರೆವರು ಸಂಧ್ಯೆವಂದನಮೆಂದು ಜಗವರಿಯೆ ।
ಹೃದಯದೂರ್ಧ್ವಮುಖಾಗ್ನಿಯುರಿಯೋ
ಳುದಿಪ ವಿಷಯಾರ್ಪಣದ ಕರ್ಮವೆ
ಬುಧರು ಕೀರ್ತಿಪ ಭಾವನಾಮಯ ಹೋಮ ಕರ್ಮಕಲೆ ॥ ೪೪ ॥

ನಿತ್ಯನೈಮಿತಿ ಕರ್ಮವೆಲ್ಲವು
ಸತ್ಯಶಿವನಂ ಪ್ರೀತಿಗೊಳಿಸಲು
ಮತ್ತ ಸಂಗವು ಸಿದ್ಧಿಯಾಗಲು ; ಭಾವದಿಂಮಾಡು ।
ಸತ್ಯಶಿವನೊಳು ಸಕಲಕಾರ್ಯವ
ನೊತ್ತೆಯಿಟ್ಟ ವಿವೇಕಿಯೋಗಿಯು
ಸತ್ತುಹುಟ್ಟುವ ಜಗದೊಳಿದ್ದುಂ ಪರಮನಿಸ್ಸಂಗಿ ॥ ೪೫ ॥

ನಿನ್ನ ತನುವನು ವಸ್ತುವನಿತನು
ಚಿನ್ನಶಿವನನ್ನೊಂದೆಭಾವದೆ
ಚಿನ್ಮಯಾನಂದಾತ್ಮರೂಪದೆ ನೋಡು ಶಿವನಾಗು ।
ನಿನ್ನೊಳಿರುತಿಹ ಶಿವನೆ ಜಗದೊಳು
ಮುನ್ನನೆಲಸಿಹನೆಂಬ ಭಾವದೆ
ತನ್ನಸುತ್ತಿನ ಜಗವನೋಡಿದೊಡೆಲ್ಲು ಶಿವಕಾಣ್ಬ ॥ ೪೬ ॥

## (೧೮) ಜ್ಞಾನಾಚಾರ ಸ್ಥಲಂ

ಯಾವಯೋಗಿಯು ಜ್ಞಾನಪೂರ್ವಕ
ಭಾವಭರಿತಾಚಾರಶೀಲದೊ
ಳಾವುದಾನುಂ ಮಾಡೆ ಸರ್ವೋದ್ಧಾರ ಕಾರಣವು ।
ಜೀವಶಿವನೋಳೈಕ್ಯಗೊಳ್ಳುವ
ಯಾವ ತತ್ತ್ವವು ಸುಪರಿಪೂರ್ಣವೊ
ದೈವದೆಲ್ಲರ ನೆಚ್ಚುಮುದುವೇ ಜ್ಞಾನಿಯಾಚಾರ ॥ ೪೭ ॥

ನಿರ್ವಿಕಲ್ಪನು ನಿಷ್ಕಲಂಶಿವ
ಸರ್ವಕುತ್ತ್ರಮನಾದಿಗಾದಿಯು
ಸರ್ವಜಗವನಭೇದಭಾವದೆ ಯೋಜಿಸಾತನೊಳು ।
ನಿರ್ವಿಕಾರದ ಯೋಗಿಪುಂಗವ
ಸರ್ವಕಾಲದೆ ಸರ್ವದೇಶದೆ
ಸರ್ವರೊಳಗುಂ ಬೆರೆವನದರಿಂ ಜ್ಞಾನಿಯಾಚಾರ್ಯ ॥ ೪೮ ॥

ಧರ್ಮಕರ್ಮದ ಮೂಲಸಂಸಾರ್
ಕರ್ಮಬೀಜವು ಮೊಳಕೆದೋರ್‍ವುದೆ
ಕರ್ಮಬೀಜವೆಸೀಯೆ ಸುಟ್ಟರೆ ಜ್ಞಾನದಗ್ನಿಯೊಳು ।
ಕರ್ಮಪಾಶದಿ ಕಟ್ಟಬಳಲಿಸೆ
ಕರ್ಮಸಂಕಲೆ ಶಕ್ತಮಾಗದು
ಕರ್ಮಕಂಟನು ಜ್ಞಾನಯೋಗಿಯು ಜ್ಞಾನಹೀನನೊಲು ॥ ೪೯ ॥

ಮೋಕ್ಷಗುರುವಿನ ಪರಮಕೃಪೆಯಿಂ
ಮೋಕ್ಷಕಾಗೇ ಜ್ಞಾನಪಡೆಧವ
ನೇಕೆ ಭವಭಯ ಕರ್ಮಬಂಧಕೆ ಸಿಲುಕ ಬಯಸುವನು ।
ಮೋಕ್ಷಮೊಂದೇ ಜ್ಞಾನಿಗುರಿಯ್ಯೆ
ಮೋಕ್ಷಕಾಗೇ ಜ್ಞಾನಿಯಿರವ್ವೆ
ಮೋಕ್ಷಕಾರಣ ಲಿಂಗ ವರಗುರು ಜಂಗಮಾರ್ಚನೆಯು ॥ ೫೦ ॥

ಜ್ಞಾನಮೆನಿಪುದು ವರಶಿವಾದ್ವೈ
ತಾನುಭಾವವು ಬೇರೆಯೇನುಂ
ಜ್ಞಾನಮೆನ್ನಿಸದೆಂಬ ನಿಜವಂ ಜ್ಞಾನಿ ತಿಳಿದಿಹನು ।
ಜ್ಞಾನ, ನಿರ್ಮಲ ಶಿವನಭಾವಂ
ಜ್ಞಾನ, ನಿಃಶ್ರೇಯಸವು ಸುಖದಂ
ಜ್ಞಾನಮಿರದಿರೆ ರಾಗಕಲುಷಿತ ಭವಕೆ ಬಂಧಿಪುದು ॥ ೫೧ ॥

ಲಿಂಗಿ ಮಾಹೇಶ್ವರನು ನಿತ್ಯವು
ತುಂಗ ಶುದ್ಧಾಚಾರಚರಿತನು
ಲಿಂಗಭಾವ ವಿವೇಕದೇಕೇಶ್ವರನ ಬೆಳಕನ್ನು ।
ಲಿಂಗಮುಖದೊಳು ಕಂಡು ನಲಿಯುವ
ಮಂಗಳಾತ್ಮಕದಗ್ನಿ ಸಂಸ್ಕೃತ
ದಂಗಲಿಂಗದೊಳೈಕ್ಯವಾಗಲು ಯೋಗಿ ಮುಕ್ತಾತ್ಮ ॥ ೫೨ ॥

ಇಂತು ರೇಣುಕಗೀತೆ ಬೋಧಿಪು
ದೆಂತು ಲಿಂಗಸ್ಥಲ ಮಹೇಶ್ವರ
ನಂತರಂಗಜ್ಯೋತಿಯಂತಾಕ್ರಿಯೆಯೊಳಾಗಮದೋಳ್ ।
ಅಂತೆಜ್ಞಾನಾಚಾರ ದೊರೆಗು
ಮ್ಮಾಂತು ಜೀವನ್ಮುಕ್ತನಾಗುವ
ನಂತೆ ಜಗಕುಂ ಬೆಳಗನೂಡುವನೆಂಬುದಿದು ಪೂರ್ಣಂ ॥ ೫೩ ॥

ಹದಿನಾರನೆಯ ಸಂಧಿ ಸಂಪೂರ್ಣಂ.

ಅಂತು ಸಂಧಿ ಹದಿನೇಳಕ್ಕಂ ಪದನು ಏಳುನೂರೇಳಕ್ಕಂ

ಮಂಗಳಮಸ್ತು.

# ಹದಿನೇಳನೆಯ ಸಂಧಿ

## ಪ್ರಸಾದಿ ಸ್ಥಲಂ

ಸೂಚನೆ:—ಶ್ರೀ ಪ್ರಸಾದಸ್ಥಲಿಯು ಲಿಂಗ
ಶ್ರೀ ಪ್ರಸಾದವ ಪಡೆವ ಮರ್ಮವ
ನಾಪ್ರಸನ್ನರು ರೇಣುಕಾರ್ಯರು ಪೇಳ್ದರೈ ಮುನಿಗೆ ||

ಲಿಂಗಮಾಹೇಶ್ವರನ ಕಾಣದ
ಮಂಗಳಾತ್ಮಕ ಭೇದವಿವರವ
ಲಿಂಗಮೂರುತಿ ನಿಮ್ಮ ಬೋಧೆಯೊಳರಿತೆನೀವರೆಗೆ |
ಮಂಗಳಾಂತರ ಸುಪ್ರಸಾದವು
ಲಿಂಗಧಾರಿಗದೆಂತು ಸಾಧ್ಯವು
ಲಿಂಗದೀಸ್ಥಲಭೇದ ವಿವರಿಸಿ ಬೋಧೆನೀಡೆನಗೆ ||೧||

ಸುಪ್ರಸಾದಿಸ್ಥಲದೊಳಾಶ್ರಿತ
ವಿರ್ಪ ನವವಿಧ* ಭೇದವಿವರವ
ನೊಪ್ಪುವಂದದೆ ಪೇಳ್ವೆನಾಲಿಸುತೊಳಗಬೆಳಗಯ್ಯ |
ಇರ್ಪಕಾಯೇಂದ್ರಿಯದನುಗ್ರಹ
ದೊಪ್ಪೆ ಕಾಯ್ಕರಣಾದಿ ಭಾವಗ
ಳರ್ಪಿಸುವುದೈಶಿಷ್ಯ ಶುಶ್ರೂಷ ಸೇವ್ಯದೀಸ್ಥಲದಿ ||೨||

---

*ನವವಿಧ ಭೇಧಗಳು ;—೧ ಕಾಯಾನುಗ್ರಹಸ್ಥಲಂ. ೨ ಇಂದ್ರಿಯಾನುಗ್ರಹ ಸ್ಥಲಂ ೩. ಕಾಯಾರ್ಪಣಸ್ಥಲಂ [೪ ಕರಣಾರ್ಪಣಸ್ಥಲಂ ೫ ಪ್ರಾಣಾರ್ಪಣಸ್ಥಲಂ ೬ ಭಾವಾರ್ಪಣಸ್ಥಲಂ ೭ ಶಿಷ್ಯಸ್ಥಲಂ ೮ ಶುಶ್ರೂಷುಸ್ಥಲಂ ೯ ಸೇವ್ಯಸ್ಥಲಂ.

## (೧೯) ಕಾಯಾನುಗ್ರಹ ಸ್ಥಲಂ

ವೀರವರಶಿವಯೋಗಿ ಕಾಯುವ
ತೋರಿ ವರಕೃಪೆಯನ್ನು ಕರುಣಿಪ
ಭೂರಿ ಭವಭಯಹರಿಪ ಕಾಯಾನುಗ್ರಹ ಸ್ಥಲದಿ |
ಚಾರು ಶಿವನವತಾರವೆತ್ತುತ
ತೋರುವಂ ಕೃಪೆ ಸರ್ವಜೀವಿಗು
ವೀರವರ ಶಿವಯೋಗಿ ಕಾಯದೊಳಂತೆ ಕೃಪೆಗೈವ || ೩ ||

ಶಿವಶರೀರಗಳೆಂಟುಮಿರಲುಂ
ಭವದೊಳಂಟದ ಸಂಗವರ್ಜಿತ
ನವನು ಜೀವಿಗಳಂತರಂಗದ ಸಾಕ್ಷಿಯಾಗಿಹನು |
ಶಿವನಯೋಗಿಯು ಕಾಯವಿಡಿದೇ
ಭುವಿಯೊಳಿರುತಿಹ ಜನರಮಧ್ಯದೊ
ಳವನುವರ್ತಿಪ ಸರಸಿಮಧ್ಯದ ಕಮಲದೆಲೆಯಂತೆ || ೪ ||

ಶಿವಸುಯೋಗಾರೂಢಸಿದ್ಧನು
ಶಿವನಭಾವಿಪ ನಿರ್ವಿಕಲ್ಪನು
ಭುವನಮಾಯೆಯ ಗೆದ್ದು ಭಾವನೆಯಂತೆ ಶಿವನಿಹನು ||
ಅವನುತಾನಭಿಮಾನಶೂನ್ಯನು
ಶಿವಸಕಾಯದೆ ಲೀಲೆಗೋಸುಗ
ವವನಿಯೊಳು ಸಂಚರಿಪ ಜೀವನ್ಮುಕ್ತ ಪದದೊಳಗೆ || ೫ ||

## (೨೦) ಇಂದ್ರಿಯಾನುಗ್ರಹ ಸ್ಥಲಂ

ಯೋಗಿ ಕರಣವಿವೇಕಸಂಯುತ
ನಾಗಿ ದರ್ಶನವಿತ್ತಮಾತ್ರದೆ
ರಾಗಭೋಗದಿ ಮಗ್ನ ಜನ ಸುವಿವೇಕ ತಾಳುವರು |
ರಾಗರಹಿತರು ತತ್ತ್ವವೇತ್ತರು
ಯೋಗಿವರ ಪರಕಾಯನಿರುವನು
ಹಾಗುಮವನನ್ನಿಂದ್ರಿಯಾನುಗ್ರಹಿಪನೆನ್ನುವರು || ೬ ||

ಇಂದ್ರಿಯಂಗಳು ವಿಷಯದಾಶೆಯು
ಸಂದೊಗದಿ ಬೀಗಿ ಹಿಗ್ಗವೆ
ಕುಂದದಿಹವೇ ಸ್ವಾರ್ಥಕಡ್ಡಿಯು ಬಂದತಕ್ಷಣದೆ ।
ಇಂದ್ರಿಯಂಗಳ ವಶಕ್ಕು ಸಿಲುಕನು
ಕುಂದರಾಗದ್ವೇಷಕಾರಣ
ಹೊಂದಿ ಶಿವನನು ಶಾಂತನಾಗಿಹ ಯೋಗಿ ನಿತ್ಯಸುಖಿ ॥ ೭ ॥

ಇಂದ್ರಿಯಂಗಳ ಬಾಹ್ಯವೃತ್ತಿಯು
ಮುಂದುವರಿವುದು ಜಗದ ಜಂಜಡ
ವಿಂದ್ರಿಯಂಗಳ ವೃತ್ತಿಯಂತರ್ಮುಖಿಯು ತಾನಾಗೆ ।
ಹೊಂದುಗೂಡವು ಜಗದ ವೃತ್ತಿಯೊ
ಳಿಂದುಧರ ಶಿವನನ್ನೆ ಹುಡುಕುತ
ಮ್ಮುಂದುವರಿಯಲು ಚಿರದಮುಕ್ತಿಯೊಳೊಂದುಗೂಡುವವು ॥ ೮ ॥

ಚೆನ್ನ ಶಿವನನ್ನೊಳಗೆ ನೋಡುತ
ಲಿನ್ನು ಕಣ್ಣಂ ತೆರೆದುನೋಡುವ
ಮುನ್ನ ವೈಭವಭರಿತ ವಿಶ್ವದ ಮರೆಯಲಡಗಿಹನು ।
ಸೊನ್ನೆಗೈದಿಹ ಕರಣವೃತ್ತಿಯೊ
ಳಿನ್ನು ಶಿವನನೆ ಕಾಣ್ಬನೊಳಹೊರ
ಗೆನ್ನದೆಲ್ಲಂ ಯೋಗಿ ಶಿವನುಳಿದನ್ಯಮಿಲ್ಲವಗೆ ॥ ೯ ॥

ಜರೆಯು ಮರಣದ ಬಾಧೆಯಿಲ್ಲವು
ಕೊರೆವ ಹಸಿವುಂ ತೃಷೆಗಳಿಲ್ಲವು
ಪರಮಶಿವನೋಳಿಂದ್ರಿಯಂಗಳ ವೃತ್ತಿ ಲಯಗೊಳಿಸೆ ।
ಜರೆಯು ಮರಣವು ಹಸಿವುತೃಷೆಗಳು
ವಿರತಯೋಗಿಯ ಕಾಡಬಲ್ಲವೆ ?
ಪರಮಶಿವನೊಲು ನಿತ್ಯತೃಪ್ತನು ಯೋಗಿಯೋತ್ತಮನು ॥ ೧೦ ॥

ಎಲ್ಲಿಮನವಿರಲಲ್ಲೆ ಯಿಂದ್ರಿಯ
ವೆಲ್ಲ ನೆಲೆನಿಲುತಿಹವು ಪರಶಿವ
ನಲ್ಲಿ ಮನಸದು ಲೀನಗೊಳ್ಳಲ್ಲುಳಿವುದಿನ್ನೇನು ।
ಎಲ್ಲಿ ನೋಡುವನಲ್ಲಿ ಶಿವನಿರ
ಲೆಲ್ಲಚಿಂತೆಯು ಶಿವನಪರಮಿರ
ಲೆಲ್ಲನೋಟವು ಚಿಂತೆ ಚಿನ್ಮಯಶಿವನ ಬೆಳಗುವವು ॥ ೧೧ ॥

ಕರಣಸಹಿತಂ ಪ್ರಾಣವಾಯುವ
ನಿರ್ಧದೆ ಮನದೊಳು ನೆಲೆಯನಿಲಿಸೈ
ಪರಮಶಿವನೋಳಿಂಥ ಮನವನೆ ನೆಲೆಯಗೊಳಿಸಯ್ಯ ।
ನಿರುತಯೋಗದೊಳಂತೆಗಯ್ಯಲು
ಮೆರೆವಲೋಕದೆ ಚಿತ್ತಚಂಚಲ
ಮಿರದು ನಿಶ್ಚಲಮನ ಮಹಾಲಯವಯ್ಯ ಶಿವನಿಂಗೆ ॥ ೧೨ ॥

ಸೊನ್ನೆಗೈದಿಹಕರಣವೃತ್ತಿಯೊ
ಳನ್ಯಮೇನನು ಕಾಣ ಯೋಗಿಯು
ತನ್ನಹೊರವೊಳಗಿಷ್ಟಲಿಂಗ ಪ್ರಾಣಲಿಂಗವನು ।
ನನ್ನಿ ಪೂಜೆಯೊಳೈದೆ ಪೂಜುವ
ಚೆನ್ನಶಿವನನು ಪಡೆದು ಸಂಯಮ
ದಿನ್ನು ತಾನೇ ಸ್ವೇಚ್ಛೆಯಿಂ ಸಂಚರಿಪ ಸರ್ವಸುಖಿ ॥ ೧೩ ॥

## (೨೧) ಪ್ರಾಣಾನುಗ್ರಹ ಸ್ಥಲಂ

ಶಿವನಯೋಗಿಗೆ ಪರಮಕಾಯಗೆ
ಪವನಬಂಧನದಿಂದ ಬೆಳಗುವ
ಶಿವನ ದರ್ಶನವಾಗೆ ಹರಣಾನುಗ್ರಹಸ್ಥಲಿಯು ।
ಪವನವಡಗಲು ಕುಂಭಪೂರದಿ
ಭುವನಕರ್ತ ಬ್ರಹ್ಮರಾದಿಯೆ
ಸವಿವ ಶಿವಸುಖದಲ್ಲಿ ಸೇಂದ್ರಿಯವೃತ್ತಿ ಲಯವಹುದು ॥ ೧೪ ॥

ಇಂದ್ರಿಯಂಗಳು ವಿಷಯ ವಿಮುಖತೆ
ಯಿಂದ ಕಾತರ ಕಳೆದುಕೊಳ್ಳುವ
ವಿಂದ್ರಿಯಂಗಳಕೂಡಿ ಹರಣವು ಮನದಿ ಸಂಗಮಿಸೆ ।
ಇಂದ್ರಿಯಂಗಳ ವೃತ್ತಿಶೂನ್ಯದ
ಲಿಂದ್ರಿಯಂಗಳ ಗೆಲಿದು ಶಾಂತಿಯ
ನೊಂದಿ ಶಿವನಂ ಪಡೆದು ಮುದಗೊಳುತಿಹನು ಶಿವಯೋಗಿ ॥ ೧೫ ॥

ಪ್ರಾಣವೃತ್ತಿಯು ಶಮನಗೊಳಿಸಿದ
ಜಾಣ ಪಡೆವನು ಮನಕೆ ಶಾಂತಿಯ
ಕಾಣ ಶಿವನಿಂ ಬೇರೆಯಾದುದ ಮೌನತಾಳ್ದವನು ।
ಪ್ರಾಣಧಾರಣದಿಂದ ದೇಹಿ
ಪ್ರಾಣವಿಡಿದಿಹನದಕೆ ಶಿವನೇ
ಪ್ರಾಣರೂಪನು ಸರ್ವಕಾರಣ ಕಾರಣಾಧಾರ ॥ ೧೬ ॥

ಶಿವನು ತಾನಾಧಾರರಹಿತನು
ಪವನರೂಪ ಪ್ರಾಣದಿರುತಿಹ
ನವನನಾಧರಿಸಿರುವ ದೇಹಿಯು ಚೇತನಾಮಯನು ।
ಶಿವನಯೋಗಿ ಪ್ರಾಣಯಾಮದೆ
ಪವನದಾಟುವ ಲಯವಗೊಳಿಸಿಹೆ
ನವನು ಶಿವನೊಡಗೂಡಿ ಬೆರೆದಿಹ ಯೋಗಬಲದಿಂದ ॥ ೧೭ ॥

*ಯೋಗಬಲಶಿವಲೀನದಾತ್ಮನು
ಯೋಗಿ, ಸರ್ವೇಂದ್ರಿಯವು ಶಿವನುಪ
ಭೋಗಮಾತ್ರದೊಳಚಲವಾಗಲು ಚಲಿಸನೆಂದೆಂದು ।

---

* ಪದ್ಯಾರ್ಥದ ಮೊದಲನೆಯಭಾಗ "ಲ"ಕಾರ ಪ್ರಾಸದಮೇಲೆ ಲೀಲೆಯಾಡಿದರೆ ಎರಡನೆಯಭಾಗದಲ್ಲಿ ಸಾಲುಸಾಲಿಗೂ ವೈವಿಧ್ಯತೆ ಲಾಸ್ಯವಾಡುತ್ತಿದೆ. ನಾಲ್ಕನೆಯ ಸಾಲಿನಲ್ಲಿ 'ತ' ಕಾರಾಂತ ಪ್ರಾಸವೂ, ಐದನೆಯ ಸಾಲಿನಲ್ಲಿ 'ನ' ಕಾರಾಂತ ಪ್ರಾಸವೂ, ಆರನೆಯ ಸಾಲಿನಲ್ಲಿ "ಪ" ಕಾರಾದಿ ಪ್ರಾಸವೂ ಲಾಸ್ಯವಾಡುವುದನ್ನು ಕೇಳುತ್ತೇನೆ.

ಯೋಗಿ, ತತ್ತ್ವಾತೀತ ಪದಯುತ
ರಾಗರಹಿತನ ನಿಷ್ಕಲಂಕನ
ಯೋಗಪೂರ್ಣಾನಂದಪೂರ್ಣನ ಪಡೆದ ಪರಮಸುಖಿ ॥ ೧೮ ॥

ವಾಸನಾಸಂಪರ್ಕ ದೂರದೆ
ನಾಶಗೈದಾ ಪ್ರಾಣವೃತ್ತಿಯೊ
ಳೀಶನೋಳೊಡವೆರೆದ ಯೋಗಿಯು ವೋಟುಮರದಂತೆ ।
ವಾಸನಾಮಯ ನಾಶಶೀಲ
ತ್ರಾಸದಾಯಕ ಚಲಿಪವಿಶ್ವದೊ
ಳೀಸುಮಾತ್ರಕು ಚಲಿಸನಾ ಶಿವಯೋಗಿ ಸಂಯಮಿಯು ॥ ೧೯ ॥

## (೨೨) ಕಾಯಾರ್ಪಣ ಸ್ಥಲಂ

ಸರುವರೋನ್ನತಿಗಾಗಿ ಯೋಗಿಯು
ಪರಮಶಿವನಿಗೆ ಕಾಯವರ್ಪಿಸಿ
ತೊರೆವನಭಿಮಾನವನು ದೇಹದಿ ಲಿಂಗಪೂಜೆಯೊಳು ।
ವಿರತ ನಿರಹಂಭಾವಿ ಯೋಗಿಯು
ಪರಮಕಾಯವ ಶಿವನಿಗರ್ಪಿಸು
ತಿರದೆ ಪರಶಿವರೂಪ ಪೊಂದುವನಿಲ್ಲಸಂದೇಹ ॥ ೨೦ ॥

ವಿಷಯಸಂಬಂಧದೊಳು ಜನಿಸಿದ
ವಿಷಯಸುಖವನ್ನಿಷ್ಟದಾಸೆಯ
ವಿಸಮನಯನಂಗೀಶ್ವರಂಗರ್ಪಿಸುವ ಶಿವಯೋಗಿ ।
ವಿಷಯದರ್ಶನ ಸಂಗಚರ್ವಣ
ವಿಷಯದಾಘ್ರಾಣ್ ಶ್ರವಣದಾದಿಯೊ
ಳೊಸೆವ ಸುಖವನ್ನಿರದೆ ಶಿವನಿಂಗರ್ಪಿಸುವ ಯೋಗಿ ॥ ೨೧ ॥

ಚರಿಸಲಂತರ ಬಾಹ್ಯದಿಂದ್ರಿಯ
ಮಿರದೆ ವಿಷಯದ ಮಧ್ಯೆ ದೊರೆಯುವ
ಸರುವಸುಖವನು ಶಿವನಿಗರ್ಪಿಸಿ ಯೋಗಿ ನಿರ್ಮಲನು ।
ದೊರೆವ ಕಾಯಕಫಲ ಸಮರ್ಪಿಸ
ಲಿರುವ ಶಿವಮಂದಿರಮದಾಗಲು
ವರಶರೀರವು, ಬುಧರು ಕಾಯಾರ್ಪಣೆಯನೆನ್ನುವರು ॥ ೨೨ ॥

## (೨೩) ಕರಣಾರ್ಪಣ ಸ್ಥಲಂ

ಪರಮಶಿವನೊಳಿಂದ್ರಿಯಂಗಳ
ನಿರದೆ ಸಂಯೋಜಿಸುವ ಕರ್ಮದೆ
ಕರಣದಾಶೆಗಳೆಲ್ಲ ಪೂರ್ಣವು ಪೂರ್ಣಕಾಮನಿಗೆ ।
ಕರಣಚರಿಸುವ ವಿಷಯಸುಖವ
ನ್ನಿರದೊಳಾಯಾಕರಣಮುಖದೋ
ಳಿರುವ ಲಿಂಗಯ್ಯಗೆ ನಿವೇದಿಸು ಕರಣಸಹಿತಾಗಿ ॥ ೨೩ ॥

ಹಮ್ಮು ಮಮತಾಮದಿರವೀಂಟುತೆ
ಸೊಮ್ಮು ಮುಸುಕಲ್ಮತ್ತವಾಗುವ
ವೆಮ್ಮಚಿತ್ತವು ಬುದ್ಧಿಮನಗಳರೂಪ ಗಜದಿಂಡು ।
ಒಮ್ಮನದಿ ವರಭಕ್ತಿಮಿಣಿಯೊಳು
ನಮ್ಮ ಪರಶಿವನೆಂಬ ಕಂಭ
ಕ್ಕೊಮ್ಮೆ ಕಟ್ಟುವಧೀರ ಪಡೆವನು ಸರ್ವಸಿದ್ಧಿಗಳಂ ॥ ೨೪ ॥

ಇರುವ ಸಕಲೇಂದ್ರಿಯಕು ಮನವೇ
ಗುರುವುಮಾಮನ ಶಿವನವಶವಿಡೆ
ಕರಣವೃತ್ತಿಗಳೆಲ್ಲವನನುಸರಿಸಿ ನಡೆಯುವವು ।
ಸರುವಕರಣೇಂದ್ರಿಯದ ವಶವೇ
ಪರಮಮುಕ್ತಿ ನಿವೃತ್ತಿಯೆನಿಪುದು
ಕರಣಕಾಗಲು ಶಿವನೆ ವಿಷಯವು ಬಂಧವೆಲ್ಲಿಹುದು ? ॥ ೨೫ ॥

ಭವದಿ ಕಾಡನು ಕಡಿವ ಕೊಡಲಿಯೆ
ಶಿವವು ಶಾಂತಿಯು ! ಶಾಂತಿ ಲಭಿಸಲು
ಜವದೊಳಿಂದ್ರಿಯಗೆಲುವ ಸಾಹಸಿ ಮಾನವೋತ್ತಮನು ।
ಸವಿವ ಪಾಪವು ಮೇಣು ಪುಣ್ಯಗ
ಳವನು ಕರಣೇಂದ್ರಿಯವೆ ಸಂಚಯಿ
ಸುವವು ಶಿವನಿಂಗರ್ಪಿಸಲ್ಲವ ಕರ್ಮ ಬಂಧಿಸದು ॥ ೨೭ ॥

ಒಳಗು ಹೊರಗೆಲ್ಲೆಲ್ಲು ಜಗವನು
ಬೆಳಗಿ ಹೊಳೆವಚಿದಗ್ನಿಗರ್ಪಿಸ
ಲುಳಿಸದೆಲ್ಲಾ ವಿಷಯಸುಖವನು ಮುಕ್ತಿಗಳಿಸುವನು ।
ಒಳಗೆ ಕುಳಿತಿಹ ಶಿವನು ಚಿನ್ಮಯ
ನುಳಿಸದೇ ನನ್ನವನಿಗರ್ಪಿಸು
ತಳುವದೀಯುವ ಚಿರದ ಮುಕ್ತಿಯನಿಲ್ಲಸಂದೇಹ ॥ ೨೭ ॥

ಒಳಗಡಂಗಿಹ ಚಿತ್ತರೂಪದೊ
ಳುಳಿದ ಹೋಮದ್ರವ್ಯನಂಗಳ
ಬಳಸಿನಿಂದಿಹ ಸಕಲ ಜಡಚರ ಜಗದ ಹವಿಯನ್ನು ।
ನಳಿನಹೃದಯದ ಮಧ್ಯೆ ರಾಜಿಸಿ
ಬೆಳಗುವರಿವಿನ ಯಜ್ಞಕುಂಡದೆ
ತಳುವದೆರೆಯುತ ಹವನಮಾಡುವಗೆಲ್ಲಿ ಭವಬಂಧ? ॥ ೨೮ ॥

ಪ್ರಾಣವಾಯುವಿನಿಂದ ಬೆಳಗುವ
ತಾನೆತಾನಾಗಿರುವ ಚಿನ್ಮಯ
ತಾಣ ಚಿದ್ರೂಪಾಗ್ನಿ ಶಿವದೋಳ್ಸಕಲ ವಿಷಯವನು ।
ಮಾಣದುರಿಯಲು ಹವನಮಾಡುವ
ಜಾಣಯೋಗಿಯು ದಹನದಂತ್ಯದೆ
ತಾನೆ ಚಿನ್ಮಯಶಿವನರೂಪವ ತಳೆವನಿದು ಸತ್ಯ ॥ ೨೯ ॥

ಯೋಗಿ ಕಾಯುವೆ ಶಿವನ ದೇಗುಲ
ಯೋಗಿ ಹೃದಯವೆ ಶಿವನ ಲಿಂಗವು
ಯೋಗಿಯಂತರ್ಜ್ಯೋತಿಲಿಂಗವ ಪೂಜ್ಯನಿಷ್ಠವನು ।
ಯೋಗಿ ಸಕಲೇಂದ್ರಿಯವು ಕಾಯವು
ಭೋಗಸಾಧನವೆಲ್ಲ ಶಿವಪೂ
ಜಾಂಗವೆಂದೇ ಭಾವಿಸುವನೈ ಪಡೆದು ಚಿರಮುಕ್ತಿ ॥ ೩೦ ॥

(೨೪) ಭಾವಾರ್ಪಣ ಸ್ಥಲಂ

ಪರಮಶಿವನೋಳೆಲ್ಲಭಾವಗ
ಳಿರದು ನಿಶ್ಚಲಭಾವದರ್ಪಿಸೆ
ಕರೆವರಾಸ್ಥಲವನ್ನು ಭಾವಾರ್ಪಣಮದೆಂದೆನುತ ।
ಸರುವಮಾನಸಚಿತ್ತ ನಿಷ್ಠದೊ
ಳಿರುವ ಯಿಷ್ಟಾರ್ಥಗಳನರ್ಪಿಸ
ಲರಿಯೆ 'ಪರಮಾನುಭವಚಿಂತಾರ್ಪಣವು' ಯೆನ್ನಿಪುದು ॥ ೩೧ ॥

ಭಾವಕಂಟಲು ಭೋಗದಾಸೆಯು
ಸಾವುಬದುಕಿನ ಬಂಧಬಿಗಿವುದು
ಭಾವಕಾರಣಮಲ್ತೆ ಬಂಧಕೆ ಮೇಣು ಮೋಕ್ಷಕ್ಕೆ ? ।
ಭಾವಶುದ್ಧದೆ ಶಿವನ ಭಾವಿಸೆ
ಭಾವಭರಿಸಿದ ಶಿವನೊಳಾಗುವೆ
ಭಾವನಿರ್ಮಲವೊಂದೆಕಾರಣ ಮೋಕ್ಷವಡೆಯಲ್ಕೆ ॥ ೩೨ ॥

ಮಾನಿ ಮೇಣಭಿಮಾನಿ ಭಾವಿಪ
ನಾನು ಮಾಡುವೆನೆಂತೆ ಪಡೆವೆನು
ನಾನುನಾನೆಂತೆಂಬ ಭಾವನೆ ಶಿವನ ಮರೆಸುವುದು ।
ಸ್ವಾನುಭಾವಿಗೆ ಶಿವನ ಶರಣಗೆ
ನಾನು ಶಿವನಿಹನೆಂಬ ಭಾವಿಗ
ದೇನುಕಾಡದು ಜಗದಿ ಸಂಚಿತದುಃಖದಾವರ್ತ ॥ ೩೩ ॥

ಭೋಗಿಜೀವನು ಭೋಗ್ಯವಸ್ತುವು
ಭೋಗಚೋದಕ ಶಿವನು ಮತ್ತೀ
ಭೋಗಯೋಗದ ವಿಶ್ವವುಂ ಶಿವನಯ್ಯ ಭಾವಿಪಗೆ ।
ರಾಗರಹಿತ ತ್ಯಾಗಬುದ್ಧಿಯು
ಮಾಗಿ ಫಲಿಪುದು ಮೋಕ್ಷಫಲವನು
ಯೋಗ ಶಿವನೊಳಾಗಲಾಕ್ಷಣ ಶಿವನೆಯಾಗುವನು ॥ ೩೪ ॥

ಮಾಡ್ವುದೆಲ್ಲವು ಶಿವನಪೂಜೆಯು
ಪಾಡ್ವುದೆಲ್ಲವು ಶಿವನಕೀರ್ತನ
ನೋಡ್ವುದೆಲ್ಲವು ಶಿವನದರ್ಶನವೆಂದು ಭಾವಿಪನ ।
ಆಡಿಪಾಡುವೊಡೆಲ್ಲು ಶಿವನನೆ
ನೋಡಿ ಮಾಡುವೊಡೆಲ್ಲು ಶಿವನನೆ
ಕೂಡಿ ನಲಿಯುವ ಭಾವಿತಾತ್ಮನ ಕರ್ಮ ಬಂಧಿಪುದೆ ? ॥ ೩೫ ॥

ಜನಿತ ಸೇಂದ್ರಿಯ ಸುಖವೆಯಾಗ
ಲ್ಲೆನಿತು ಕರ್ಮದ ದುಃಖವಾಗ
ಲ್ಲೆನಗೆ ಸೇರದೆ ಶಿವನಿಗರ್ಪಿತವೆಂದು ಭಾವಿಪನು ।
ತನಗೆತಾ ಬರೆ ಸುಖವು ಶಿವಕೃಪೆ
ಯೆನಿತೊ ದುಃಖವು ಶಿಕ್ಷಣಾರ್ಥವು
ತನಗೆ ಬಂದೊದಗಿದುದು ಶುಭಕಾಗೆಂಬ ಶಿವಯೋಗಿ ॥ ೩೬ ॥

## (೨೫) ಶಿಷ್ಯ ಸ್ಥಲಂ

ಪಾರಮಾರ್ಥಿಕ ಶಿಕ್ಷಣವನಾ
ಧೀರ ಶಿವಯೋಗಿಯೊಳು ಪಡೆಯುವ
ವೀರಶಿಷ್ಯನೆ ಸುಪ್ರಸಾದಾಯುಕ್ತ ಮೋಕ್ಷಾರ್ಥಿ ।
ಯಾರಭಾವಂ ಶ್ರೇಷ್ಠಗುರುವಿನ
ಪಾರಮಹಿಮೆಯೊಳಚಲಮಾಗಿಹು
ದಾರು ತನುಮನ ನಡೆಯುನಡಿಯಿಂ ಪೂಜ್ಯನವಶಿಷ್ಯ ॥ ೩೭ ॥

ಯಾರು ಶಾಂತನೊ ಮೇಣುದಾಂತನೊ
ಯಾರು ತಾಪಸಶೀಲವಾನನೊ
ಯಾರು ನೋಡುವ ಸರ್ವಸಮತೆಯ ನುಡಿವ ಸತ್ಯವನು ।
ಯಾರು ಗುರುವನು ಮೇಣು ಶಿವನನು
ಬೇರೆಯೆನ್ನದೆ ಭಕ್ತಿಮಾಡುವ
ಧೀರನವನೇ ಶ್ರೇಷ್ಠಶಿಷ್ಯನುಮುತ್ತಮೋತ್ತಮನು ॥ ೩೮ ॥

ಗುರುವೆ ಶಿವನೈ ಶಿವನೆ ಗುರುವೈ
ಹರಗು ಗುರುವಿಂಗಿನಿತೆಯಂತರ
ವಿರಸದಾತನೆ ಶಿಷ್ಯರೊಳುತ್ತಮನು ಸುವಿವೇಕಿ ।
ಗುರುವಿನಾಣತಿಯಂತೆ ಶಿಷ್ಯನು
ಪರಮಶಿವಮತ ಧರ್ಮನಡೆಯೋ
ಳಿರದೆ ಶಿವನಂ ಧ್ಯಾನದಿಂ ಮೇಣ್ ಜ್ಞಾನದೊಳು ಪೂಜ್ಯ ॥ ೩೯ ॥

ಜ್ಞಾನಿಶಿಷ್ಯನು ಮೀರನೆಂದುಂ
ಜ್ಞಾನಗುರುವಾಜ್ಞೆಯನು ಬೆಳಗುವ
ಜ್ಞಾನದಾರತಿ ಪಡೆದು ಸಿದ್ಧಿಯ ಶೈವನಿಷ್ಠೆಯೊಳು ।
ಜ್ಞಾನಗುರುವನಿಂದ ಭವಹರ
ಜ್ಞಾನಭೇಷಜವನ್ನು ಪಡೆದೇ
ಜ್ಞಾನಿಶಿಷ್ಯನು ಸುಖಿಯು ಶಾಂತನು ಮೇಣು ಮುಕ್ತಾತ್ಮ ॥ ೪೦ ॥

## (೨೬) ಶುಶ್ರೂಷು ಸ್ಥಲಂ

ಪರಮಗುರು ಪರಕಾಯನೊಳು ತಾ
ನಿರದೆ ಬೋಧೆಯ ಪಡೆವ ಶಿಷ್ಯನು
ಗುರುವು ಸೇವಾನಿರತ "ಶುಶ್ರೂಷು" ಸ್ಥಲಿಯುಮೆಂದೆನಿಪ ।
ಪರಮಶಿವ ಸಾಕಾರಕಾರಣ
ನಿರುವ ಗುರುವಿಂ ಶ್ರುತಿಯ ವಾಕ್ಯಗ
ಳಿರದೆ ಕೇಳುತ ಶಾಂತನಾಗುವ ಮೋಕ್ಷಪೊಂದುವನು ॥ ೪೧ ॥

ಕರುಣಕಿರಣವ ಬೀರೆ ದಿನಮಣಿ
ಸರಸಿಪಂಕಜಮಲರಿ ನಲಿವುದು
ಗುರುವುಬೋಧೆಯೊಳಂತೆನಲಿವುದು ಶಿಷ್ಯಹೃತ್ಕಮಲ ।
ಕಿರಣಸಾಸಿರನುದಯಮಾತ್ರದೊ
ಳುರುಳಿಬಿದ್ದಿಹ ಸೂರ್ಯಕಾಂತವ
ದಿರದೆ ಹೊಳೆಯುವತೆರದೆ ಶಿಷ್ಯನ ಹೃದಯ ಬೆಳಗುವುದು ॥ ೪೨ ॥

ಕರವ ಜೋಡಿಸಿ ಕಟಿಯ ಬಂಧಿಸಿ
ಪರಮಭಕ್ತಿಯೊಳಿಂತು ಶಿಷ್ಯನು
ಪರಶಿವಾದ್ವೈತಾತ್ಮತತ್ತ್ವದ ಜ್ಞಾನಬೆಳಗಲ್ಕೆ ।
ಇರುವುಪಾಯಗಳಾವವನ್ನನು
ಸರಿಪ ಬಗೆಯೆಂತೆಂದು ಕೇಳ್ವುದು
ಕರುಣೆಪನಿತುಂಕಾಲ ಗುರುವಿನಸೇವೆ ಮಾಡುವುದು ॥ ೪೩ ॥

ತಿಳಿಯಲ್ಯೋಗ್ಯದ ತತ್ತ್ವಮಾವುದ
ದುಳಿದವಸ್ತುಗಳೆಲ್ಲಿ ನಿಂತಿವೆ ?
ಗಳಿಸೆ ಮೋಕ್ಷವನಾರಕಾಣಲುಬೇಕು ? ಬಗೆಯೆಂತು ? ।
ಒಳಿತುಹೃದಯದೊಳೇಕನಿಷ್ಠೆಯ
ತಳೆದ ಶಿಷ್ಯನು ಬೇಡಲೀತೆರ
ಬಳಿಸಿನಿಂದಿಹ ಭವವಭೇದಿಪ ತತ್ತ್ವ ಗುರುಪೇಳ್ವ ॥ ೪೪ ॥

ಶಿವನು ಪರತರತತ್ತ್ವನೇಕನು
ಶಿವನು ಚಿನ್ಮಯನಿತ್ಯನಿರುಪಮ
ನವನನುಳಿದಿನ್ನೆಲ್ಲಜಗವುಮ್ಮಳಿಪುದಸ್ಥಿರವು ।
ಶಿವನೆ ನಾನಿಹನೆಂಬ ಭಾವದೆ
ಗವನು ಸಾಕ್ಷಾತ್ಕರಿಪ ನಿಷ್ಠೆಗೆ
ಭವವು ಭೇದಿಸೆ ಮುಕ್ತಿನೀಡುವ ನಿತ್ಯಮಂಗಳವ ॥ ೪೫ ॥

ಏನು ಶಿವನಿಂಗನ್ಯಮುಂಟೇ ?
ನೀನು ನಿನ್ನಂ ಶಿವನೆಯೆಂದರಿ
ನೀನು ನೆಲೆನಿಲೆ ವರಶಿವಾದ್ವೈತದೊಳು ಚಿರಮುಕ್ತ ।
ತಾನೆತಾನಾದಾತ್ಮಬೋಧಕ
ಜ್ಞಾನಗುರುವಿಂದಿಂತುಬೋಧೆಯ
ನಾನುವಂತಹ ಶಿಷ್ಯಗೆಲ್ಲವು ಪರಮಶಿವಮಯವು ॥ ೪೬ ॥

## (೧೭) ಸೇವ್ಯ ಸ್ಥಲಂ

ಗುರುವುವಚನಾಮೃತವ ನೀಂಟಲು
ಪರಮಬೋಧೆಯ ಫಲವ ಪಡೆವನು
ಗುರುವಸೇವಿತನಾಗಿ ಶುಶ್ರೂಷ ಸೇವ್ಯನೆಂದೆನಿಪ ।
ಗುರುವು ದಯಕರಿಸಿತ್ತ ಬೋಧೆಯ
ನರಿಯಲಾತಗೆ ಶಿವನು ಸಾಕ್ಷಾ
ತ್ಕರಿಸೆ ಶಿಷ್ಯನು ಗುರುವಿನಂತೆಯೆ ಪೂಜ್ಯನಾಗುವನು ॥ ೪೭ ॥

ಜ್ಞಾನಗುರುವರನಿಂದ ಪಡೆಯುವ
ಜ್ಞಾನಬಲದಿಂ ಜ್ಞಾನಿಯೆನಿಸುವ
ಜ್ಞಾನಿಶಿಷ್ಯನು ಗುರುವಿನಂತೆಯೆ ಪೂಜೆಗೊಳ್ಳುವನು ।
ತಾನೆ ಶಿವನಹನೆಂಬ ಭಾವ
ಸ್ವಾನುಭಾವವದಾಗೆ ಶಿವನೋಲ್
ತಾನು ಪೂಜ್ಯನು ಶಿವನೆಯಾಗುವನಯ್ಯ ಶಿವಯೋಗಿ ॥ ೪೮ ॥

ಹೊಮ್ಮಿ ಮಾಯಾಂಬುಧಿಯ ಬುದ್ಬುದ
ಬೊಮ್ಮಲೋಕಂಗಳನೆ ನುಂಗಿದೆ
ಬೊಮ್ಮನೊದಲಾಗೆಲ್ಲರುಂ ಮುಳುಗೇಳ್ವರದರಲ್ಲಿ ।

ನಮ್ಮ ಗುರುವಿನ ಕೃಪೆಯ ಪಡಬವು
ಹೊಮ್ಮ ವಿಗುಣಿತ ಮಾಯೆಸಾಗರ
ವೊಮ್ಮೆಗೀಂಟದೆ ರುದ್ರನೇತ್ರದೆ ಕಾಮಸುಟ್ಟಂತೆ ॥ ೪೯ ॥

ತಾಮ್ರಲೋಹವು ಪಾದರಸದಿಂ
ಹೇಮರೂಪವ ತಳೆವತೆರದೋ
ಳಾ ಮಹಾಗುರುಕರುಣಮಾತ್ರದೆ ಸೇವ್ಯ ಶಿವನಹನು ।
ಕಾಮಕೆರಳಿಸೆ ಶಿವನಭಾವಿಯ
ಕಾಮಸಂಹರ ರುದ್ರನೋಪರಿ
ಕಾಮವಶದಿಂ ದೂರನಾಗುವ ಪೂಜ್ಯನಾಗುವನು ॥ ೫೦ ॥

ಸೇವ್ಯಸಂಶಯ ಪಾಶಮುಕ್ತನು
ಸೇವ್ಯನಚಲಂ ಜ್ಞಾನಬೋಧೆಯೊ
ಳೀವ ಮುಕ್ತಿಯೊಳಂತೆ ಭವಭಯಮೂಲನಾಶದೊಳು ।
ಕಾವಸತ್ತಾನಂದ ಚಿನ್ಮಯ
ಭಾವಬೆಳಗುವ ಶಿವನ ನಿರುಪಮ
ಶೈವಚಿಂತಾಮಣಿಯ ಪರತರಪದದಿ ಲೀನಾತ್ಮ ॥ ೫೧ ॥

ವಿಶ್ವವೈಭವವರಿತು ಬಲ್ಲವ
ವಿಶ್ವಜನರಜ್ಞಾನದೂರನು
ವಿಶ್ವದಂತರ್ಯಾಮಿ ಶಿವನೊಲು ವಿಶ್ವಸೇವಿತನು ।
ವಿಶ್ವವೇದಿಯು ! ಶೈವಬೋಧಿಯು
ವಿಶ್ವವಂದ್ಯಂ ! ಶಾಶ್ವತಂ ಸ್ಥಿರ
ವಿಶ್ವನಾಥಂಗಾತ್ಮದಾಲಯನಾಗಿ ಪೂಜಿತನು ॥ ೫೨ ॥

ಇಂತು ರೇಣುಕಗೀತೆ ಬೋಧಿಪು
ದೆಂತು ಪರಶಿವ ಸುಪ್ರಸಾದಿಯು
ಶಂತಕಾಯಾರ್ಪಣೆಯು ಕರುಣಾಮೂರ್ತಿ ಜಗಸೇವ್ಯ |
ಸಂತತೇಂದ್ರಿಯಕರಣಭಾವನ
ಚಿಂತನಾತ್ಮಾರಾಮಗರ್ಪಿಸ
ಲೆಂತುಶಿಷ್ಯನೆ ಸೇವ್ಯನಾಗುವನೆಂಬುದಿದು ಪೂರ್ಣಂ || ೫೩ ||

ಹದಿನೇಳನೆಯ ಸಂಧಿ ಸಂಪೂರ್ಣಂ.

ಅಂತು ಸಂಧಿ ಹದಿನೆಂಟಕ್ಕಂ ಪದನು ಏಳುನೂರರುವತ್ತಕ್ಕಂ

ಮಂಗಳಮಸ್ತು.

# ಹದಿನೆಂಟನೆಯ ಸಂಧಿ

## ಪ್ರಾಣಲಿಂಗಿ ಸ್ಥಲಂ

ಸೂಚನೆ—ರೇಣುಕಾರ್ಯರು ಲಿಂಗದಂತ
ಪ್ರಾಣಲಿಂಗಿಸ್ಥಲದ ವಿವರವ
ಮಾಣದೋದಿಸಿ ಬೋಧಿಸಿದರಾಗಸ್ತ್ಯಮುನಿವರಗೆ ॥

ಶ್ರೀ ಪ್ರಸಾದಸ್ಥಲದ ಮಹಿಮೆಯ
ನಾಪ್ರಸಾದಿಯ ಗುಣವಿಶೇಷಣ
ದಾಪ್ರಸಂಗದೊಳರಿತೆನೈ ಶ್ರೀಗುರುವೆ ತವಮುಖದಿ ।
ಆಪ್ರಸಾದದ ವಾಣಿಯೊಳುನಾ
ಶ್ರೀಪ್ರಸಾದವನುಂಡು ತಣಿದಿಹೆ
ನೀಪ್ರಸಂಗಂ ಪ್ರಾಣಲಿಂಗಿಸ್ಥಲ ನಿರೂಪಿಸಲಿ ॥ ೧ ॥

ಪ್ರಾಣಲಿಂಗಿಸ್ಥಲದೊಳಾಶ್ರಿತ
ತಾಣ *ನವವಿಧ ಲಿಂಗದೀಸ್ಥಲ
ಮಾಣದೊರೆಯುವೆ ಹಂತಹಂತದೆ ಹೃದಯ ಮಿಡಿವಂತೆ ।
ಪ್ರಾಣಕಾತ್ಮಸ್ಥಲವು ಮೊದಲಿಗೆ
ಮೇಣದಂತರದಾತ್ಮವೊತ್ತಿಗೆ
ಜಾಣ ! ಪರಮಾತ್ಮಮಿದು ಮೂರೆಂದರಿಯಬೇಕಯ್ಯ ॥ ೨ ॥

---

*೧ ಆತ್ಮಸ್ಥಲಂ ೨ ಅಂತರಾತ್ಮಸ್ಥಲಂ ೩ ಪರಮಾತ್ಮಸ್ಥಲಂ ೪ ನಿರ್ದೇಹಾಗಮಸ್ಥಲಂ ೫ ನಿರ್ಭಾವಾಗಮಸ್ಥಲಂ ೬ ನಷ್ಟಾಗಮಸ್ಥಲಂ ೭ ಆದಿಪ್ರಸಾದಿಸ್ಥಲಂ ೮ ಅಂತ್ಯಪ್ರಸಾದಿಸ್ಥಲಂ ೯ ಸೇವ್ಯಪ್ರಸಾದಿಸ್ಥಲಂ ಎಂಬುದಾಗಿ ನವವಿಧಸ್ಥಲಗಳು.

ನಾಲ್ಕು ನಿರ್ದೇಶಾಗಮಸ್ಥಲ
ಬೇಕು ನಿರ್ಭಾವಾಗಮಸ್ಥಲ
ಸಾಕು ನಷ್ಟಾಗಮದೊಳಾದ್ಯಂತ್ ಸೇವ್ಯದಾಸೋಹ |
ಬೇಕು ವಿವರಣೆಯಿಂದೆಯಾಮುನಿ
ಜೋಕೆಯಿಂ ಕೇಳಂತೆ ಭಾವಿಸು
ಯೇಕಶಿವಕಳೆಯೊಳಗುಹೊರಗೆಲ್ಲೆಲ್ಲು ಬೆಳಗುವುದು ॥ ೩ ॥

## (೨೮) ಆತ್ಮ ಸ್ಥಲಂ

ಜೀವನಾತ್ಮವು ಕೂದಲಗ್ರಮ |
ದೀವಶತದೊಂದಂಶಮಿಹುದೈ
ಜೀವ ಸಂಚಿತಕರ್ಮಭೂಮಿಗೆ ಬೆಳಗುದೀಪದೊಲು
ಸೇವ್ಯ ಗುರುವರನೀವಬೋಧದೆ
ಜೀವಭಾವವು ನೀಗಿ ಪರಶಿವ
ಭಾವವಾಗೆ ಸ್ವಾನುಭಾವವು 'ಆತ್ಮ'ನೆಂದೆನಿಪ ॥ ೧ ॥

ಅಣುವುರೂಪನು ಹೃದಯದಾತ್ಮನು
ಗಣನೆಮೀರಿದ ಜೀವಿಯೊಳಗ
ನ್ನಿಣಿಕಿನೋಡಲು ಕರಣವಾಸಿತ ಕರ್ಮವಾಹಕನು |
ತನುವೆಯಿರದಿರಲೆಲ್ಲುಯಿರುತಿಹ
ನನಿಮಿತಂ ಮೇಣ್ ತಾನಿರಂಜನ
ಜನನಮರಣದ ಚಕ್ರಸುತ್ತಿಹನಾತ್ಮ ಭವಬಂಧಿ ॥ ೨ ॥

ಆತ್ಮನಲ್ಲವು ದೇಹವಿಂದ್ರಿಯ
ನ್ನಾತ್ಮವಲ್ಲವು ಬುದ್ಧಿಯುಂ ತಾ
ನಾತ್ಮನಲ್ಲವು ತಿಳಿಯೆ ಪೂರ್ಣಬ್ರಹ್ಮರೂಪನವ |
ಜಾತಜೋದಿತ ರಾಗಮಿರದಿರೆ
ಜಾತಿಪಟಿಕಕೆ ಬಣ್ಣಮುಂಟೇ
ನಾತ್ಮನಭಿಮಾನದೊಳು ದೇಹದಿ ಬಂಧಿಯಾಗಿಹನು ॥ ೩ ॥

ದೇಹಸಂಬಂಧಿಲ್ಲವಾತ್ಮಗೆ
ದೇಹಸಹಜದೊಳಿಲ್ಲಿಯಿಲ್ಲವು
ದೇಹಧಾರಣದಿಂದ ಭೋಗಿಪಕರ್ಮವಾಸನೆಯ ।
ದೇಹಿಯಾತ್ಮನು ದೇವನಲ್ಲವು
ಬಾಹ್ಯ ಜಡಚರಮಾವುದಲ್ಲವು
ದೇಹವೆಂತಿರಲಂಥ ಹೆಸರೋಳಾತ್ಮ ರಾಜಿಪನು ॥ ೭ ॥

ಅವನು ನಾನಾಕರ್ಮವಾಹಕ
ನವನು ನಾನಾಯೋನಿಯಾಶ್ರಿತ
ನವನು ನಾನಾಯೋಗತಜ್ಞನು ಬುದ್ಧಿಚಂಚಲನು ।
ಅವನು ನಾನಾಮಾರ್ಗವರ್ತಿಯ
ದವನು ತಾ ಸಂಕಲ್ಪಕಾರಿಯು
ಶಿವನ ಲೀಲಾಭಾಂಡಮಾತ್ರದೊಳಸ್ವತಂತ್ರನಿಹ ॥ ೮ ॥

ಅಸ್ವತಂತ್ರನು ಕಿಂಚಿತಜ್ಞನು
ತುಸುವೆ ಸತ್ತ್ವದ ಕರ್ತೃಶಾಲಿಯ
ದಸಮಬುದ್ಧಿಯು ಕರ್ಮವೆಳೆದೆಡೆ ಚಲಿಪ ಚಂಚಲಿಯು ।
ಅಸಮನಯನನು ಶಿವನುಚೋದಿತ
ವಿಷಮಸಂಸಾರ್ ಸ್ವರ್ಗನರಕವ
ನಸುವನೆತ್ತುತಲುಂಡುಭೋಗಿಪ ಭೋಗಿಜೀವನಿವ ॥ ೯ ॥

ಕರ್ಮಶೇಷದಿ ಜನ್ಮವೆತ್ತುವ
ಧರ್ಮಭೋಗಿಸಿ ಮೃತ್ಯುವಶನಹ
ಕರ್ಮಧರ್ಮದ ಚಕ್ರಸುತ್ತುವಗೆಲ್ಲಿ ವಿಶ್ರಾಂತಿ ? ।
ಕರ್ಮಧರ್ಮದ ಜೀವಭಾವಿಗೆ
ಮರ್ಮಘಾತಕ ಸರ್ವದುಃಖದ
ವರ್ಮನಾಶವು ಗುರುವುಬೋಧಿಸಿ ಜ್ಞಾನಬೆಳಗಲ್ಕೆ ॥ ೧೦ ॥

## (೨೯) ಅಂತರಾತ್ಮ ಸ್ಥಲಂ

ಪರಮಬೋಧವನೀಯಲಾಕ್ಷಣ
ಮುರಿದು ಬೂದಿಯು ಜೀವಭಾವಮ
ದಿರದೆ ಮೂಡುವುದಾತ್ಮಭಾವವು ಗುರುವುಕರುಣದೊಳು ।
ಶರಿರವಾಸದೊಳಿದ್ದು ಜೀವನು
ಶರಿರಬಂಧವ ಕಳೆದುಕೊಳ್ಳುವ
ನರಿತುನಿಜವಂ! ಶಿವನಭಾವದೊಳಂತರಾತ್ಮರತಿ ॥ ೧೧ ॥

ಜೀವಭಾವನಮಿಲ್ಲದಾತ್ಮನು
ಜೀವಪರಮರ ಮಧ್ಯವರ್ತಿಯು
ಜೀವಧರ್ಮವು ಶಿವನಧರ್ಮವಿವೆರಡನರಿತವನು ।
ಯಾವಮಾನವನುಚ್ಚನೀಚನು
ಜೀವಿಗಿದು ಮಮಕಾರಕಲ್ಪಿತ
ಭಾವವೆಂಬೀ ಜ್ಞಾನಿಯಂತರದಾತ್ಮರತನಿಹನು ॥ ೧೨ ॥

ಪದ್ಮಪತ್ರವು ಸರಸಿಮಧ್ಯದೊ
ಳಿದ್ದು ನೀರಿಂಗಂಟದಿರುವೋ
ಲಿದ್ದು ದೇಹದೊಳಾತ್ಮ ಬೆರೆಯ ಶರೀರಕರ್ಮದಲಿ ।
ಹದ್ದು ಗೂಡಿನೊಳಿದ್ದು ಗೂಡಿಗೆ
ಹೊದ್ದದಿರುವೋಲಾತ್ಮ ದೇಹದೊ
ಳಿದ್ದು ಬೆರೆಯದೆ ಹೊಳೆದು ಬೆಳಗುವ ಚೇತನಾಮಯನು ॥ ೧೩ ॥

ಮೋಡದೊಡ್ಡಿನ ಮಧ್ಯದುಡುಪತಿ
ಕೂಡಿ ಬೆರೆಯದೊಳಿರುವ ಪರಿಯೊಳು
ನಾಡುದೇಹದ ಬೀಡಿನೊಳಿಹನಾತ್ಮ ನಿಸ್ಸಂಗಿ ।
ನೋಡಲಾತ್ಮನುಪಾಧಿರಹಿತನು
ನೋಡುತಿರುವನು ನಿತ್ಯ ಶಿವನನೆ
ಕಾಡದವನನು ಮೋಹಮದಮಾತ್ಸರ್ಯ ದೇಹಗುಣ ॥ ೧೪ ॥

ಭೋಗಭೋಗಿಪ ಭೋಕ್ತೃವಾತ್ಮಗೆ
ಭೋಗಸಂಗಮದಂಟದಿರ್ಪುದು
ಭೋಗಿಭೂಷಣ ಶಿವನಕರುಣದೊಳಾತ್ಮ ಬೆಳಗುವುದು |
ಭೋಗಯೋಗದ ಸರ್ವಜೀವಿಗು
ನಾಗಭೂಷಣ ಶಿವನೆ ಚೋದಕ
ನಾಗಿ ಬೆಳಗಿಹ ಹೃದಯಮಧ್ಯದೊಳರಿವ ಶಿವಯೋಗಿ || ೧೫ ||

## (೩೦) ಪರಮಾತ್ಮ ಸ್ಥಲಂ

ಭವಕೆ ಬಂಧಿಪಜ್ಞಾನಮೂಲಂ
ಶಿವಪರಾತ್ಪರ ತತ್ತ್ವಭೇದಿಸ
ಲವನು ಶಿವನೊಳ್ಪೆರೆದು "ಶಿವಪರಮಾತ್ಮ" ನಾಗುವನು |
ಭವಿಸಿದಾನದಿ ಕಡಲಕೂಡುತ
ಲವಗೆ ತನ್ನಯ ನಾಮರೂಪವ
ಜವದೆಯರ್ಪಿಸುವಂತೆ ಜೀವಿಯು ಶಿವನೆಯಾಗುವನು || ೧೬ ||

ಸರುವರಾತ್ಮದೆ ಬೆಳಗುತಿಹನಾ
ಪರಮಶಿವನೋತ್ಕೃಷ್ಟತೇಜನು
ಪರಮಶಿವ "ಪರಮಾತ್ಮ" ನೆನಿಸಿಹನೆಲ್ಲ ಬೆಳಗುತಲಿ |
ಮೆರೆವ ಬ್ರೊಮ್ಹಾಂಡಗಳ ಬುದ್ಬುದ
ವಿರದೆ ಮುಳುಗೇಳುವವು ಮಾಯಾ
ಭರಿತ ಸಾಗರದಲ್ಲಿ ಶಿವನಿಂದವನೆ ಪರಮಾತ್ಮ || ೧೭ ||

ಅಗ್ನಿಯಿಂದುತ್ಪನ್ನ ಕಿಡಿಗ
ಳ್ಪಗ್ನಿಯೊಳಗೇ ಲಯವನೈದುವ
ವಗ್ನಿಕಿಡಿಯೊಲು ಜೀವಕೋಟಿಯು ಶಿವನ ಕೂಡುವವು |
ದ್ವಿಗ್ನಿಶರಧಿಯೊಳಿದ್ದ ತೆರೆಗಳು
ಲಗ್ನವಾಗುವತೆರದೊಳದರಲೆ
ದಗ್ಧವಾಗುತೆ ಜಗವಿದೆಲ್ಲವು ಶಿವನ ಬೆರೆಯುವುದು || ೧೮ ||

ಸರುವತತ್ತ್ವಾತೀತ ಪದಯುತ
ನರರ ಲೋಕಾತ್ಮಕನು ನಿರ್ಮಲ
ನಿರುಪಮೋತ್ತಮ ಶಿವನನರಿ ನೀನಾಗು " ಪರಮಾತ್ಮ " |
ಕಿರಣಸಾಸಿರವನ್ನು ಪಸರಿಸಿ
ಮೆರೆಯಲೀಜಗ, ರವಿಯು ಬೆಳಗುವ
ಪರಿಯೆ ಶಿವನಾನಂತತೇಜದೊಳೆಲ್ಲ ಬೆಳಗುವುದು || ೧೯ ||

ವಿಶ್ವಹೃದಯದಿ ರಮಿಪ ಶಂಕರ
ವಿಶ್ವಮಾಯೆಯ ಮೀರಿದಾತನು
ವಿಶ್ವದೊಳಿಹ ಜೀವರಾತ್ಮಾನಂದ ದೀವಿಗೆಯು |
ಕಶ್ಮಲಾಪಹನಾತ್ಮತೇಜನು
ವಿಶ್ವವಂದ್ಯನು ಶಾಶ್ವತಂ ಸ್ಥಿರ
ವಿಶ್ವದೊಳಿಹ ಜೀವಕೋಟಿಯ ನೆಲೆಯು ಪರಮಾತ್ಮ || ೨೦ ||

## (೩೧) ನಿರ್ದೇಹಾಗಮ ಸ್ಥಲಂ

ಪರಮಭಾಸುರ ಶಿವನಭಾವಿಯು
ವಿರತ ನಿರಹಂಕಾರಿಶೂನ್ಯನು
ಧರಿಸಿದೇಹವ ದೇಹಧರ್ಮದೆ ಮುಕ್ತ " ನಿರ್ದೇಹಿ " |
ಇರೆ ' ಶಿವೋಹಂಭಾವ ' ಯೋಗಕ
ರಿಗೆಲ್ಲಿಯ ದೇಹಭಾವನೆ ?
ಪರವನರಿದಿಹ ಯೋಗಿಯೋತ್ತಮನಿರುವ ನಿರ್ದೇಹಿ || ೨೧ ||

ಎಲ್ಲಿ ದೇಹಭ್ರಾಂತಿ ರತಿಸುಖ
ಮೆಲ್ಲ ಭವಭಯ ಮೂಲಕಾರಣ
ವೆಲ್ಲದಾಹಂಕಾರನಷ್ಟದೊಳೀಶನೊಳಿಹಗೆ |
ಸಲ್ಲಲಿತ ಶಿವಪರಧಿಗಾಳ್ದವ
ನೆಲ್ಲಿ ದೇಹದ ಚಿಂತೆಮಾಡುವ
ನೆಲ್ಲ ನಿಷ್ಕಲ ನಿಷ್ಟ್ರಪಂಚಾನಂದ ಚಿನ್ಮಯವು || ೨೨ ||

ಆತ್ಮನಪರಿಚ್ಛೇದ್ಯನಾಗಿಹ
ನಾತ್ಮ ಚಿನ್ಮಯನೆಂದು ಭಾವಿಪ
ನಾತ್ಮಬೇರೆಯದು ದೇಹಸಂಸ್ಥಿತರಾಗದಾದಿಯೊಳು |
ಆತ್ಮನಿತ್ಯಾನಂದರೂಪ ಚಿ
ದಾತ್ಮಪೂರ್ಣ ಜ್ಞಾನರೂಪ ನಿ
ಜಾತ್ಮನಮಲನ್ಮದ್ವಿತೀಯವು ಪೋಹವಿನ್ನೆಲ್ಲಿ ? || ೨೩ ||

ಇರಲುಪಾಧಿಯು ಭೇಧಕಾಣುವು
ದಿರುವ ಜಗದೊಳು ಮೇಣು ತನ್ನೊಳು
ವಿರತನಾನಿರುಪಾಧಿ " ಸೋಹಂ " ಭಾವಿಗೆಲ್ಲಿಹದು ? |
ಇರಲು ಭೇದದ ಬುದ್ಧಿಕಾಣುವ
ನಿರದೆ ಭಿನ್ನತೆಯನ್ನು ಜಗದೊಳು
ಪರಮ ಸಮತಾದರ್ಶಿಗೆಲ್ಲವು ಶಿವನ ತದ್ರೂಪ || ೨೪ ||

## (೩೨) ನಿರ್ಭಾವಾಗಮ ಸ್ಥಲಂ

ನೀನು ಬೇರೆಯೆ ? ಶಿವನು ಬೇರೆಯೆ ?
ತಾನುಕಾಣುವ ಜಗವು ಬೇರೆಯೆ ?
ನೀನುತಾನೆಂದೆನ್ನ ನಿರ್ಭಾವಾಗಮಸ್ಥಲಿಯು |
ನಾನು ಶಿವನಿಹೆನೆಂಬ ಭಾವದಿ
" ನಾನು " " ಶಿವ "ನೆಂಬುಭಯಮುಂಟೈ
ತಾನೆತಾನಾದಾತ್ಮಯೋಗಿಯೊಳೆರಡುಮಳಿದಿಹವು || ೨೫ ||

ನಿಷ್ಕಲಂಕಿತ ಚಿನ್ಮಯಾಂಬುಧಿ
ಹೊಕ್ಕು ಯೇಕೀಭವಿಸಿದಾತ್ಮನಿ
ಗೆಕ್ಕೆ ವರ್ಣಾಶ್ರಮವು ? ಸಂಸಾರ್ ಭ್ರಮಣೆ ದೇಹಗುಣ |
ವಾಕ್ಕು ಮನಸೆಂಬುಭಯದೂರನು
ದಿಕ್ಕುಶೂನ್ಯನು ಚಿನ್ಮಯಾಂಬರ
ವಿಕ್ಕಿದಾತನದೇನುಭಾವಿಪನಾರಕಾಣುವನು ? || ೨೬ ||

ಸೂರ್ಯ ಶುದ್ಧಾಶುದ್ಧಮೆನ್ನದೆ
ಬೀರುತಿರುವೋಲೆಲ್ಲುಬೆಳಕನು
ವೀರಪರಮಾದ್ವೈತಿ ಸಮತಾದರ್ಶಿ ನಿತ್ಯಸುಖಿ |
ಯಾರುಬೆದರಂ ಜನನಮರಣ
ಕ್ಕಾರಿಗಿಲ್ಲವೊ ಹಸಿವು ತೃಷೆಭಯ
ಯಾರು ಪೂರ್ಣಾನಂದದೊಳಿಹನಾತ ಪರಮಸುಖಿ || ೨೭ ||

## (೩೩) ನಷ್ಟಾಗಮ ಸ್ಥಲಂ

ಭೇದಶೂನ್ಯಂ ಜ್ಞಾನಬೋಧಾ
ಮೋದಮಗ್ನಂ ತ್ರಿಪುಟಿಮಯಜಗ
ಭೇದಶೂನ್ಯದೊಳಿದ್ದು 'ನಷ್ಟಾಗಮಿಯು' ತಾನೆನಿಪ |
ಆದಿಗಾದಿಯ ಶಿವನದರ್ಶಿಯು
ಭೇದಮರಿಯದೊಳವನ ಬೆರೆದಿರೆ
ವೇದ್ಯಮಪ್ಪುದೆ ಬೇರೆರೂಪಂ ಸ್ವಸ್ವರೂಪವಿನಾ ? || ೨೮ ||

ನಾನಕರ್ತನು ನಾನಕಾಯನು
ನಾನಚಿಂತ್ಯನು ನಾನಿರಂಜನ
ನಾನುನಾನಾಗಿರುವೆನೆಂಬೀಜ್ಞಾನಬೆಳಗುವನು |
ನಾನು ಶಾಂತನು ರಾಗರಹಿತನು
ನಾನುನೀನೆಂಬುಭಯಶೂನ್ಯನು
ತಾನುತನ್ನೊಳಿ ಲೀನನೈ ಶಿವಯೋಗಿಯೇನರಿಯ ? || ೨೯ ||

ಶಿವನೊಳೇಕೀಭವಿಸಿದಾತ್ಮನು
ಭುವಿಯ ಭೇದವ ಬಗೆಯದಾತನು
ಶಿವದಿ ಸಮರಸಿ ತಿಳಿವುದೇನನು ? ಯಾರು ತಿಳಿವವರು ? |
ಶಿವನ ಸತ್ತಾನಂದರೂಪವೆ
ಭುವನರೂಪದೆ ಬೆಳಗುತಿರುವುದು
ಭುವಿಯುಪಾಧಿಯ ಭೇದವಳಿದಗೆ ಶಿವವೆ ಬೆಳಗುವುದು || ೩೦ ||

## (೩೪) ಆದಿಪ್ರಸಾದಿ ಸ್ಥಲಂ

ಆದಿಗಾದಿಯ ಸೃಷ್ಟಿಮೂಲದ
ವೇದಸಂಸ್ತುತ ಶಿವನ ಕರುಣದೆ
ಭೇದವಿರಹಿತನಾಗಲವನಾದಿಪ್ರಸಾದಿತನು ।
ನಾದರೂಪಾತೀತ ಶಿವಕೃಪೆ
ವೇಧಿಸಲ್ಲದೆ ಜನನಮರಣದ
ಬಾಧೆದೂರವು, ಶುದ್ಧದೇಹಿಯು ಮುಕ್ತನಾಗುವನು ॥ ೩೧ ॥

ಶಿವಹಸಾದದ ಪರಮಸಂಪದಿ
ಶಿವನಭಾವನ ಭಾವಿತಾತ್ಮನು
ಶಿವನಿಗನ್ಯವ ಕಾಣನ್ಯೆ ಶಿವಯೋಗಿ ಜಗದೊಳಗೆ ।
ಭವದ ಬಂಧಚ್ಛೇದಮಾಗಲು
ಶಿವನಕರುಣಂಮಾತ್ರಕಾರಣ
ಭುವನಮೋಹಗ್ರಂಥಿ ಭೇದಿಸೆ ಶಿವನ ಬೆರೆಯುವನು ॥ ೩೨ ॥

ದಿವವನಾರವಿ ಬೆಳಗದಿರ್ದೊಡೆ
ಭುವಿಯಕತ್ತಲೆ ಹರಿಯಬಲ್ಲುದೆ ?
ಶಿವನಕರುಣೆಯದಾಗದಿರ್ದೊಡೆ ಬಿಡದು ಭವಬಂಧ ।
ಶಿವನು ಸರ್ವೋದ್ಧಾರ ಕಾರಣ
ಶಿವನು ಸರ್ವೋತ್ತಮನು ಶಂಭುವು
ಭುವನಜೀವಿಯ ಬಂಧಭವಹರ ಶಿವನ ಕರುಣದೊಳು ॥ ೩೩ ॥

## (೩೫) ಅಂತ್ಯಪ್ರಸಾದಿ ಸ್ಥಲಂ

ಜಗದ ಲಯ ಶಿವನಂತ್ಯನೆನಿಸುವ
ನಗುತ ಮೂವತ್ತಾರುತತ್ತ್ವಗ
ಳುಗವಮವಂತ್ಯಕೆ ಕರುಣದಾಶ್ರಯನಾತ ವರಕರುಣೆ ।

ಅಗಜೆಯಾಪ್ರಿಯನನುರಕರುಣಂ
ಸಿಗುತಲಂತ್ಯ ಶ್ರೀಪ್ರಸಾದಿಗೆ
ಮುಗಿದು ಕರವನು ಬುಧರು ಕೀರ್ತಿಪರೆಲ್ಲ ಜಗವರಿಯೆ ॥ ೩೪ ॥

ದೇವ, ಮಾನವ, ಪಶುವು, ಪಕ್ಷಿಗ
ಳೀವ ವೈವಿಧಮಾದ ಮಾಯಾ
ಭಾವಲಯಮಾಗಲ್ಕೆ ಪರದೋಳೆಲ್ಲ ಶಿವಮಯವು ।
ಕಾವ ಶಿವತಾ ಶ್ರೀಪ್ರಸಾದವ
ನೀವನಾಕ್ಷಣಕಿಲ್ಲಕಲ್ಪನೆ
ಯಾವನಾವನ ತಿಳಿವ ತಿಳಿಯಲ್ಲುಳಿವುದೇನಿನ್ನು ? ॥ ೩೫ ॥

ಗಾಢನಿದ್ರೆಯೊಳೊರಗಿದಾತನು
ನೋಡದಿರುವೋಲಾವವಸ್ತುವ
ನೋಡ ಜೀವನ್ಮುಕ್ತ, ಜಗದೊಳು ವಿವಿಧವಸ್ತುಗಳ ।
ನೋಡಮಿಲ್ಲದ ನೀಲಿಯಾಗಸ
ನೋಡೆ ಸರ್ವವ್ಯಾಪಿ ಸಹಜದೆ
ನಾಡೆ ಸಂಸ್ಥಿತ ನಿರ್ವಿಕಾರವು ! ಮುಕ್ತನಂತಿರುವ ॥ ೩೬ ॥

ಮಾಡಿ ನೀಡುವಡೇನುಮಿಲ್ಲವು
ಕೂಡೆ ನಿಶ್ಚಲಸುಖದ ಸುಗ್ಗಿಯೊ
ಳಾಡಿ ತಣಿದಿಹ ನಿತ್ಯತೃಪ್ತನು ! ಮುಕ್ತಶಿವಯೋಗಿ ।
ರೂಢಿಮೂಲಂ ಭೇದವಳಿಯಲು
ನೋಡುತಿರುವನು ಚಿದ್ವಿಲಾಸದೆ
ನೋಡುವೆನ್ನನ್ನೇತರಿಂದೇನಿವ ಶಿವಾದ್ವೈತಿ ? ॥ ೩೭ ॥

## (೩೬) ಸೇವ್ಯಪ್ರಸಾದಿ ಸ್ಥಲಂ

ಶಿವನರೂಪದೆ ಗುರುವು ಸೇವ್ಯ
ನ್ನವನ ಬೋಧೆಯೆ ಸುಪ್ರಸಾದ
ಮ್ಮಿವರೊಳೇಕೋಭಾವನಾತ್ಮನು ಸೇವ್ಯಕರುಣಿತನು ।

ಶಿವನೆ ಸಾಕ್ಷಾತ್ಕರಿಸಿ ಗುರುವಿರ
ಲವನ ಕರುಣಾ ಶ್ರೀಪ್ರಸಾದವು
ಶಿವನ ಪರಮಾನಂದವೆನಿಪುದು ಸೇವ್ಯದೀಸ್ಥಲಿಗೆ || ೩೮ ||

ಪರಮಪಾವನ ತತ್ತ್ವವೇ ಗುರು !
ಗುರುವುಕರುಣವೆ ಪರಮತತ್ತ್ವ
ಮ್ಮರಿಸಲೊಂದೇಭಾವಮವರೊಳುಳಿವುದಿನ್ನೇನು ? |
ಪರಮಶಿವನಾನಂದರೂಪನ
ನಿರುತ ನಿರುಪಮ ಭೇದರಹಿತನ
ಬೆರೆದ ಶಿವಯೋಗಂಗೆ ಬೇರೆಂಟುರತಿಯದಿರಲುಂಟೆ ? || ೩೯ ||

ಜ್ಞಾನಿಯೇನಂ ಪಡೆದು ತೃಪ್ತಂ ?
ಜ್ಞಾನಿಯೇನಂ ಪಡೆಯೆ ಮುಕ್ತಂ ?
ಜ್ಞಾನಿ ಪರಮಾನಂದದೊಳಿರೆ ಮುಕ್ತಮೇಣ್ತೃಪ್ತ |
ಜ್ಞಾನಪೂರ್ಣವು ಶಿವನ ಬೆಳಗಲು
ಜ್ಞಾನಕಿಂ ಮಿಗಿಲಮೃತಮುಂಟೇ ?
ಜ್ಞಾನಮಿಂಟದಗನ್ಯಭೋಜ್ಯವು ರುಚಿಪುದಿನ್ನುಂಟೇ ? || ೪೦ ||

ಶರಿರವಿಡಿದುಂ ಭ್ರಾಂತಿಶೂನ್ಯಗೆ
ಪರಶಿವೈಕ್ಯಗೆ, ಜ್ಞಾನರೂಢನಿ
ಗಿರವು ಬಾಹ್ಯದ ಮೇಣದಂತರ ಕರ್ಮಪೂಜೆಗಳು |
ಪರಮಗುರುವಾಚರಿಪ ಪೂಜೆಯು
ಸರುವರೋನ್ನತಿಗಾಗಿಮಾತ್ರವು
ಬೆರೆದು ಪರದೊಳ್ ಧ್ಯಾನಪೂಜೆಗೆ ಪಡೆವುದೇನವನು ? || ೪೧ ||

ಶರಿರದಂಡಿಪ ಹಠದಯೋಗಮ
ದಿರದೆ ತಪಿಸುವ ರಾಜಯೋಗವ
ಧುರದೆ ಜಪಿಸುವ ಮಂತ್ರಯೋಗ ಧ್ಯಾನಯೋಗಗಳು |

ಅರಿಯಲಿಚ್ಛಿಪ ಜ್ಞಾನಬೋಧೆಯು
ಪರವನರಿಯುವ ತತ್ತ್ವಮನನವು
ಪರಶಿವಾದ್ವೈತಾತ್ಮಗೇಕ್ಯೆ ಪ್ರಾಣಲಿಂಗನಿಗೆ ? ॥ ೫೩ ॥

ಇಂತು ರೇಣುಕಗೀತೆ ಬೋಧಿಪು
ದೆಂತು ಲಿಂಗಪ್ರಾಣಿ ಯೋಗದೊ
ಳಂತರಾತ್ಮನ ಪರಮಶಿವನೊಳು ಬೆರಸಿ ಸೇವ್ಯನಹ ।
*ಅಂತರಾತ್ಮನ ತಿಳಿವನಾತ್ಮನು
ಮಂತೆ ಪರಮಾತ್ಮವನು ತಿಳಿವನ
ನಂತತೇಜದ ಬೆಳಗಿನಾರತಿ ಬೆಳಗು ಶಿವಯೋಗಿ ॥ ೫೪ ॥

ಹದಿನೆಂಟನೆಯ ಸಂಧಿ ಸಂಪೂರ್ಣಂ.

ಸಂಧಿ ಹತ್ತೊಂಭತ್ತಕ್ಕಂ ಪದನು ಎಂಟುನೂರ್ರ್ಮರಕ್ಕಂ

ಮಂಗಳಮಸ್ತು.

---

*ಆತ್ಮಾಮೇವಶುದ್ಧ್ಯಂ ತ್ಯಾಂ ಜ್ಯೋತಿರಹಂ ವಿರಜಾವಿಪಾಪ್ಮಾ ಭೂಯಾಸಮ್ ।
ಅಂತರಾತ್ಮಮೇವಶುದ್ಧ್ಯಂ ತ್ಯಾಂ ಜ್ಯೋತಿರಹಂ ವಿರಜಾವಿಪಾಪ್ಮಾ ಭೂಯಾಸಮ್
ಪರಮಾತ್ಮಾಮೇಶುದ್ಧ್ಯಂತ್ಯಾಂ ಜ್ಯೋತಿರಹಂ ವಿರಜಾವಿಪಾಪ್ಮಾ ಭೂಯಾಸಮ್ ॥
—ತೈತ್ತರೀಯ ಅರಣ್ಯಕ (೧೦-೬೬)

# ಹತ್ತೊಂಭತ್ತನೆಯ ಸಂಧಿ

## ಲಿಂಗಶರಣ ಸ್ಥಲಂ

ಸೂಚನೆ—ಲಿಂಗಸಂಭವ ರೇಣುಕಾರ್ಯರು
ಮಂಗಳಾತ್ಮಕ ವಾಣಿಯೊಳು ಪರ
ಲಿಂಗಶರಣಸ್ಥಲದ ಮಹಿಮೆಯನೊರೆದರಾಮುನಿಗೆ ||

ಪ್ರಾಣಲಿಂಗಸ್ಥಲದೊಳಾಶ್ರಯ
ತಾಣ ವಿವರವನರಿತೆನ್ನೈ ತವ
ವಾಣಿ ಮಧುರಾಮೃತವನೀಂಟಿದೆ, ಹೃದಯ ತಣಿವಂತೆ |
ಮಾಣದೆನ್ನುದ್ಧಾರಗಯ್ಯಲು
ರೇಣುಕಾರ್ಯನೆ ಲಿಂಗದಾಶ್ರಯ
ತಾಣ ಶರಣಸ್ಥಲದೆ ಬೆರೆಯಲು ಕರುಣದೋದಿಪುದು || ೧ ||

ಲಿಂಗಶರಣಸ್ಥಲದೊಳಾಶ್ರಿತ
ಮಂಗಳಾತ್ಮಕಮಾದ ಹನ್ನೆರ
ಡಂಗಮಿರುವೀಸ್ಥಲದ ವಿವರವನೊರೆವೆನಾಲಿಪುದು |
ಲಿಂಗದೀಕ್ಷಾ ಪಾದದುದಕವು
ಲಿಂಗಶಿಕ್ಷಾ ಪಾದದುದಕವು
ತುಂಗಮಹಿಮೆಯ ಜ್ಞಾನಪಾದೋದಕವು ಮೂರಾಯ್ತು || ೨ ||

ಕ್ರಿಯೆಯು ಭಾವಂ ಜ್ಞಾನನಿಷ್ಪತಿ
ಕೆಯೊಳು ಪಿಂಡಾಕಾಶ ಬಿಂದ್ವಾ
ಕಯವು ಮಹದಾಕಾಶ ತಾಣಗಳಿಂತಿವಾರಾಯ್ತು |

ಕ್ರಿಯೆಯು ಭಾವಂ ಜ್ಞಾನಕಳೆಯಿಂ
ಮಯದ ಮಾರ್ಗಾವರ್ತಿ ಶರಣನ
ನಯದ ನಡೆಯೊಳಿಂತು *ಹನ್ನೆರಡುಂಟು ನಿಲ್ದಾಣ ॥ ೩ ॥

## (೩೭) ದೀಕ್ಷಾ ಪಾದೋದಕ ಸ್ಥಲಂ

ಗುರುವು ಶಿಷ್ಯಾನಂದದೈಕ್ಯವು
ಪರಶಿವಾದ್ವೈತಾತ್ಮಜ್ಞಾನವು
ಪರಮನಿತ್ಯಾನಂದವುಂ ಪಾದೋದಕದ ದೀಕ್ಷೆ ।
ಇರುವನಾದದ ಶಬ್ದವೊರೆವುದು
ಪರತರಾನಂದವನು ಮತ್ತಿರೆ
ದೊರೆವ'ದುದಕವು' ಪರಮದರಿವನು ಪಾದಮುದಕದೊಳು ॥ ೪ ॥

ಪಾದಶಬ್ದದೆ ಗುರುವುನಿಗದಿತ
ವಾದರುದಕದೆ ಶಿಷ್ಯನಿಗದಿಯು
ಪಾದಪಾದೋದಕದಲೈಕ್ಯವೆ ದೀಕ್ಷೆಯೆನ್ನಿಪುದು ।
ಪಾದಪರಮಾನಂದ ಕರುಣದ
ಬೋಧೆ ಶಿಷ್ಯನಜ್ಞಾನ ತುಂಬಲು
ಪಾದಮುದಕದೊಳೈಕ್ಯಮಿದುವೇ ಪರಶಿವಾದ್ವೈತ ॥ ೫ ॥

ಚಿರಪರಂಜ್ಯೋತಿಪ್ರಕಾಶನೊ
ಳಿರಿತ ಪರಮಾನಂದಭಾವಿಯೊ
ಳಿರದು ಭೇದವು ಕಾಣನಾಶಿವಯೋಗಿ ಭೇದವನು ।
ಗುರುವು ಪರಮಾನಂದ ಬೋಧಂ
ಗಿರದು ದೇಶದ ಕಾಲಭೇದಂ
ಪರಮತೃಪ್ತನು ನಿತ್ಯಸಂಯುಮಿ ಬೇರೆಹಾರೈಸನ್ ॥ ೬ ॥

---

* ೧ ದೀಕ್ಷಾಪಾದೋದಕಸ್ಥಲಂ ೨ ಶಿಕ್ಷಾಪಾದೋದಕ ಸ್ಥಲಂ ೩ ಜ್ಞಾನ ಪಾದೋದಕಸ್ಥಲಂ ೪ ಕ್ರಿಯಾನಿಷ್ಪತ್ತಿಸ್ಥಲಂ ೫ ಭಾವನಿಷತ್ತಿಸ್ಥಲಂ ೬ ಜ್ಞಾನ ನಿಷ್ಪತ್ತಿಸ್ಥಲಂ ೭ ಪಿಂಡಾಕಾಶ ಸ್ಥಲಂ ೮ ಬಿಂದ್ವಾಕಾಶಸ್ಥಲಂ ೯ ಮಹಾಕಾಶಸ್ಥಲಂ ೧೦ ಕ್ರಿಯಾಪ್ರಕಾಶಸ್ಥಲಂ ೧೧ ಭಾವಪ್ರಕಾಶಸ್ಥಲಂ ೧೨ ಜ್ಞಾನಪ್ರಕಾಶಸ್ಥಲಂ ಎಂಬ ೧೨ ವಿಧ ಶರಣಸ್ಥಲದಲ್ಲಿ.

ಪರಶಿವಾನಂದೈಕ್ಯಯೋಗದೊ
ಳಿರದು ಮತ್ತಿನ್ನೇತರಾಶೆಯು
ಪರಮವಿರತನು ತೃಪ್ತಸಂಯಮಿ ನಿತ್ಯನಿರ್ಮಲನು ।
ಗುರುವುಕರುಣಾಮೃತದೆ ನಿರ್ಮಿತ
ಮಿರುವುದರಿವಿನ ಮಧುರದೋಗರ
ಕರುಣವುಂಡವಗನ್ಯರುಚಿಪುದೆ ? ಯೋಗಿ ಭವದೂರ ॥ ೭ ॥

## (೩೮) ಶಿಕ್ಷಾಪಾದೋದಕ ಸ್ಥಲಂ

ಜ್ಞಾನಮಯರಾ ಗುರುವುಶಿಷ್ಯರ್
ಸ್ವಾನುಭಾವದ ಪರಮಶಿಕ್ಷಕ
ರಾನುತಾನೆಂತೆಂದು ಭಾವಿಸದಂತೆ ಸಮರಸರು ।
ಜ್ಞಾನಮತ್ತಾನಂದಮೀವೀ
ಸ್ವಾನುಭಾವಿಗಳಲ್ಲಿ ಸಮರಸ
ವೇನುಮುಂಟಾಸ್ಥಲವೆ ಶಿಕ್ಷಾಪಾದ ಮೇಣುದಕ ॥ ೮ ॥

ಪರಮಗುರುವಿನ ಯುಕ್ತಿಮಂಥನ
ವಿರದೆ ಕಡೆಯಲು ಶಾಸ್ತ್ರಸಾಗರ
ದೊರೆವುದದರಿಂದನುಭವಾಮೃತಸುಮನ ಶಿವಗಣಕೆ
ಅರಿವು ಪರಮಾಕಾಶಮಾರ್ಗದೊ
ಳಿರುವ ಮುಕ್ತಿಯ ರಾತ್ರಿ ಹೃದಯದೊ
ಳಿರದೆ ಬೆಳಗಲ್ ಜ್ಞಾನಚಂದ್ರನು ನೋಡ್ವರಾನಂದ ॥ ೯ ॥

ನಾಡೆಮುಕ್ತನು ದೇಶಕಾಲದಿ
ಮಾಡೆ ಪರಮಾನಂದದರ್ಶನ
ನೋಡಿಕೇಳಲು ತಿಳಿದುಕೊಳಲಿನ್ನೇನು ಮಿಗದಣ್ಣ ।
ಗಾಢವಾತ್ಮಾನಂದತೃಪ್ತಿಗೆ
ಕಾಡಬಲ್ಲುದೆ ವಿಷಯಸುಖರತಿ ?
ಊಡಿ ತೃಪ್ತಗೆ ಗಂಗೆಜಲದೊಳು ಕೂಪಜಲಬೇಕೆ ? ॥ ೧೦ ॥

ಅಲೆಗಳೇಳದ ಸುಖದಸಾಗರ
ಕೊಲಿದು ಮುಳಿಗಿದ ಸಾಮರಸ್ಯನು
ನಲಿಯದಾನಂದಾಂತ್ಯಮುಂಟೇನೊಂದಿ ಬೆರೆದಿರಲು ।
ಚಲುವಚಂದ್ರಮ ಗುರುವುಕೃಪೆಯಿ
ಮ್ಮಲರಿದಂತಹ ಹೃದಯ ಕನ್ನೈ ।
ದಿಲೆಯ ಬಾಡಿಸಲರಿದು ಭವಭಯ ಚಕ್ರವಿಭ್ರಮವು ॥ ೧೧ ॥

## (೩೦) ಜ್ಞಾನಪಾದೋದಕ ಸ್ಥಲಂ

ಜ್ಞಾನಗುರು ಸಾಕಾರ ಶಿವನೊಳು
ಜ್ಞಾನಪಡೆದಾನಂದಮಯನೊಳು
ಜ್ಞಾನಿಶಿಷ್ಯನ ಸಾಮರಸ್ಯವು ಜ್ಞಾನಪಾದೋದ್ಕ ।
ಜ್ಞಾನಚಂದ್ರಮನುದಯದೋಳ
ಜ್ಞಾನತಿಮಿರವು ಹರಿಯೆ ಯೋಗಿಯು
ಜ್ಞಾನ ಪರಮಾನಂದರೂಪಂ ಸ್ವಸ್ವರೂಪದೊಳು ॥ ೧ ॥

ರಾಹುಮುಕ್ತದೆ ಶಶಿಯವಿದ್ಯಾ
ರಾಹುಮುಕ್ತದೆ ಜೀವಶಶಿಯುಂ
ಬಾಹ್ಯವಂತರ ಬೆಳಗುವಾನಂದಾತ್ಮ ನಿರ್ಮಲರು ।
ಬಾಹ್ಯದಾಗಸದಲ್ಲಿ ರಾಜಿಪ
ಬಾಹುಪೂರ್ಣನು ಚಂದ್ರನುದಯಿಸೆ
ಬಾಹುಲಾಂಬುಧಿಯುಕ್ಕುವಂತೆಯೆ ಜೀವನಾನಂದ ॥ ೧೩ ॥

ವಿರಮಿಸುತ್ತಲೆ ಮಾಯೆಗತ್ತಲೆ
ಪರಮಬೋಧದ ರವಿಯು ಮೂಡುವ
ನಿರದೆ ಸಂಯಮಿ ಯೋಗನಿದ್ರಿತನಾಗಿ ವಿರಮಿಸುವ ।
ಅರಿಯದಜ್ಞರಿಗಿದು ವಿಚಿತ್ರವು
ಹರಿಯೆ ಕತ್ತಲೆ ಸೂರ್ಯನುದಯದೆ
ನಿರತರಾಗರೆ ಜನರು ಕಾರ್ಯದೆ ಬೇಕುಬೇಕೆನುತ ॥ ೧೪ ॥

ಆದಿರಹಿತಮಜ್ಞಾನನಾಶದೆ
ಬೋಧಗೋಳ್ವಾನಂದಯೋಗಿಯು
ಬಾಧೆದೂರನು ಜಗಕೆ ಭಿನ್ನನು ನಿರುಪಮಾಧಿಕನು ।
ಆದಿಗಾದಿಯ ಪರಮತೇಜದೆ
ಭೇದರಹಿತನು ಕೂಡಿಬೆರೆಯ
ಲ್ಲಾದಿಮಾಯೆಯ ವಿಶ್ವಕಲ್ಪನೆ ಮೂಡದೆಂದೆಂದೂ ॥ ೧೫ ॥

ಪರವ ಸಾಕ್ಷಾತ್ಕರಿಸಿಕೊಂಡವ
ನಿರುವ ನಿತ್ಯಾನಂದವೋದದೆ
ಹರಿವಿರಂಚಿಯ ರುದ್ರರವಿಗಳ ಸಾಮ್ಯಕಿಂಬೆಲ್ಲಿ ? ।
ಪರಮನಿತ್ಯಾನಂದಲೋಲಗೆ
ಹರಿವಿರಂಚಿಗಳಾದಿ ದೇವರು
ಮಿರುವ ಪದಗಳು ಗೌಣ ಸುಖಕರಮಚಿರತಾನಿಹುದು ॥ ೧೬ ॥

ವಿಷಮವಿಶ್ವದೊಳೆಲ್ಲ ನರರುಂ
ವಿಷಯಸುಖವನು ಬಯಪರಲ್ತೇ
ನೊಸರುವಲ್ಪದ ಸುಖವದಷ್ಟನೆ ಸವಿಯುವಿಚ್ಛೆಯೊಳು ।
ವಿಷಯಸುಖಕೇ ಹರಿವ ಜನಮನ
ವಿಷಯದಾಚೆನ ನಿತ್ಯಸುಖವನು
ರಸನೆ ಬಣ್ಣಿಸಬಾರದಾನಂದವನು ವಾಂಛಿಸದೆ ॥ ೧೭ ॥

## (೪೦) ಕ್ರಿಯಾನಿಷ್ಪತ್ತಿ ಸ್ಥಲಂ

ಹುರಿದಬೀಜಮದಂಕುರಿಪುದೇ
ನರಿತ ವರಶಿವಯೋಗಿ ಗಯ್ಯುವ
ಕರುಮವಾವುದು ಮರಳಿಜನ್ಮಕೆ ಹೇತುವಾಗಿರದು ।
ತೊರೆದಹಂಕೃತಿಗೈವ ಯೋಗಿಯು
ಕರುಮತಾನೇಗೈಯ್ಯಬಲ್ಲುದು ?
ಕೆರೆಯನೀರ್ಪ್ರತಿಬಿಂಬ ಕೊಳೆಯುಂ ಚಂದ್ರಗುಂಟೇನು ? ॥ ೧೮ ॥

ಅಂಟನುಂಡೆಯ ಹಾಲುತುಪ್ಪದೆ
ಕಂಠಭರ್ತಿಗುಮುಂಡು ತಣಿದಂ
ಗಂಟದಿರುವ್ರೋಲ್ ಜಿಡ್ಡು-ರುಚಿಯಂ ಸವಿದ ನಾಲಗೆಗೆ ।
ಎಂಟುಗೇಣಿನ ದೇಹವಾಸದೆ
ನಂಟನಾ ಶಿವಯೋಗಿಗಯ್ಯ
ಲ್ಲಂಟಲರಿಯವು ಕರ್ಮಫಲಗಳಿಗವನು ನಿರ್ಲಿಪ್ತ ॥ ೧೯ ॥

ಮುಟ್ಟ ಜೀವನ್ಮುಕ್ತಪದದೊಳು
ನೆಟ್ಟನವತಾಗ್ಯೆವ ಕರ್ಮವು
ಸುಟ್ಟ ಹಗ್ಗದೊಳಿರುವ ತೋರಿಕೆ ಶಿವನೊಳಡಗುವುದು ।
ಮೆಟ್ಟನಿಲ್ಲುವ, ನಡೆವ, ನೋಡುವ
ಹುಟ್ಟುಗುಣತಾ ಕರ್ಮವಲ್ಲವೆ ?
ಬಿಟ್ಟು ಫಲದೋಳಾಸೆ ಕರ್ಮದೆ ಯೋಗಿ ನಿಷ್ಕರ್ಮಿ ॥ ೨೦ ॥

ಕರ್ಮಫಲಿಸುವ ಫಲಮನೊಲ್ಲನು
ಕರ್ಮಭೋಗದೊಳಿಚ್ಛೆಮಾಡನು
ಕರ್ಮಕಾರಣ ಹಲವು ಫಲಗಳು ಫಲಿಪುದಿನ್ನೆಂತು ? ।
ನಿರ್ಮಲಾಂತಃಕರಣಶುದ್ಧನು
ಸರ್ವಪೂರ್ಣಾನಂದಭಾವಿಯು
ಕರ್ಮಫಲಗಳಿಗೆಳಸನ್ಯೆ ಶಿವಯೋಗಿ ಚಿರತೃಪ್ತ ॥ ೨೧ ॥

## (೪೧) ಭಾವನಿಷ್ಪತ್ತಿ ಸ್ಥಲಂ

ಭಾವವಿರದ್ಯೆ ಜ್ಞಾನ ಕೇವಲಿ
ಗಾವಭಾವಕ್ಕೆಡೆಯಿಯಿಲ್ಲವು
ಭಾವಿಪಾದರು ಭವದ ಮೋಚಕನಾದ ಶಿವನನ್ನು ।
ಭಾವಪರಿಪೂರ್ಣಂಗೆ ಯೋಗಿಗೆ
ಭಾವವರ್ಜನಮಿರದು ಶಿವನೊಳು
ಭಾವತುಂಬುವ ಶಿವನೆ ಭವಸಾಗರದ ತಾರಕನು ॥ ೨ ॥

ಭವದ ದುಃಖವು ಶಮನವಾಗಲು
ಶಿವನಸೇರಿದ ಜೀವಿ ಶಾಂತನು
ಪವನದಗ್ನಿಯು ದಹಿಸಿ ಕಟ್ಟಿಗೆ ಶಮನಗೊಳ್ಳುವೊಲು ।
ಶಿವನ ಭಾವಿಸಿ ಭಾವ ಬೆಳಗಲು
ಭವದೊಳಾಸಿತ ಪೂರ್ಣಮಾಗಲು
ಭವದ ಸಾಧನದಿಂದ ಸಾಧಿಸಲುಳಿವುದಿನ್ನೇನು ? ॥ ೨೩ ॥

ಭಾವದೊಡನಾಜ್ಞಾನದೇಕತೆ
ದೇವಶಿವನೋಳೊಂದುಗೂಡಲು
ಭಾವಿಪಾತ್ಮನು ಮರೆತು ತನ್ನನು ಶಿವನೆಯಾಗುವನು ।
ಭಾವವಿಲ್ಲದೆ ಜ್ಞಾನಮುಂಟೇನ್ ?
ಯಾವ ಭಾವಂ ಜ್ಞಾನಶೂನ್ಯವು ?
ಭಾವ ಮೇಣ್ ಶಿವಜ್ಞಾನದಾಶ್ರಯ ಮೋಕ್ಷಕಾರಣವು ॥ ೨೪ ॥

## (೪೨) ಜ್ಞಾನನಿಷ್ಪತ್ತಿ ಸ್ಥಲಂ

ಹರನ, ಪೂರ್ಣಾನಂದ ನಿತ್ಯನ,
ವರದ ಪರಮಾಕಾಶಲಕ್ಷಣ
ನಿರಮಲಶಿವವಿಲೀನಚಿತ್ತಗೆ ಜ್ಞೇಯಮಿನ್ನೆಲ್ಲಿ ? ।
ಪರಮಶಿವನೋಳೆಲ್ಲಬಲ್ಲೀ
ಪರಶಿವಾದ್ವೈತಾತ್ಮಗುಂ ಪಿರಿ
ದರವೆಯಿಲ್ಲವು ಯೋಗಿ ಸಾಕ್ಷಾತ್ ಶಿವನು ಸರ್ವಜ್ಞ ॥ ೨೫ ॥

ತಿಳಿವನಾರೈ ? ತಿಳಿವು ಯಾವುದು ?
ತಿಳಿವು ತಿಳಿವವರಲ್ಲಿ ಭೇದಮ
ದುಳಿವುದೇನೈ ಸರ್ವಭೇದವ ದೂರಿಕರಿಸಿದಗೆ ? ।
ಅಳಿಸಿ ವಿಶ್ವದ ಭೇದಕಲ್ಪನೆ
ಹೊಳೆಯು ಶರಧಿಯ ಸೇರಿ ಬೆರೆದೊಲು
ತಳೆಯೆ ಸಮರಸಭಾವ ಶಿವನೊಳು ಜ್ಞಾನನಿಷ್ಪತ್ತಿ ॥ ೨೬ ॥

## (೪೩) ಪಿಂಡಾಕಾಶ ಸ್ಥಲಂ

ಪೂರ್ಣ ಪಿಂಡಾಕಾಶ ದೇಹದ
ಪೂರ್ಣಮಾದೊಲು ತೋರ್ಪುದಾದರು
ಪೂರ್ಣಗೊಳ್ಳುವುದಯ್ಯ ದೇಹೋಪಾಧಿ ದೂರಾಗೆ ।
ಪೂರ್ಣನಾತ್ಮಂ ! ಬ್ರಹ್ಮದಂತೆಯೆ
ಪೂರ್ಣನಿರುತಿಹನಯ್ಯ ಸಹಜದೆ
ಪೂರ್ಣ ಪಿಂಡಾಕಾಶವಿಂತರಿತಾತ ಶಿವಯೋಗಿ ॥ ೨೭ ॥

ಕುಂಭದೊಳಾಕಾಶ ಪೂರ್ಣವೆ ?
ಡಿಂಬದೊಳಿರುವಾತ್ಮ ಪೂರ್ಣನೆ ?
ಕುಂಭಪಿಂಡೋಪಾಧಿಯೊಳುಡಿಗಿಹರೆ ತೋರಿಕೆಗೆ ? ।
ಕುಂಭದೊಳಾಕಾಶ ಪೂರ್ಣವು
ಡಿಂಬದೊಳಿರುವಾತ್ಮ ಪೂರ್ಣನು
ಕುಂಭಪಿಂಡೋಪಾಧಿದೂರಂ ಸ್ವಸ್ವರೂಪಮದು ॥ ೨೮ ॥

ಅಂತರಂಗಸ್ಥಿತನನಂತು ಮ
ಹಂತನೀಲಾಕಾಶರೂಪ ಚಿ
ರಂತ ಶಿವಮದ್ವೈತಲಕ್ಷಣನೆಂದು ಭಾವಿಪುದು ।
ಅಂತರಂಗದಿ ಶುದ್ಧಭಾವದೊ
ಳಿಂತು ನೆನೆಯುತ್ತಿರಲು ಸಂತತ
ಸ್ವಾಂತರೊರೆವರು ನಿಜಕು ಪಿಂಡಾಕಾಶನೆಂದೆನುತ ॥ ೨೯ ॥

ಕಾಯ ಮೂವತ್ತಾರುತತ್ತ್ವದೆ
ಪಾಯನಿರ್ಮಿತ ದೇವಮಂದಿರ
ಕಾಯದೊಳಿಹ ಹೃದಯಪೀಠಂ ಜ್ಞಾನದೀಪಿಗೆಯು ।
ರಾಯ ಪರಮೇಶ್ವರನೆ ಮೂರ್ತಿಯು
ಕಾಯವಿಡಿದಿಹ ಜೀವರೆಲ್ಲರೊ
ಳಾಯವರಿತೇ ಹೃದಯಕಮಲದ ಪೀಠಶೋಭಿತನು ॥ ೩೦ ॥

ಸಪ್ತಧಾತುಗಳಿಂದ ಕೂಡಿದ
ಗುಪ್ತಗಾಮಿನಿ ತುಂಗೆ ಹೊಳೆಯೋಳ್
ವ್ಯಾಪ್ತಮಾದೀ ಚರ್ಮಹೊದಿಕೆಯ ದೇಹದುರ್ಗದೊಳು ।
ಸುಪ್ತದಳಗಳ ಹೃದಯಕಮಲವು
ಸಪ್ಪಣಪ್ಪನ ರಾಣಿವಾಸವ
ದೊಪ್ಪಿ ನೀಲಾಕಾಶ ನಿರ್ಮಲಜಲದೊಳಿರ್ಪಂತೆ ॥ ೩೧ ॥

ಅಂತರಾಕಾಶದೊಳು ಮಧ್ಯದೊ
ಳಂತ್ಯಪಾರಮ್ಯಂಗಳಿರದಿಹ
ಶಂತಮಯಶಿವ ಜಾಗರಿರುವನು ಚಿತ್ಸ್ವರೂಪದೊಳು ।
ಚಿಂತಿಸವನನು ಭೇದರಹಿತನ
ಸಂತರಾನಂದುಕ್ಕಿ ಪಾತನ
ನಿಂತು ಮೃಣ್ಮಯಘಟವು ಚಿನ್ಮಯ ಶೂನ್ಯಕಿಂಬೆನುವೋಲ್ ॥ ೩೨ ॥

## (೪೪) ಬಿಂದ್ವಾಕಾಶ ಸ್ಥಲಂ

ಬಿಂದುವೆನಿಪುದು ಜೀವಹೃದಯಕೆ
ಸಂದು, ಸೂಕ್ಷ್ಮಾಕಾಶ ಹೊರಗಡೆ
ಬಂದು ಬೆರೆಯಲು ತಾನು ಸರ್ವವ್ಯಾಪಿಯೆನ್ನಿಸದೆ ? ।
ಬಿಂದುವೋಲ್ ತನ್ನಂತರಾತ್ಮನ
ನೊಂದೆತೆರದೊಳು ತಿಳಿದ ಯೋಗಿಯ
ನಂದು ಬಿಂದ್ವಾಕಾಶವೊಂದಿದನೆಂದು ಗುರುತಿಪರು ॥ ೩೩ ॥

ವಾಯು ಸರ್ವವ್ಯಾಪಿಯಾದರು
ಕಾಯವಿಡಿದಿಹ ಸರ್ವಜೀವದೆ
ಹಾಯುತೊಳಹೊರಗವನು ತಾನೇ "ಪ್ರಾಣ"ನೆನ್ನಿಸುವ ।
ರಾಯ ಪರಮೇಶ್ವರನು ಜೀವಿಯ
ಕಾಯದೋಳಡಗಾತ್ಮನೆನಿಸುವ
ವಾಯು ಸರ್ವವ್ಯಾಪಿಯಾದೋಲಾತ್ಮನಿರುತಿಹನು ॥ ೩೪ ॥

ಜಗದೊಳಪರಿಮಿತಾಗ್ನಿಯೊಂದೇ
ನುಗಿಯುವಗ್ನಿಯು ವಿದ್ಯುದಗ್ನಿಯು
ಝುಗಝುಗಿಪುದೈ ಹಲವುಹೆಸರೊಳಗ್ನಿ ಹೊಳೆಯುತಲಿ ।
ಜಗದಪತಿ ಶಿವನೊಬ್ಬನೊಬ್ಬನೆ
ಜಗದಚೇತನ ಭೇದರಹಿತನು
ಯುಗಯುಗಾಂತರದಿಂದ ಸಂಸ್ಥಿರ ಬೆಳಗಿನಾಬೆಳಗು ॥ ೩೫ ॥

ಜೀವರೆಲ್ಲರ ಚಿತ್ತ ನಿರ್ಮಲ
ವೀವ ದರ್ಪಣದಲ್ಲಿ ಶಿವತಾ
ನೋವಿ ನೋಡುತ ಹೃದಯಗನ್ನಡಿ ಬಿಂಬಿಪೋಲ್ಕಾಣ್ಬ ।
ಪಾವನಾತ್ಮವ ಬೆಳಗಲಾಶಿವ
ಜೀವರಾಶಿಯ ಹೃದಯಕಮಲದೊ
ಳಾವಭೇದವನೆಣಿಸದಾಶ್ರಯವಡೆದು ವಿಭುವೆನಿಪ ॥ ೩೬ ॥

ದಿವವನೇರುವ ಸೂರ್ಯನೊಬ್ಬಾ
ತವನ ತೇಜವದೆಲ್ಲು ಬೆಳಗದೆ
ಭುವನ ಹೊಳೆವುದು ಸೂರ್ಯ ಸರ್ವವ್ಯಾಪಿ ತೇಜದೊಳು ।
ಶಿವನುತಾನೇಕೈಕನಂತೆಯೆ
ಶಿವಪರಾತ್ಪರ ಪರಮತೇಜವು
ವಿವಿಧಭಕ್ತಿಯ ಶಕ್ತಿಸಂಗದೆ ಸರ್ವಗತಮಿಹುದು ॥ ೩೭ ॥

## (೪೫) ಮಹಾಕಾಶ ಸ್ಥಲಂ

ಪರಮನಂಡಾಕಾಶದೊಳಗು
ಮ್ಮರಿಯೆ ಪಿಂಡಾಕಾಶದೊಳಗು
ಮ್ಮಿರದುಭಿನ್ನವು । ಯೋಗಿ ಸಮತಾಭಾವದಿಂದಿಹನು ।
ಚರಿಪ ವರಶಿವಯೋಗಿಯಾತ್ಮವು
ಪರಮಶಿವನುಮ್ಮೊಂದೆಭಿನ್ನನು
ಮಿರದಭೇದಜ್ಞಾನಕೆಂಬರ್ ಸ್ಥಲಮಹಾಕಾಶ ॥ ೩೮ ॥

ಇಲ್ಲ ಭಿನ್ನಾಕಾಶ ಘಟಮಠ
ದಲ್ಲಿ ! ಪಿಂಡಾಂಡಾತ್ಮದೊಳಗು
ಮ್ಮೆಲ್ಲ ಬೊಮ್ಮಾಂಡಾತ್ಮನಿರುವನು ! ಭೇದವಿರದೆಲ್ಲು !
ಎಲ್ಲ ಜಡಚೇತನದಿ ಶಿವತಾ
ನಿಲ್ಲದಿರುವೆಡೆಯಿಲ್ಲವೆಂದೇ
ನೆಲ್ಲತನ್ನೊಳು ತನ್ನನೆಲ್ಲೂ ಯೋಗಿ ನೋಡುವನು || ೩೯ ||

ಸರ್ವತೋಮುಖ ನಿತ್ಯತೃಪ್ತನು
ಸರ್ವತೋಭುಜ ದಿಗ್ದಿಗಂಬರ
ಸರ್ವಲೋಚನ ವಾಙ್ಮನಾತಿಗನನುಪಮಾಧಿಕನು |
ಸರ್ವಭಕ್ಷಕ ರೂಕ್ಷಚಿಂತನ
ಸರ್ವಶಿಕ್ಷಣ ಶಿಷ್ಟರಕ್ಷಣ
ಶರ್ವ ಸರ್ವೇಶ್ವರನು ! ಸತ್ಯಾನಂದ ಚಿನ್ಮಯನು || ೪೦ ||

ಧ್ಯಾನಧಾರಣ ಯೋಗಮೂಲಂ
ಸ್ವಾನುಭಾವಿಗೆಮಾತ್ರ ವೇದ್ಯಂ
ಸಾನುರಾಗದಿ ಭಜಿಪ ಭಾವಿಗೆ ಲಿಂಗರೂಪಶಿವ |
ಮಾನಕೌತುಕದೊಳಪ್ರಮೇಯನು
ತಾನಗೋಚರನತಿಭಯಂಕರ
ತಾನೆತಾನಾದಾತ್ಮಯೋಗಂ ಜ್ಯೋತಿಮೂಲಶಿವ || ೪೧ ||

ಲಿಂಗಬಿಟ್ಟನ್ನಿಲ್ಲನಾವುದು
ಲಿಂಗತಾಚಗಭರಿತ ಮಿರುವುದು
ಲಿಂಗಪರಮಾಕಾಶಲಕ್ಷಣ ಪರಮಶಿವರೂಪ
ಲಿಂಗವನುಪಮವಾದಿಗಾದಿಯು
ಲಿಂಗಕಾಲಂ ಕ್ರಮವು ಕಲೆಗಳ
ನುಂಗಿನೊಣೆದಾಕಾರವರ್ಜಿತ ಶಾಂತಶಂತಮಯ || ೪೨ ||

ಲಿಂಗಬೋಧಾನಂದಭಾಸವು
ಲಿಂಗಮುಖತಾ ಜ್ಯೋತಿರೂಪವು
ಲಿಂಗಪರಮಾಕಾಶರೂಪವು ಮೇಣುಮವ್ಯಕ್ತ ।
ಲಿಂಗನಿರ್ಗುಣ ಮೇಣಗೋಚರ
ವಂಗಲಿಂಗಾನಂದಭಾವದೆ
ಲಿಂಗರೂಪವನೈದಿ ಯೋಗದೊಳಲ್ಲೆಯಡಗುವುದು ॥ ೪೩ ॥

ಜ್ಞಾನಪರಮಾನಂದರೂಪಂ
ಜ್ಞಾನ ಸರ್ವೋತ್ತಮವಲಂಘ್ಯಂ
ಮೌನಿಯೋತ್ತಮರದನು ಪರಮಾಕಾಶವೆನ್ನುವರು ।
ಫೇನಬುದ್ಬುದ ತೆರೆಯಮಾಲೆಯು
ತಾನು ಕಡಲಿಂ ಬೇರೆಯಿರದೋಲ್
ಜ್ಞಾನನಿಧಿ ಶಿವನಿಂದ ನಿರ್ಮಿತ ವಿಶ್ವಶಿವರೂಪ ॥ ೪೪ ॥

ತರುವುಮೂಲವು ಮೇಣುಕಾಂಡವು
ಹರೆಯುಕೊಂಬೆಯು ಪತ್ರಪುಷ್ಪವು
ಮರದರೂಪವನೊಂದಿಯಿರುವಡೆ ಯಿಲ್ಲಭಿನ್ನತೆಯು ।
ಚಿರಚರಾತ್ಮಕ ಜಗವಿದೆಲ್ಲವು
ಪರಮಶಿವನಿಂ ಬೇರೆಯಿಲ್ಲವು
ನಿರುತನಿತ್ಯವು ಪರಮಸತ್ಯವು ವಿಶ್ವಶಿವನಂತೆ ॥ ೪೫ ॥

ತಾರೆ ನೀಹಾರಿಕೆಯು ಸೂರ್ಯನು
ಬೇರೆಬೇರೆಯೆ ಬೆಳಗುತಿರುವೊಲು
ತೋರ್ಪುದೀಬ್ರಹ್ಮಾಂಡ ಶಿವನೊಳು ಭಿನ್ನಭಿನ್ನದೊಳು ।
ಪೂರ ಪೂರ್ಣೋಪಾಧಿದೂರವು
ಚಾರು ಪರಮಾಕಾಶ ಜಗದಾ
ಧಾರಭಿತ್ತಿ ಪ್ರಕೃತಿಯಾಡೊಂಬಲವು ನಿರ್ಮಲವು ॥ ೪೬ ॥

## (೪೬) ಕ್ರಿಯಾಪ್ರಕಾಶ ಸ್ಥಲಂ

ವರದ ಪರಮಾಕಾಶರೂಪನ
ಪರಮಪೂರ್ಣಾನಂದಕಾರಣ
ಕರನ ಶಿವನನ್ನಾತ್ಮರೂಪದೊಳಾವಗಂ ತಾನು |
ಪರಮ ಯೋಗಾರೂಢನಾಗುತ
ಲಿರದಲನುಸಂಧಾನಗೈಯುವ
ನರಿಯೆ ಲೋಕದಿ ಶಿವನ ಯೋಗಕ್ರಿಯೆಯ ಬೆಳಗುವನು ॥ ೪೭ ॥

ಅರರೆ! ಪರಮಾನಂದ ಚಿನ್ಮಯ
ನಿರವು ಪರಮಾಕಾಶ ಸದೃಶವು
ಪರಮಪೂರ್ಣವು, ನಿಷ್ಕಲಂಕವು ಚಿರದ ಚೇತನವು |
ಪರಮತೇಜನ ನಿತ್ಯನಿರ್ಗುಣ
ನಿರವಿನಲ್ಲಿಯೆ ಚಿತ್ತವೃತ್ತಿಯ
ನಿರದೆ ಲಯಗೊಳಿಸಿರುವ ಯೋಗಕ್ರಿಯೆಯು ಶಿವಶಕ್ತಿ ॥ ೪೮ ॥

ಎಲ್ಲಬಲ್ಲವನೆಲ್ಲುಚರಿಸುವ
ನೆಲ್ಲಸೃಷ್ಟಿಸಬಲ್ಲ ಶಿವನ
ನ್ನಿಲ್ಲೆ ತನ್ನೊಳು ಸಾಮರಸ್ಯದಿ ನೆನೆವ ಶಿವಯೋಗಿ |
ಎಲ್ಲಯಿಂದ್ರಿಯವಿದ್ದರುವ್ಮ್ರವ
ನೆಲ್ಲವಂತರ್ಮುಖದೆ ನಿಲ್ಲಿಸು
ತಲ್ಲೆ ಸಾಕ್ಷಾತ್ಕರಿಸಿ ಶಿವನಾನಂದದೋಳಿಹನು ॥ ೪೯ ॥

ಪರಮಶಿವತಾನಚಲ ನಿರ್ಗುಣ
ನಿರುಪಮಾಧಿಕ ನಿರ್ವಿಕಾರನು
ಕರುಣಿ ದುರ್ಗುಣದೂರ, ಸದ್ಗುಣಭರಿತ ಭವದೂರ |
ಶರಣನಾ ಶಿವಯೋಗಿ ಸತತವು
ಹರನ ಸದ್ಗುಣ ನಿರ್ಗುಣಂಗಳ
ನಿರದೆ ಪರಿಭಾವಿಸುವನಾನಂದಾತಿಶಯದೊಳಗೆ ॥ ೫೦ ॥

## (೪೭) ಭಾವಪ್ರಕಾಶನ ಸ್ಥಲಂ

ಫೇನಬುದ್ಬುದ ತೆರೆಯಮಾಲೆಗ
ಳೇನು ಕಡಲಿಂ ಭಿನ್ನಮಿಹವೇನ್ ?
ಮಾನವಾತ್ಮದೆ ಬುದ್ಧಿಯಾದಿಗಳಂತಭಿನ್ನಗಳು ।
ಜ್ಞಾನಯೋಗಿಯು ಬುದ್ಧಿಯಾತ್ಮದೊ
ಳೇನುಭೇದವನೆಣಿಸದಂತೆಯೆ
ತಾನು ಭಾವಿಸನಾದಕಾರಣ ಭಾವ ಬೆಳಗುವನು ॥ ೫೧ ॥

ಶಿವನರೂಪವು ಜಗಮಿದೆಲ್ಲವು
ಭುವನದಿಂ ನಾ ಬೇರೆಯಿಲ್ಲವು
ಶಿವನೆ ನಾನಿಹಸೆಂದು ಭಾವಿಸೆ ಭವವು ಬಾಧಿಸದು ।
ಭವದ ವಿಷಯದೆ ಬೆರೆಯದಿರುವಾ
ಶಿವನ ಭಾವಮುದಚಲವಾಗಲು
ಜವದೊಳೇಳುವ ಯೋಗಿಭಾವಗಳೆಲ್ಲ ಶಿವಮಯವು ॥ ೫೨ ॥

ಶಿವನಭಾವಿಸಿ ಕರ್ಮವಳಿದವ
ನವನು ಜಗದೋಳದ್ವಿತೀಯನು
ಶಿವಸಮಾನನು ಶಿವನಿಗನ್ಯವನವನು ಭಾವಿಸನು ।
ಭವದ ಭವಣೆಯ ಬಂಧ ಕಳೆದವ
ನವನು ಕೇವಳನಾತ್ಮಭಾವಿಯು
ಷ್ಟುವನ್ನೊಳೇಳುವ ಕರಣವೃತ್ತಿಗಳೆಲ್ಲ ಶಿವವೃತ್ತಿ ॥ ೫೩ ॥

ವಿವಿಧ ರಾಗದ್ವೇಷಭಾವನ
ಭವಕೆ ಬಂಧಿಸೆ ಮೂಲಕಾರಣ
ಶಿವನಯೋಗಿಯೊಳೆಲ್ಲಭಾವನ ಶಾಂತಗೊಂಡಿಹವು ।
ರವಿಯ ಮುತ್ತಲು ತಮಕೆ ಸಾಧ್ಯವೆ
ಭವದವಿದ್ಯೆಯುಮಂತೆ ಯೋಗಿಯ
ಶಿವನಭಾವಿಯ ಭವಕೆ ಬಂಧಿಸಬಾರದೆಂದೆಂದೂ ॥ ೫೪ ॥

## (೪೮) ಜ್ಞಾನಪ್ರಕಾಶ ಸ್ಥಲಂ

ಮುಕ್ತಯೋಗಿಯು ಜ್ಞೇಯಶೂನ್ಯನು
ಯುಕ್ತದರಿಂ ತ್ರಿಪುಟರಹಿತನು
ಮುಕ್ತಜ್ಞಾನಿಗೆ ಶಿವನಹೊರತಿನ್ನಿಲ್ಲವಾಶ್ರಯವು ।
ಮುಕ್ತಿಬೋಧಕದಾತ್ಮತತ್ತ್ವ
ಯುಕ್ತಮಾದೀ ಶಿವಾದ್ವೈತಂ
ಮುಕ್ತರರಿವಿನ ವಿಷಯ ಶಿವನುಂ ಜ್ಞಾನವೆನ್ನಿಪುದು ॥ ೫೫ ॥

ಅಂಗಕಾರ್ಯೋಪಾಧಿ ಪರಶಿವ
ಲಿಂಗಕಾರಣದಿಂದ ಕೂಡಿರ
ಲಂಗಲಿಂಗಗಳೆರಡುತಾ ನಿರುಪಾಧಿಕದಲೊಂದೇ ।
ಲಿಂಗಜ್ಞಾನ ಶ್ರೀಪ್ರಕಾಶದೊ
ಳಂಗಲಿಂಗದ ಸಾಮರಸ್ಯದೊ
ಳಂಗಲಿಂಗದ ನಾಮರೂಪಗಳೆರಕಗೊಂಡಿಹವು ॥ ೫೬ ॥

ಪರಮ ಪೂರ್ಣಾನಂದರೂಪನ
ಪರಮಸತ್ತಾಕಾರ ಜಗಮಯ
ಮಿರುವಲಕ್ಷಣದರಿವೆ ಪರಮಜ್ಞಾನವೆನ್ನಿಪುದು ।
ಅರಿವುಪಾಧಿಯೆ ಶೂನ್ಯಮಾಗಲು
ಪರಮಬೋಧವು ತಾನೆ ಹೊಳೆವುದು ।
ಅರಿವೆತಾನೆಲ್ಲೆಲ್ಲುತೋರ್ಪುದು·ತಾನೆತಾನಾಗಿ ॥ ೫೭ ॥

ಪರಶಿವಾದ್ವೈತಾತ್ಮಿಯನುಭವ
ಮರಣ ಮಾಯಾಬಂಧ ಭಯಹರ
ಪರಮಮೋಕ್ಷಕೆ ಮೂಲಕಾರಣ ಯೋಗಿ ನಿರ್ಲಿಪ್ತ ।
ಪರಮಶುದ್ಧನು ನಿತ್ಯನಿರುಪಮ
ಪರಮಭಾಸುರ ಸತ್ಯಶುಭಕರ
ನೆಂತು ಶಿವಮಯನಾದ ವರಶಿವಯೋಗಿ ಸರ್ವಗತ ॥ ೫೮ ॥

ಇಂತು ರೇಣುಕಗೀತೆ ಬೋಧಿಪು
ದೆಂತು ಲಿಂಗಸ್ಥಲದೆ ಶರಣನು
ಶಂತಮಯ ಗುರುವಿಂವ ದೀಕ್ಷಿತನಾಗಿ ಸಮತೆಯನು ।
ಕಂತುಹರ ಗುರು ಶಿಷ್ಯಭಾವದೊ
ಳಂತೆ ಪಿಂಡಾಕಾಶದಾದಿಯೊ
ಳಂತೆ ನೈಜಕ್ರಿಯೆಯು ಭಾವವು ಜ್ಞಾನದೊಳು ಕಾಂಬ ॥ ೫೯ ॥

ಹತ್ತೊಂಭತ್ತನೆ ಸಂಧಿ ಸಂಪೂರ್ಣಂ.

ಅಂತು ಸಂಧಿ ಇಪ್ಪತ್ತಕ್ಕಂ ಪದನೆಂಟುನೂರರುವತ್ತೆರಡಕ್ಕಂ

ಮಂಗಳಮಸ್ತು.

# ಇಪ್ಪತ್ತನೆಯ ಸಂಧಿ

## ಐಕ್ಯ ಸ್ಥಲಂ

ಸೂಚನೆ— ಪರದ ಲಿಂಗಾನಂದ ಗುರುವರ
ಕರುಣದೊರೆದರು ಲಿಂಗಷಟ್‌ಸ್ಥಲ
ದಿರವ ಲಿಂಗೈಕ್ಯಸ್ಥಲಾಂತರ ಭೇದವಿವರವನು ॥

ಗುರುವೆ ಶರಣಸ್ಥಲದ ಮಹಿಮೆಯ
ನರುಪಿ ಪರಮಜ್ಞಾನ ಬೆಳಗಿದೆ
ಅರಿತೆನೆಲ್ಲಾ ವಿಶ್ವಮಯವೆಂಬ ಮರ್ಮವನು ।
ವರಗಣಾಧಿಪ ಲಿಂಗಶರಣನು
ಪರದೊಳೈಕ್ಯತೆ ಪಡೆಯಲಿರುವೀ
ಪರಮಲಿಂಗೈಕ್ಯಸ್ಥಲಾಶ್ರಿತ ಭೇದ ವಿವರಿಪುದು ॥ ೧ ॥

ಕೇಳು ಮೌನಿಯೆ! ಲಿಂಗದೈಕ್ಯನು
ತಾಳುವೀಸ್ಥಲಭೇದ ನವವಿಧ*
ಪೇಳ್ವೆನಾಲಿಸು ವಿವರಲಕ್ಷಣ ಲಿಂಗದೋಳ್ವೆರೆಯೆ ।
ಕೇಳು ಸೇವ್ಯನ [1]ಸುಪ್ರಸಾದವ
ಬಾಳು [2]ಶಿಷ್ಟಾದನದಿ [3]ಜಡಚರ
ಮೇಳಲಯಿಸಲ್ ಸ್ವಸ್ವರೂಪವ ಭಾವಿಸನುದಿನವು ॥ ೨ ॥

ಯೋಗಿ! [4]ಭಾಂಡವಿವೇಕ ಸಂಯುತ
ನಾಗಿ [5]ಭಾಜನನಂತೆ ಶಿವಸಮ
ನಾಗಿ ಪರಶಿವಶಕ್ತಿಗಾಶ್ರಯವಿತ್ತು ಶೋಭಿಪುದು ।

---

* ೧ ಸ್ವೀಕೃತಪ್ರಸಾದ್ಯಸ್ಥಲಂ. ೨ ಶಿಷ್ಟೌದನಸ್ಥಲಂ. ೩ ಚರಾಚರಲಯಸ್ಥಲಂ
೪ ಭಾಂಡಸ್ಥಲಂ, ೫ ಭಾಜನಸ್ಥಲಂ.

ಯೋಗ[೬]ದಂಗಾಲೇಪ್ಯನಾಗ್ಯೆ
ತ್ಯಾಗದಿಂ [೭]ಸ್ವಪರಾಜ್ಞನಾಗ್ಯೆ
ಆಗೆ [೮]ಭಾವಾಭಾವನಾಶವು [೯]ಶೂನ್ಯವೈಜ್ಞಾನ || ೩ ||

## (೪೯) ಸ್ವೀಕೃತ ಪ್ರಸಾದ ಸ್ಥಲಂ

*ಮಾತೃ ಮಾನಂ ಮೇಯಮಿಂತಿವ
ನೇತಿಗಳೆಯುತ ಶಿವನಕಾಣುವ
ನಾತ; ನಿರುತಂ ಸ್ವಸ್ವರೂಪವನೈದಿ ನೆಲೆನಿಲುವ ।
ಆತನದ್ವೈತಾತ್ಮಬೋಧವು ।
ಹೂತುಮಲರಲು ಪೂರ್ಣಜ್ಞಾನವು;
ಸೋತ ಭೇದಜ್ಞಾನವಾತನ ಭವಕೆ ಬಂಧಿಪುದೇ ? || ೧ ||

ಅಗ್ನಿಕುಂಡದೊಳೆಸೆದಕಾಷ್ಟಮ
ದಗ್ನಿಕುಂಡದೆ ಸುರಿದತೈಲಮ
ದಗ್ನಿರೂಪವ ತಳೆಯುತುರಿವೋಲ್ ಜ್ವಾಲಲೀಲೆಯೊಳು ॥
ಅಗ್ನಿನೇತ್ರವು ಸೀಯೆ ಸುಟ್ಟರೆ
ದಗ್ಧವಾದೀಜಗದ ಜಡಚರ
ವಗ್ನಿನೇತ್ರಂ ಶಿವನರೂಪದಿಮಾತ್ರ ತೋರುವುದು ! || ೨ ||

---

೬ ಅಂಗಾಲೇಪಸ್ಥಲಂ, ೭ ಸ್ವಪರಾಜ್ಞಸ್ಥಲಂ, ೮ ಭಾವಾಭಾವಲಯಸ್ಥಲಂ. ೯ ಜ್ಞಾನಶೂನ್ಯಸ್ಥಲಂ.

* ( ಮಾತೃ, ಮಾನ, ಮೇಯ, ರೂಪ, ಪ್ರಮಾಣ )
ಜ್ಞಾನಪ್ರಕಾಶಸಂಪನ್ನನಾದ ಶಿವಯೋಗಿಯಲ್ಲಿ ಜೀವೇಶ್ವರ ವಿಯೋಗರೂಪವಾದ ಮುಖ್ಯಾರ್ಥವೂ, ನಿರುಪಾಧಿಕರಾದ ಶಿವಾತ್ಮರಲ್ಲಿ ನಿರಂತರಾಭೇದರೂಪವಾದ ಲಕ್ಷಣಾರ್ಥವೂ ಸಹ ಇರುವುದಿಲ್ಲ. ಅಂದರೆ ಚಿನ್ಮಯನಾಗಿ ಭೇದಾಭೇದಗಳೆಲ್ಲಾ ಅಳಿದು ಹೋದ ಸ್ಥಿತಿಯಲ್ಲಿರುವನು.

ಚಿತ್ಸ್ವರೂಪದ ಶಿವನು ಬೆಳಗಲು
ಪೃಥ್ವಿ ಬೆಳಗದು, ಜಲವು ಬೆಳಗದು
ಮತ್ತೆ ತೇಜವು, ವಾಯು ಬೆಳಗದು, ಬೆಳಗದಾಕಾಶ ।
ತತ್ತ್ವವಾವುದು ಬೆಳಗದಂತೆಯೆ
ತತ್ತ್ವವೆಲ್ಲವು ಶಿವನೊಳುದಿಸುತ
ಮತ್ತೆ ಶಿವನೊಳೆ ಕೂಡಿ ಬೆಳಗುವವೆಲ್ಲವೊಂದಾಗಿ ॥ ೬ ॥

ಹೃದಯಕಮಲದೊಳಿರದೆ ಹೊಳೆಯು
ತ್ತುದಕವಾದಿಯ ತತ್ತ್ವವೆಲ್ಲವ
ಹುದಿಗಿಸಿಟ್ಟೀ ಜ್ಞಾನಲಿಂಗಜ್ಯೋತಿದರ್ಶನದಿ ।
ಮುದದೊಳಂತಮುರ್ಖಿಯು ಚಿನ್ಮಯ
ಪದದೊಳರ್ಪಿಸೆ ವಿಷಯವೆಲ್ಲವ
ನದರ ಹವನದೆ ಹರ್ಷಗೊಳ್ಳುವ ಯೋಗಿ ನಿರ್ಲಿಪ್ತ ॥ ೭ ॥

ಮಲವಿದೂರನು ಯೋಗಿವರ್ಯನು
ವಿಲಯದಾನಂದಾಬ್ಧಿಯೊಳುತಾ
ಸಲಿಸಿ ವಿಷಯಂಗಳನು ಭುಂಜಿಪ ತತ್ಪ್ರಸಾದವನು ।
ಜಲಧಿಯೈಶಿವ-ಸಚ್ಚಿದಾನಂದ್
ಹೊಳೆಗಳೆಲ್ಲವು ಮಧುರಸಂಗಮ
ಗೊಳಲು ! ಯೋಗಿಯು ಶಿವಸಮುದ್ರದೊಳಾಳ್ದು ಸಮರಸಿಯು ॥ ೮ ॥

## (೫೦) ಶಿಷ್ಟೌದನ ಸ್ಥಲಂ

ಸರ್ವರೊಳಗನ್ನಾಡಿಸುತ್ತಿಹ
ಸರ್ವಮಂಗಳ ಮಾಯಿಯೋದನೆ
ಶರ್ವಚಿಲ್ಲಿಂಗೈಕ್ಯೆಯಾಗಲು ಲಿಂಗ ಶಿಷ್ಟೌದನ್ ।
ಸರ್ವಜಗವುಂ ಮಾಯೆಯಾವೃತ
ಶರ್ವನಿಂದಾಕ್ರಾಂತವಾಗುತ
ಲೋರ್ವಮಾಯೆ ಸ್ವಸ್ವರೂಪವ ಪಡೆಯುತುಳಿಯುವಳು ॥ ೯ ॥

ಆರುಗುಣಗಳನುಳ್ಳ ಶಕ್ತಿಯ
ನಾರು ಮೋಹಿಸದಿರಲಸಾಧ್ಯವು
ಪಾರಮಾರ್ಥದೆ ಸಾಮರಸ್ಯನನಾಕೆ ಗೆಲ್ಲುವಳೆ? |
ವೀರನೇಂದ್ರಿಯವೃತ್ತಿಶೂನ್ಯನು
ಪೂರಪೂರ್ಣಾನಂದರೂಪನು
ಧೀರಮುಕ್ತನ ಮಾಯೆ ಕಿಂಕರೆಯಾಗಿ ಸೇವಿಪಳು || ೧೦ ||

ಚಿನುಮಯಂ ಶಿವಲಿಂಗಲೀನಂ
ಗೆನಿತು ಲಬ್ಧವದನಿತೆ ಭುಂಜಿಸೆ
ತನಗೆತಾನೇವುಂಡ ವಿಷಯವು ನಶಿಸಿಪೋಗುವುದು |
ಕೊನೆಗೆ ನದಿಗಳು ಕಡಲಕೂಡವೆ?
ತನುವಿನಿಂದ್ರಿಯ ವಿಷಯವುಂಡರು
ಮನಿತುಮಾತ್ಮಾನಂದತೇಜದೆ ಲೀನಗೊಳ್ಳುವವು || ೧೧ ||

ಭುವನ ಬೆಳಗಿದ ಕಿರಣಕೋಟಿಯು
ರವಿಯುದಸ್ತಮಕಾಲಸಮಯದೊ
ಳವನಲಡಗುವವೊಲು ಪರಶಿವಯೋಗಿಯೋತ್ತಮನು |
ಸವಿದ ಸರ್ವೇಂದ್ರಿಯದ ವಿಷಯವ
ಸವೆಯುತಾಯಾಲಿಂಗಮುಖದೋ
ಳವುಗಳಡಗಲ್ ಸ್ವಸ್ವರೂಪದೆ ಶಾಂತನಾಗುವನು || ೧೨ ||

(೫೧) ಚರಾಚರ ಲಯಸ್ಥಲಂ

ಪರಮಲಿಂಗದೊಳೈಕ್ಯನಾದವ
ನಿರದೆ ತನ್ನೊಳು ಲಯಿಸೆ ಜಡಚರ
ಭರಿತ ವಿಶ್ವವಿದೆಲ್ಲ ಕಾಯುವ ಕಾಯುವಮಾಡುವನು |
ವರದ ಕಾಯದ ಯೋಗಿತಾನೇ
ಸರುವಜಡಚರ ವಿಶ್ವನಾಶಕ
ನಿರುವನದರಿಂದವಚರಾಚರ ಲಯಿಯು–ಎಂದೆನಿಪ || ೧೩ ||

ಮೇಘರಾಶಿಯು ಭಾರಿಯೊಡ್ಡದು
ಬೇಗ ನಭದೋಳಡಗುವಂದದೆ
ರಾಗರಹಿತ ಸ್ವಾನುಭಾವಿಯು ವಿಷಯವಡಗಿಪನು ।
ಮೇಘಮಾಲೆಯದಡಕಿ ತುಂಬಲು
ರಾಗರಾಗದ ಬಣ್ಣದೊಡ್ಡನು
ಮೇಘಕಾಶ್ರಯಿ ನಭದ ಶುಭ್ರತೆ ಕೆಡದತೆರನಿಹನು ॥ ೧೪ ॥

ಮೂರವಸ್ಥೆಯ ಮೀರಿನಿಂತಿಹೆ
ಚಾರುತುರ್ಯಾವಸ್ಥೆಗೇರಿಹ
ಕಾರುಣಿಕ ಶಿವಯೋಗಿ ರತನ್ನೈ ಸಾಮರಸ್ಯದೊಳು ।
ಯಾರು ತಿಳಿವವ ತಿಳಿವು ಯಾವುದು
ಬೇರೆ ಸಾಧನ ತಿಳಿಯಲುಂಟೇನ್ ?
ಸೇರೆ ತುರ್ಯಾತೀತಪದವನು ಯೋಗಿರತನಯ್ಯ ॥ ೧೫ ॥

ಧೀರಯೋಗಿಯು ಜಗಕೆ ಮರಳ
ನ್ನೇರಿ ತುರ್ಯಾತೀತ ಶಿವಪದ
ಚಾರು ತುರ್ಯಾತೀತ ಪದತಾಧ್ಯಾನಕಾಚಿನದು ।
ಸೇರಿ ಪರಮಾನಂದ ಶಿವಪದ
ಬೇರೆಯಾದುದ ನೋಡ ತಿಳಿಯನು
ಬೇರೆಯೇನನು ಕೇಳ ಯೋಗಿಯು ಚಿನ್ಮಯಾನಂದ ॥ ೧೬ ॥

## (೫೨) ಭಾಂಡ ಸ್ಥಲಂ

ವಿಶ್ವಸೃಷ್ಟಿಯಕರ್ತ ತನ್ನೊಳು
ವಿಶ್ವರಕ್ಷಿಪ ವಿಷ್ಣು ತನ್ನೊಳು
ವಿಶ್ವಸಂಹರ ರುದ್ರತನ್ನೊಳು ಭಾಂಡದನುಭವಕೆ ।
ವಿಶ್ವನಿಯಮ ವಿಮರ್ಶೆಶಕ್ತಿಯು
ವಿಶ್ವಸಂಭವ ಕಾರ್ಯಕಾರಣ
ವಿಶ್ವತತ್ತ್ವಕೆ ಸಾಕ್ಷಿರೂಪಿಣಿ ಸರ್ವತೋಮುಖಿಯು ॥ ೧೭ ॥

ಎಲ್ಲಿ ವಿಶ್ವದ ಮೂಲವಿರುವುದ
ದೆಲ್ಲಿ ವಿಶ್ವವು ಲಯವನೈದುವು
ದೆಲ್ಲಿ ವಿಶ್ವೇಶ್ವರನು ಬೆಳಗುವನೆಂಬರಿವೆ ಕಲೆಯು ।
ಎಲ್ಲ ತಿಳುವಿನಮೂಲ ಶಿವನಾ
ನೆಲ್ಲಬಲ್ಲನು ! ಎಲ್ಲು ಚರಿಸುವೆ
ನೆಲ್ಲಸಾಕ್ಷಿಯು ಸರ್ವಕರ್ತನು ! ಈಶ ಮಾಹೇಶ ॥ ೧೮ ॥

ವರಶಿವೋ೽ಹಂ ಸೃಷ್ಟಿಮೂಲವು
ವರ ಶಿವೋ೽ಹಂ ಜ್ಞಾನಪೂರ್ಣವು
ವರ ಶಿವೋ೽ಹಂ ಪರವಿಮರ್ಶಂ ಜ್ಞಾನಿಮತದಂತೆ ।
ವರ 'ಶಿವೋ೽ಹಂ' ಎಂಬ ಭಾಂಡದಿ
ಬೆರೆಸುತ್ತೆಲ್ಲಾ ತತ್ತ್ವರಾಶಿಯ
ಹರುಷಗೊಳ್ಳುವ ಮುಕ್ತ ನೋ೽ಡನ್ ಸ್ವಸ್ವರೂಪವಿನಃ ॥ ೧೯ ॥

(೫೩) ಭಾಜನ ಸ್ಥಲಂ

ಭುವನ ಸೃಷ್ಟ್ಯಂತಾದಿಕಾರಣ
ಕವಿ ವಿಮರ್ಶನ ಶಕ್ತಿಭಾಸದೆ
ಶಿವನಬೆಳಗುವುದೆಲ್ಲಿಯದುವೇ ಭಾಜನ ಸ್ಥಲವು ।
ವಿವಿಧ ವಿಶ್ವಕೆ ಮೂಲಕಾರಣ
*ಕವಿಯ ಪರಮ ವಿಮರ್ಶಶಕ್ತಿಯು
ಶಿವನೊಳವಿನಾಭಾವದಿಂ ನಿಲೆ ವಿಶ್ವಭಾಜನವು ॥ ೨೦ ॥

ಗಗನಚಂದ್ರಮ ಬೆಳಗಿ ಹೊಳೆವೋ
ಳಗಲದಿರುವುದು ಚಂದ್ರಚಂದ್ರಿಕೆ
ಯುಗವಿಮರ್ಶನಶಕ್ತಿ ಶಿವನೋಳಂತೆ ಸಂಸ್ಥಿರವು ।
ಅಗಲದಾಲದವೃಕ್ಷವನಿತೂ
ಜಗದೊಳಡಗಿದೆ ಸೂಕ್ಷ್ಮಬೀಜದೆ
ಯುಗವಿಮರ್ಶನ ಶಕ್ತಿಯಂತೆಯೆ ಶಿವನೊಳಡಗಿಹುದು । ॥ ೨೧ ॥

---

* ಬ್ರಹ್ಮ

ಅಭವಲಿಂಗ'ವ'ಕಾರರೂಪವು
ಶುಭಗೆ ಶಿವ'ಹಂ'ಕಾರರೂಪಳು
ಲಭಿಪ ಹಂ ಶಿವಶಕ್ತಿರೂಪು ಬ್ರಹ್ಮಮಯಶಬ್ದ ।
ಅಭಯಕಾರಣವೈ ಶಿವೋಹಂ
ಉಭಯ ಶಿವಶಕ್ತ್ಯಾತ್ಮರೂಪವು
ವಿಬುಧಯೋಗಿಯ ಪರಮಹಂತತೆ ವಿಶ್ವ ಬೆಳಗುವುದು ॥ ೨೨ ॥

ಶಕ್ತಿ ಮೂಲಾಹಂತರೂಪಾ
ಯುಕ್ತಜಗವಂಕುರದರೂಪದೆ
ಮುಕ್ತನಾದೀ ಯೋಗಿಯಾತ್ಮದೆ ಬೆಳಗಿ ಹೊಳೆಯಲ್ಕೆ ।
ಮುಕ್ತನೈ ಶಿವಯೋಗಿ ಶಿವನೋಲ್ !
ಶಕ್ತಿಸಂಯುತನಾತ್ಮವಿಶ್ವನು !
ಮುಕ್ತಿದಾಯಕನೆತ್ತಿ ಸಾಕಾರವನು ! ಶಂಕರನು ! ॥ ೨೩ ॥

## (೫೪) ಅಂಗಾಲೇಪ ಸ್ಥಲಂ

ಶರಿರಕರ್ಮದೆ ಬೆರೆಯದಿರುತಿಹೆ
ನೀರದೊಳಂಗಾಲೇಪನೆನಿಸುವ
ಪರಮಪಾವನ ಭೇದಶೂನ್ಯನು ಚಿತ್ಸ್ವರೂಪಕನು ।
ಭರದೊಳೇಳುವ ಧೂಮಧೂಳೋ
ಳ್ಕರಿಕುಗೊಳ್ಳದೆ ಶುಭ್ರದಾಗಸ
ಪರಮಯೋಗಿಯುಮಂತೆ ಕರ್ಮದೆ ತಾನು ನಿರ್ಲಿಪ್ತ ॥ ೨೪ ॥

ಪುಣ್ಯಕರ್ಮದ ದೇವತತ್ತ್ವವು
ಪುಣ್ಯಪಾಪದ ಮಾನವತ್ತ್ವವು
ಸಣ್ಣತನದಾತಿರ್ಯಗತ್ತ್ವವು ಯೋಗಿಗಿರದಯ್ಯ ।
ಪುಣ್ಯಪಾಪದೆ ಸಣ್ಣತನದೊಳು
ಕಣ್ಣುಕಾಣುವ ಕಾಣದಿರುವಾ
ತಿಣ್ಣನತ್ತ್ವಮದಾವುದಿಲ್ಲವು ಯೋಗಿ ಮುಕ್ತಾತ್ಮ ॥ ೨೫ ॥

ವಿಧಿನಿಷೇಧಗಳಿಲ್ಲ ಯೋಗಿಗೆ
ಹೃದಯಭೇದ್ಯವಿಕಲ್ಪಮಿಲ್ಲವು
ಮದಿರಮಾದಕ ಸಂಗವಾಸನೆ ಯಾವುದಿರದಂತು |
ಸದಯ ನಿರ್ದಯ ರೋಷತಾಪವು
ಮಧುರ ಮಧುಪ್ಲುತ ವಿಷಕಷಾಯವು
ಹೃದಯ ಭೇದಿಸದಯ್ಯ ಕೇವಲ ಚಿತ್ಸ್ವರೂಪಕನ ॥ ೨೬ ॥

ನಾಶರಹಿತಾಕಾಶ ಶುಭ್ರತೆ
ದೇಶಕಾಲಕೆ ಕೆಡಮೊಳಿಹುದೈ
ಯೀಶ ಪರಮಾಕಾಶಮಿನ್ನುತ ಹೊಳೆದು ಬೆಳಗುವುದು |
ದೇಶಕಾಲದೆ ಘಟವು ಮಠದಾ
ಕಾಶ ಭಿನ್ನತೆವೆತ್ತು ತೋರ್ಪೋ
ಲೀಶ ಪರಮಾಕಾಶಭೇದವು ನಿಜದೊಳಿರದಯ್ಯ ॥ ೨೭ ॥

## (೫೫) ಸ್ವಪ್ನರಾಜ್ಞ ಸ್ಥಲಂ

ದೇಶಕಾಲಾತೀತ ಪರಮಾ
ಕಾಶದಾಶ್ರಯ ಪಡೆದಯೋಗದೊ
ಳೀಶತೇಜದೆ ಬೆರೆಯುತರಿಯನ್ ಸ್ವಪರಮಾವುದನು |
ಈಶನೇಕಮ್ಮದ್ವಿತೀಯನು
ನಾಶರಹಿತನ್ನಪ್ರಮೇಯನು
ತೋಷದೀಶನೊಳೈಕ್ಯವಡೆದಂಗನ್ಯತಿಳಿವುಂಟೆ ? ॥ ೨೮ ॥

ಬಂಧಮಿಲ್ಲವು ಮೋಕ್ಷಮಿಲ್ಲವು
ಬಂಧುವಾದ್ಯಭಿಮಾನವಿಲ್ಲವು
ಸಂದಸುಖವೂ ದುಃಖಮಿಲ್ಲವು ಮರೆವುಮರಿವಿಲ್ಲ |
ಮುಂದೆಯಿಲ್ಲವು ಮೇಲೆಯಿಲ್ಲವು
ಹಿಂದೆಹೊರಗೊಳಗೆಲ್ಲುಮಿಲ್ಲವು
ಸಂದ ಹಿರಿಕಿರಿತನವದಿಲ್ಲವೃ ನಾನುನೀನಿಲ್ಲ ॥ ೨೯ ॥

ಸತ್ಯರೂಪಿಣಿ ವಿಶ್ವರೂಪಿಣಿ
ನಿತ್ಯರೂಪಿಣಿ ಪರಮನಿರ್ಮಲ
ವೆತ್ತ ಪರಮಾಕಾಶ ಪರಶಿವ ಸಾಮರಸ್ಯದೊಳು ।
ನಿತ್ಯವೇಕೀಭವಿಸಿದಾತಗೆ
ಮತ್ತಹಂತ್ತ್ವದ ಪರಮಯೋಗಿಗ
ದೆತ್ತನಾನೀನೆಂಬ ಕಲ್ಪನೆ ? ಬರಿಯಪರಿಹಾಸ ॥ ೩೦ ॥

## (೫೬) ಭಾವಾಭಾವ ಲಯಸ್ಥಲಂ

'ನಾನು' ಮಿರುವೀಭಾವವಾಗಲಿ
'ನಾನು' ಮಿಲ್ಲದ ಭಾವವಾಗಲಿ
ನಾನುನೀನೆಂಬುಭಯವಳಿಸಿಹಗಿಲ್ಲ ಸಮರಸಿಗೆ ।
ನಾನುಮಿರುವೀಭಾವದೂರನು
ನಾನುಮಿಲ್ಲದ ಭಾವದೂರನು
ನಾನುನೀನೆಂಬುಭಯ ಭಾವಾಭಾವದಿಂ ಮುಕ್ತ ॥ ೩೧ ॥

ಸುಖವು ದುಃಖಗಳಿರವು ತೆರವಿನೊ
ಳಖಿಲದುಃಖದ ವೇದನಂ ನಿಜ
ಸುಖಿಯು ಚಿನ್ಮಯ ಸಾಮರಸ್ಯಂಗುಂಟೆ ಸುಖದುಃಖ ? ।
ಸುಖದ ಭಾವಾಭಾವವಾಗಲಿ
ದುಃಖಭಾವಾಭಾವವಾಗಲಿ
ಸುಖವುದುಃಖ ದ್ವಂದ್ವವಳಿದಗೆ ಸಿದ್ಧಗೆಲ್ಲಿಹುದು ? ॥ ೩೨ ॥

## (೫೭) ಜ್ಞಾನಶೂನ್ಯ ಸ್ಥಲಂ

ಇರುವುದಿಲ್ಲದುದೆಂಬ ಭೇದದೊ
ಳಿರುವ ಭಾವಾಭಾವದರಿವೇ
ಪರಮಶಿವನೊಳು ಬೆರೆದ ಯೋಗಿಗೆ ಶೂನ್ಯಮಾಗಿಹುದು ।

ಇರಲು ಭೇದಂ ಜ್ಞಾನಬಂಧಮ
ದರಿವುಶೂನ್ಯಮೆ ಪರಮಮೋಕ್ಷವು
ವಿರತಯೋಗಿಯು ಜ್ಞಾನಶೂನ್ಯಸ್ಥಲಿಯನೆಂದೆನಿಪ ॥ ೩೩ ॥

ತೊರೆದು ಭೇದಂಜ್ಞಾನಶಂಕೆಯ
ಚಿರಚಿರಾತ್ಮಕ ವಿಶ್ವರೂಪದ
ಪರಮಮಂಗಳ ಲಿಂಗದೈಕ್ಯಂಗಿಲ್ಲ ಭಾವನೆಯು ।
ಅರಿವನರಿವವ ಗುರುವುಕಲ್ಪನೆ
ಪರದಿಬೆರೆದವಗಿನ್ನುಮುಂಟೇ
ನರಿವುಶೂನ್ಯನು ಯೋಮನಿರ್ಮಲ ನಿತ್ಯನಿರ್ಲಿಪ್ತ ॥ ೩೪ ॥

ಭುವನಭೂತವು ತಾರಗಣಗಳು
ದಿವವ ಬೆಳಗುವ ಸೂರ್ಯಚಂದ್ರರು
ದಿವಿಜದಾನವ ಮಾನವಾದ್ಯರು ಯಾರುಮಲ್ಲಿಲ್ಲ ।
ಪವನಬೀಸನ್ನಗ್ನಿ ಬೆಳಗ
ನ್ನವನು ನಾನೆಂಬುಭಯ ಕಲ್ಪನೆ
ಸವೆದ ನಾಣ್ಯಮದಲ್ಲಿ ನಡೆಯದು ಪರಮಶೂನ್ಯದೊಳು ॥ ೩೫ ॥

ಸಚ್ಚಿದಾನಂದಂ ಪ್ರಕಾಶವು
ನಿಚ್ಚನಿರುಪಮ ನಿರ್ವಿಕಲ್ಪಮ
ದುಚ್ಚತೋಚ್ಚತ ದಿವ್ಯದಾಗಸವನ್ನು ಬೆಳಗುವುದು ।
* ಸ್ವಚ್ಛಬೆಳಗಿನಬೆಳಗು, ಶಿವನೊಳು
ಬಿಚ್ಚದಗಲದೊಳ್ಳೈಕ್ಯಗೊಂಡಿಹ
ಬಚ್ಚಬಯಲಿನ ಶೂನ್ಯಸಂಪದಿಗೆಲ್ಲಿ ಭವಭೇದ ? ॥ ೩೬ ॥

---

* ಘೃತಕೆ ಘೃತವ ಬೆರಸಿದಂತೆ, ಕ್ಷೀರಕೆ ಕ್ಷೀರವ ಬೆರಸಿದಂತೆ, ತೈಲಕೆ ತೈಲವ ಬೆರಸಿದಂತೆ ನೀರಿಂಗೆ ನೀರನು ಬೆರಸಿದಂತೆ, ಜ್ಯೋತಿ ಜ್ಯೋತಿಯ ಕೂಡಿದಂತೆ, ಬಯಲು ಬಯಲನು ಸೇರಿಸಿದಂತೆ, ಪ್ರಾಣ ಪ್ರಾಣ ಸಂಯೋಗವಾದ ಶರಣ ಲಿಂಗ ಸಮರಸವ ಏನೆಂಬೆನಯ್ಯ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ ?



ಶ್ರೀಜಗದ್ಗುರುರೇಣುಕಾಚಾರ್ಯರು ಶ್ರೀಸೋಮನಾಥಲಿಂಗದಲ್ಲಿ
ದಿವ್ಯದೇಹಧಾರಿಗಳಾಗಿ ಅಡಗುವರು

* ಜಲವು ಜಲವನು ಸೇರಿ ಬೆರೆದೋಲ್
ಝ್ವಲಿಪುವಗ್ನಿಯನಗ್ನಿ ಬೆರೆದೊಲು
ನಿಲಯರುದ್ರನ ಕಾಳಿಬೆರೆದೊಲು ಶೂನ್ಯಸೇರಿಹನು ।
ಒಲವುನಲವಿಗೆ ವಿರಹವಿರತಿಗೆ
ನಿಲುಕದುಪಮಿಸದಿರುವ ಬಯಲೋ
ಳಲುಗದಾಡದೆ ನೆಲೆಯ ನಿಂತಿಹನದಕಭಿನ್ನಾಗಿ ॥ ೩೭ ॥

ಪರಮಪಾರ್ವತಿಗೊರೆದತತ್ತ್ವವೆ
ನಿರುಪಮಾನಂದಾತ್ಮಬೆಳಗಿನ
ಪರಶಿವಾದ್ವೈತಾತ್ಮಯೋಗವು ಪರಮ " ಶಿವಯೋಗ " ।
ವರಗಣೇಂದ್ರನು ಮೌನಿವರ್ಯಂ
ಗಿರದೆ ಬೋಧಿಸಿ ನೂರುವೊಂದರೊ
ಳಿರುವುವೆಲ್ಲಾ ಸ್ಥಲದ ವಿವರವ ಮೌನಧರಿಸಿದನು ॥ ೩೮ ॥

ಜ್ಞಾನಬೋಧೆಯನಿತ್ತು ಗುರುವರ
ಮೌನಧರಿಸಲ್ ಧ್ಯಾನಮುಖದೊಳು
ಮೌನಿಯೋತ್ತಮ ಕರವಜೋಡಿಸುತಿಂತು ನುತಿಸಿದನು ।
"ಜ್ಞಾನಿ ! ಪರಮಾದ್ವೈತಕೋವಿದ
ನೀನಲಾ ಶಿವಯೋಗ ಸಾಗರ
ನಾನುತೆಲ್ಲಾ ವೇದ ಶಾಸ್ತ್ರದ ದಿವ್ಯ ನದನದಿಯಂ ॥ ೩೯ ॥

ಗುರುವೆ ! ನಿಮ್ಮಯ ಕರುಣದೃಷ್ಟಿಯು
ಹರಿಸಿತೆಲ್ಲಾ ಭವದಬಂಧನ
ಪರಮ ಲೀಲೋಲ್ಲಾಸದೊಳು ನೀ ಸ್ವಪ್ರಕಾಶ ಶಿವ ।

---

* ಬಯಲು ಬಯಲು ಬೆರೆದಲ್ಲಿ ಮೇರೆಯುಂಟೇ, ಅಯ್ಯ ? ಕ್ಷೀರ ಕ್ಷೀರವ ಕೂಡಿದಲ್ಲಿ ಮರಳಿ ರೂಹಿಸಿ ಹಿಡಿಯಲುಂಟೇ ಅಯ್ಯ? ನಿಮ್ಮೊಳೊಡವೆರೆದ ನಿಜೈಕ್ಯನ ಕುರುಹು ಮರಳಿ ತೋರಲುಂಟೆ ಅಯ್ಯ ?—ಅಖಂಡೇಶ್ವರಾ ?

ವರಶಿವಾದ್ವೈತಾತ್ಮತತ್ತ್ವದ
ಪರಮಬೋಧೆಯ ಕೇಳಿದಾಕ್ಷಣ
ಹರುಷಗೊಂಡೆಂ ಭ್ರಾಂತಿ ಹರಿಯಿತು ಸಫಲಮಿಾಜನ್ಮ ॥ ೪೦ ॥

ಭವದಬಂಧಚ್ಛೇದಗೊಂಡಿತು
ವಿವಿಧ ತಪಗಳ ಸಿದ್ಧಿ ಫಲಿಸಿತು
ಭುವನದೊಳು ನಾಪಡೆದೆನುನ್ನತ ರಾಜಮುನಿಪದವ ।
ಸವಿಯೆ ಶಿವಯೋಗಾಮೃತಾರ್ಣವ
ನಿವಗೆ ಸಮನಾರ್ಮೂರುಲೋಕದೆ
ಭುವನದೊಳು ವರತಪವ ಗೈದವರುಂಟೆ ನನ್ನಂತೆ ? ॥ ೪೧ ॥

ವರದ ಗುರುವರ ನನ್ನನಿಡುತಪ
ಪರಮಫಲವನು ಫಲಿಸಿತಿಂದೇ
ಹರನ ಕರುಣೆಯು ಹರಿದುಬಂದಿತು ನನ್ನನುದ್ಧರಿಸೆ ।
ಪರಮಭಕ್ತಿಯೊಳಿಂತು ನುತಿಸಲು
ಕರುಣದೃಷ್ಟಿಯಬೀರುತಾರ್ಯನು
ಪೊರೆದರಾಶಿತಗಳನು ಮುದದೊಳಂದು ಮುನಿವರಗೆ ॥ ೪೨ ॥

ಸಿದ್ಧಕಾಮನೆ ಮೌನಿಯೋತ್ತಮ
ಶುದ್ಧಶಿವಶಾಸ್ತ್ರಾರ್ಥಕೇಳಲು
ಶುದ್ಧಚರಿತರು ತಕ್ಕ ಪಾತ್ರರು ಯಾರು ನಿನ್ನಂತೆ ? ।
ಶುದ್ಧಬೋಧಾಮೃತವ ನೀಂಟಲು
ಶುದ್ಧಹಂಸಕೆಮಾತ್ರ ಸಾಧ್ಯವು
ಬದ್ಧರಿಂಗರಿದೆಂದು ಪೇಳ್ದನು ಪರಮತತ್ತ್ವವನು ॥ ೪೩ ॥

ವರಶಿವಾದ್ವೈತಾತ್ಮವಿದ್ಯೆಗೆ
ಸರಿಯುಸಮನಹ ತತ್ತ್ವಮಿಲ್ಲವು
ಸರುವಜಗದೊಳಿದನು ಪಸರಿಸಿ ಬೆಳಗು ಭುವಿಯನ್ನು ।

ಶರಣರಕ್ಷಕ ಕರುಣಶಿಕ್ಷಕ
ನಿರುಪಮಂ ಶಿವಪಾರ್ವತೀಪತಿ
ಸರುಪರೋನ್ನತಿಗಾಗಿ ತಾನೇ ಬೋಧಮಿತ್ತಿಹನು ॥ ೪೪ ॥

ಸರುವಸಿದ್ಧಿಗು ಸಿದ್ಧಿಕರಮಿದು
ಪರಮಪಾವನ ತತ್ತ್ವಸಾರುತ
ಲಿರುವ ವೇದಾಗಮದಸಾರಮಿದರಿವಿನಾಗರವು ।
ವಿರತ ಮಾಹೇಶ್ವರರಿಗೆಟಕುವ
ವರಶಿವಾದ್ವೈತಾತ್ಮವಿದ್ಯೆಯ
ನರಿಯಲೊರೆವುದು ಶುದ್ಧವಂಶದ ಸದ್ಗುಣೋತ್ತಮಗೆ ॥ ೪೫ ॥

ಶ್ರವಣಮಾತ್ರದೆ ಪಾಪಹರಣವು
ಸವೆಯೆಪಾಪವು ಶುದ್ಧಹೃದಯನು
ಜವದಿ ಸಾಧನೆಮಾಡಿ ಸಿದ್ಧಿಯನಿರದೆ ಪಡೆಯುವನು ।
ಶಿವನಕರುಣವು ಸಿದ್ಧಿಯಾಗಲು
ಭವದ ಬಂಧನ ಕಳಚಿಬೀಳುವು
ದವನು ನಾನೆಂಬುಭಯಭಾವದ ಲಯದೆ ಶಿವನಹನು ॥ ೪೬ ॥

ಷಟ್ಸ್ಥಲಾರ್ಥದ ಬೋಧೆ ನೀಡಲು
ಪುಟ್ಟಬಂದೆನು ಲಿಂಗಮುಖದೊಳು
ಬಟ್ಟಬಯಲನ್ನುಟ್ಟ ಚಿನ್ಮಯ ಶಿವನನುಜ್ಞೆಯೊಳು ।
ನೆಟ್ಟನೆಂತಿದ ನಿನಗೆ ಬೋಧಂ
ಗೊಟ್ಟೆನೆಂತೆಯೆ ಶುದ್ಧರೆದೆಯಂ
ಮುಟ್ಟೆ ನೀನೀತತ್ತ್ವಬೋಧೆಯ ಜಗಕೆ ನೀಡಯ್ಯ ॥ ೪೭ ॥

ಇಂತು ಬೋಧಿಸಿ ರೇಣುಕಾರ್ಯ
ನ್ನಂತರಾತ್ಮದೆ ನೆನೆದು ಶಿವನ
ನ್ನಂತೆಯಂತರ್ಧಾನವಾದನು ಮುನಿಯು ನೋಡುತಿರೆ ।

ಅಂತುಮಂತರ್ಧಾನಮಾದಾ
ಶಂತಮಯ ಶಿವಲಿಂಗಸಂಭವ
ನಂತರಾತ್ಮದೆ ನೆಲಸೆ ಮೌನಿಗೆ ತತ್ತ್ವ ಧೃಢಮಾಯ್ತು ॥ ೪೮ ॥

ಹರನ ಕರುಣವೆ ಗುರುವುರೂಪದೆ
ಧರೆಯೊಳವತರಿಸಿಂತು ಬೋಧೆಯ
ಪರಮಪಾತ್ರಗೆ ನೀಡುತಿರುವುದು ಬೆಳಗಬೆಳಗಲ್ಕೆ ।
ವರಶಿವಾದ್ವೈತಾತ್ಮವಿದ್ಯೆಯ
ನೊರೆವ ಶಿವಸಿದ್ಧಾಂತಬೋಧೆಯ
ನಿರದೆಕೇಳಲು ತೆರೆದಹೃದಯದೆ ಪಡೆವೆ ಪರಮಗತಿ ॥ ೪೯ ॥

ಇಂತು ರೇಣುಕಗೀತೆ ಬೋಧಿಪು
ದೆಂತು ಶರಣನೆ ಲಿಂಗದೈಕ್ಯನ
ದೆಂತು ಸರ್ವಾರ್ಪಣದೆ ಶೂನ್ಯಂಯೆಂಬ ಮರ್ಮವನು ।
ಅಂತು ಲಿಂಗಸ್ಥಲದೊಳಾಶ್ರಯಿ
ಶಂತಮಯ ಶಿವಪ್ರಸಾದದೊ
ಳಿಂತು ಪೂರ್ಣನು ಜ್ಞಾನಶೂನ್ಯನು ಲಿಂಗದೋಳೈಕ್ಯ ॥ ೫೦ ॥

ಇಪ್ಪತ್ತನೆಯ ಸಂಧಿ ಸಂಪೂರ್ಣಂ

ಸಂಧಿ ಇಪ್ಪತ್ತಕ್ಕಂ ಪದನೊಂಭೈನೂರಹನ್ನೆರಡಕ್ಕಂ
ಮಂಗಳಮಸ್ತು.

# ಇಪ್ಪತ್ತೊಂದನೆಯ ಸಂಧಿ

## ವಿಭೀಷಣಾಭೀಷ್ಟ ವರಪ್ರದಾನಂ

ಸೂಚನೆಃ—ದೊರೆ ವಿಭೀಷಣಗಿತ್ತು ದರ್ಶನ
ವರದ ರೇಣುಕರವನಭೀಷ್ಟವ
ನರಿತು ನೆಲೆಗೊಳಿಸಿದರು ಮೂರುಂ ಕೋಟಿ ಲಿಂಗಗಳ |

ಪರಮ ತೇಜೋಮಯ ಶರೀರಿಯು
ವಿರತ ಲೀಲಾನಂದಶೀಲನು
ವರದ ರೇಣುಕ ಬಿಜಯಮಾಡಿದ ಲಂಕೆಪುರದೊಳಗೆ |
ಪುರಕೆ ಬರುತಲೆ ದೊರೆ ವಿಭೀಷಣ
ಸರುವನಿಗಮಾಗಮ ವಿಶಾರದ
ಪರಮಸಂಭ್ರಮದಿಂದ ಕರೆಸಿದ ಗುರುವನರಮನೆಗೆ ‖ ೧ ‖

ಪರಮಗುರುವರ ಮಂಡಿಸುತ್ತಲೆ
ವಿರಚ ಭದ್ರಾಸನವು ಶೋಭಿಸ
ಲಿರದೆ ಜಯಜಯಕಾರಮಾಡಿದರಾರ್ಯವರ್ಯಂಗೆ |
ತರಿಸಿ ಮಂಗಳದರ್ಘ್ಯಪಾದ್ಯವ
ನಿರಿಸಿ ಷೋಡಶಪೂಜೆಗೈದರು
ಸರವನೇರಿಸಿ ನುತಿಸಿ ಪಾಡಿದರೆತ್ತುತಾರತಿಯ ‖ ೨ ‖

ಪರಮಹರ್ಷವತಾಳ್ದು ಗುರುವರ
ಕರುಣದೃಷ್ಟಿಯ ಬೀರುತರಸಂ
ಗಿರಿಸಿದುಚಿತಾಸನದೆ ಮಂಡಿಸಲಿತ್ತನಾಣತಿಯ |
ದೊರೆ ವಿಭೀಷಣನಸುರರೋತ್ತಮ
ಪರಮ ಭಕ್ತಿಯೊಳೆರಗಿ ಶಿರಸಾ
ಚರಣತಳದೆಡೆ ಕುಳಿತು ಪುಳಕಿತನಾದ ವಿನಯದೊಳು ‖ ೩ ‖

ಭುವನಪಾವನ ಮನುಜಮೂರ್ತಿಯು
ಶಿವನೆ ಸಾಕಾರೆತ್ರಿದಂತಿರೆ
ದಿವಿಜ ದಾನವ ಮಾನವಾದ್ಯರಿಗೆಲ್ಲ ಜಗದಗುರು ।
ಅವರ ಸಮ್ಮುಖದಲ್ಲಿ ರಾಜನು
ಜವದೊಳೇಳುತ ಕರವಜೋಡಿಸಿ
ಕವನಕಟ್ಟುತಲಿಂತು ಸುಸ್ವಾಗತವ ಬಯಸಿದನು ॥ ೪ ॥

ಗುರುವೆ ರೇಣುಕ ! ವರಗಣೇಶ್ವರ !
ಅರಿತೆನೀಯವತಾರ ಜಗದೊಳು
ಸುರುವರೋನ್ನತಿಗಾಗಿ ಯೆಂಬುದನೆಲ್ಲ ಶಿವನಿಚ್ಛೆ ।
ಪುರಕೆ ನಮ್ಮಯ ಪುಣ್ಯ ಫಲಿಸಿದ
ಶಿರದೊಳೈತಂದಿರುವೆ ! ಧನುಜರ
ಪರಮಭಾಗ್ಯೋದಯದಿಂದಿನ ಗುರುವಿನಾಗಮನ ॥ ೫ ॥

ಸನ್ನಿಧಿಯು ಬರೆ ಶಿವನ ರೂಪದೊ
ಳೆನ್ನರಮನೆಗೆ ತಮಗೆ ತಾವೇ
ನನ್ನ ಭಾಗ್ಯವ ಮೀರೆ ಲೋಕತ್ರಯದೊಳಿನ್ನುಂಟೇ ? ।
ಸನ್ನಿಧಿಯೆ ತವ ಪಾದಧೂಳಿಯೊ
ಳೆನ್ನ ಲಂಕಾಪುರವೆ ಪಾವನ
ವೆನ್ನ ವಂಶವು ಶುದ್ಧವೆನ್ನೀಜನ್ಮಸಾರ್ಥಕವು ॥ ೬ ॥

ಸಂತ ಶರಣಂ ರಾಕ್ಷಸೇಂದ್ರನು
ನಿಂತು ಮಂಗಳ ವಚನವಾಡುತ
ಲಿಂತು ಸುಸ್ವಾಗತವ ಬಯಸಲು ಭಕ್ತಿಭಾವದೊಳು ।
ಸಂತ ಷೇಂದುವೆ ಮೂಡಿತೋಯೆನ
ಲಂತರಂಗದ ಹರ್ಷ ಕುಡಿವರಿ
ದೆಂತೆ ಮುಂದಸ್ಮಿತದೆ ಪೇಳ್ದರು ಮಂಗಳಾಶಿತವ ॥ ೭ ॥

ದೊರೆ ವಿಭೀಷಣ ತಿಳಿಯಿತೆನಗುಂ
ಧರುಮಕೋವಿದ ಸೀನೆಯೆಂಬುದು
ಪರಮಭಕ್ತಿಯು ನಿನ್ನಹೊರತಿನ್ನಾರಿಗುಂಟಯ್ಯ ? ।
ಸರುವ ಶಾಸ್ತ್ರಾರ್ಥವನು ಬಲ್ಲವ
ನರಿತ ಧರ್ಮಾಚಾರಶೀಲನು
ಸರುವವೇದಾಂತವನು ತಿಳಿದವನೆಂದು ಪೊಗಳುವರು ॥ ೮ ॥

ಗಿರಿಯು ಮಂದರದಲ್ಲಿ ನಿನ್ನಯ
ಧರುಮಸಂಪದ ಕೇಳಿಯಚ್ಚರಿ
ವೆರಸಿಬಂದೆನು ನಿರುತಮಾಡಲು ನಿನ್ನ ಭಕ್ತಿಯನು ।
ಚರಿತೆ ನಿನ್ನದು ಲೋಕ ಸಂಸ್ತುತ
ವಿರುವಕಾರಣ ಹರುಷಗೊಂಡೆನು
ವರವ ಕರುಣಿಪೆ ಬೇಡು ನಿನ್ನಾಭೀಷ್ಟಮೇನುಂಟು ॥ ೯ ॥

ಗುರುವುರೇಣುಕ ಸುಪ್ರಸನ್ನತೆ
ವೆರಸಿನುಡಿಯಲ್ಲಾಶಿತಂಗಳ
ಹರುಷಗೊಂಡಾದಾನವೇಂದ್ರನು ನಮಿಸುತಿಂತೆಂದ ।
ವರದರೇಣುಕ ! ಯೋಗಿವರ್ಯನೆ !
ಚರಣಕರುಣದಿ ಲೋಕಕಕೆಟುಕದ
ಪರಮಸಂಪದವಿರದೆದೊರೆವುದು ಬೇಡಲೇಕಯ್ಯ ? ॥ ೧೦ ॥

ಆದರಾನುಂ ಬೇಡಿಕೊಳಲಿದೆ
ಸಾಧ್ಯಮಾಗುವುದಿಷ್ಟಸಿದ್ಧಿಯು
ಸಾಧು ಗುರುಜನ ಸಂಗಲಭಿಸಲು ಸುಕೃತಫಲದಿಂದ ।
ಆದಿನಣ್ಣನ ಮರಣಮುಖದೊಳು
ಸಾಧಿಸುವೆನೆಂದಿತ್ತ ವಚನವು
ಬಾಧೆಗೊಳಿಸಿಹುದಿಂದುತನಕಂ ಪೂರ್ಣಗೊಳ್ಳದಲೆ ॥ ೧೧ ॥

ಅಂದಿನೆನ್ನಾಗ್ರಜನು ರಾವಣ
ಸಂದವರಶಿವಭಕ್ತಿಯೋತ್ತಮ
ಬಂಧರಹಿತದೆ ಮೂರುಲೋಕಮನಾಳ್ದನತಿಶೂರ ।
ಅಂದುನೆನ್ನಾಗ್ರಜನ ಕಲಿತನ
ಕಿಂದ್ರಮೊದಲಾಗೆಲ್ಲ ಮಣಿದರು
ಕುಂದೆಭಕ್ತಿಯು ದುಶ್ಚರಿತ್ರದೆ ಕೊಂದ ವರರಾಮ ॥ ೧೨ ॥

ಹೃದಯ ಭೇದಿಸೆ ರಾಮಬಾಣವು
ಹೊದರಿಬಿದ್ದನು ರಣದಿ ರಾವಣ
ನುದಯವಾಯ್ತೈ ಜ್ಞಾನದೀವಿಗೆ ಮರಣಮುಖದೊಳಗೆ ।
ಬದಿಯಲಿಹ ನಾನೊಬ್ಬನುಳಿದಿರ
ಲೆದೆಯದುಃಖವದೊತ್ತಿಬರುತಿರೆ
ಹೃದಯದಾಶೋತ್ತರವನರುಪಿದನಾಗಲಿಂತೆಂದು ॥ ೧೩ ॥

ಬುದ್ಧಿಶಾಲಿಯೆ ಧರ್ಮಶೀಲನೆ
ಶುದ್ಧಚರಿತ ವಿಭೀಷಣಾನುಜ
ಶುದ್ಧಧರ್ಮದ ಭಾಗ್ಯವಶದಿಂದುಳಿದೆ ನೀನೊಬ್ಬ ।
ಮುದ್ದುಸೋದರ ! ನಮ್ಮವಂಶವ
ನುದ್ಧರಿಸಬಲ್ಲಾತ ನೀನೇ
ಬದ್ಧಕರ್ಮಿಗಳಾವು ಧರ್ಮದ್ರೋಹಿಯಾದೆವಲಾ ॥ ೧೪ ॥

ಮಂಗಳಾತ್ಮಕಮಾದ ವರಶಿವ
ಲಿಂಗ ನವಕೋಟಿಯೊಳು ಲಂಕೆಯ
ಲಿಂಗಮಯಮಾಡಲ್ಕೆ ಗೈದೆನು ಸತ್ಯಸಂಕಲ್ಪ ।
ಲಿಂಗಷಟ್ಕೋಟಿಯನು ನಾನೇ
ಮಂಗಳಾತ್ಮರ ವರದಗುರುಗಳ
ಮಂಗಳಾರ್ಚನೆಯೊಡನೆ ನೆಲೆನಿಲುವಂತೆ ಮಾಡಿಹೆನು ॥ ೧೫ ॥

ಉಳಿದ ಮೂರುಂ ಕೋಟಿಲಿಂಗವ
ನಳಿದು ಶಾಸ್ತ್ರೋಕ್ತವಿಧಿಯೆ ನೀ ನೆಲೆ
ಗೊಳಿಸುತೆನ್ನಾಭೀಷ್ಟಪೂರ್ತಿಗೆ ವಚನನೀಡಯ್ಯ ।
ಗಳಿತಬುದ್ಧಿಯು ರಾವಣಾಗ್ರಜ
ನಳಿವಕಾಲದೊಳೊರೆಯಲಿಷ್ಟವ
ನುಳಿದ ನಾನೇ ಪೂರ್ಣಗೊಳಿಸಲ್ಲಿತ್ತೆ ವಚನವನು ॥ ೧೬ ॥

ಮಂಗಳೋತ್ತಮ ಮೂರುಕೋಟಿಯ
ಲಿಂಗ ಶಿವನನ್ನೇಕಕಾಲದೆ
ತುಂಗಶಾಸ್ತ್ರೋಕ್ತವಿಧಿಯೆ ನಿರ್ಮಿಸೆ ನಿಶ್ಚಯಂಗೊಂಡು ।
ಲಿಂಗವನಿತನ್ನೇಕಕಾಲದೆ
ಮಂಗಳಾರ್ಚನವಮಾಡಿ ನಿರ್ಮಿಸ
ಜಂಗಮಾರ್ಯನ ಬರವ ಹಾರೈಸಿದ್ದೆ ನೀವರೆಗೆ ॥ ೧೭ ॥

ಚಾರುಶಿವಶಾಸ್ತ್ರಾರ್ಥಕೋವಿದ
ವೀರಶಿವಸಿದ್ಧಾಂತತತ್ತ್ವದ
ಸಾರರೂಪನೆ ! ಪರಮಜಗದಾಚಾರ್ಯ ಕೃಪೆಮಾಡೈ
ಮೂರುಕೋಟಿಯ ಲಿಂಗನಿರ್ಮಿಸೆ
ಮೂರುಕೋಟಿಯ ಜಂಗಮಾರ್ಯರ
ಚಾರುರೂಪವ ಧರಿಸಿ ನನ್ನಾಭೀಷ್ಟಸಲಿಸಯ್ಯ ॥ ೧೮ ॥

ದೊರೆ ವಿಭೀಷಣನಿಂತುಬೇಡಲು
ವರದರೇಣುಕರಭಯವಿತ್ತರು
ಪರಮಹರ್ಷವತಾಳ್ದು ಪುಳಕಿತನಾದನಸುರೇಂದ್ರ ।
ಅರಸನಿಷ್ಟದಪೂರ್ತಿಗಾಗಿಯೆ
ಧರಿಸಿ ಮೂರುಂ ಕೋಟಿ ಜಂಗಮ
ರಿರವ ಮೂರುಂ ಕೋಟಿಲಿಂಗವನಿರಿಸಲಾಕ್ಷಣಕೆ ॥ ೧೯ ॥

ನೋಡಿದೆಡೆಯೊಳು ಲಿಂಗಶಿವನೊಡ
ಗೂಡಿ ಮೆರೆಯುವ ರೇಣುಕಾರ್ಯ್ಯರು
ಕೂಡೆ ಶಿವವೋಂ ಮಂತ್ರದುಗ್ಗಡ ಕಿವಿಯ ತುಂಬಲ್ಕೆ ।
ನಾಡಿ ಮಿಡಿಯಲು ಮೂಲಮಂತ್ರವ
ಕೂಡೆ ಪುಳಕವದುಣ್ಮಿ ಶರೆಬಿಗಿ
ದೋಡೆಯಾನಂದಾಶ್ರು ಕಂಡನು ವಿಶ್ವದರ್ಶನವ ॥ ೨೦ ॥

ಸುರರ ಧೇನುವೆ ಯೆರೆದಳಮೃತ
ಹರನ ಜಟೆಯಿಂ ಗಂಗೆ ಸುರಿದಳು
ಪರಮಹರ್ಷದಿ ಸುರರು ಕರೆದರು ಪುಷ್ಪವೃಷ್ಟಿಯನು ।
ಪರಮ ಮಹಿಮೆಯ ನೋಡಿದರಸಂ
ಗಿರದೆಯಾನಂದಾಶ್ರುವುಣ್ಮಲು
ವರದ ಗುರುವಿನ ಚರಣಯುಗಳವು ತೊಯ್ದವದರಿಂದ ॥ ೨೧ ॥

ವಿನಯಭರಿತನು ನಮನಶೀಲನು
ದನುಜರೊಡೆಯನು ತೃಪನಾಗಲು
ಮನುಜರೂಪದೊಳಿದ್ದ ಗುರುವರ ಕಾಣದಂತಾದ ।
ಧನುಜರೊಡೆಯನು ಗುರುವುಕರುಣದೆ
ಜನರ ಶಾಂತಿಗೆ ಮೇಣುಮೋಕ್ಷ
ಕ್ಕನುವದಾಗುವತೆರದೆ ರಾಜ್ಯವ ಚಿರದೊಳಾಳಿದನು ॥ ೨೨ ॥

ಕಾಣುತೊಮ್ಮೆಯು ಕಾಣದೊಮ್ಮೆಯು
ರೇಣುಕಾರ್ಯ್ಯರು ಜಗದೆ ಸಂಚರ
ಮಾಣದೋಪರಿಮಾಡೆ ಪರಮಾದ್ವೈತಭಾವದೊಳು ।
ಜಾಣಬೀರಿದ ಕರುಣದೃಷ್ಟಿಯು
ಮಾಣದಿತ್ತುಪದೇಶವಾಣಿಯು
ದಾಣವಾವಮಲನಾಶಸಂಗವು ಭಕ್ತರೋದ್ಧರಿಸೆ ॥ ೨೩ ॥

ಸರುವಜಗವನು ಲೀಲೆಯೊಳು ತಾ
ಚರಿಸಿವರಶಿವಶಾಸ್ತ್ರಲೋಲನು
ಪರಮಹಿರಿಮೆಯೊಳೆಸೆದು ಬೆಳಗಿವ ಸರ್ವಸಮತೆಯೊಳು ।
ದುರಿತ ನಾಸ್ತಿಕರನ್ನು ಖಂಡಿಸಿ
ನಿರತ ಮಾಂತ್ರಿಕ ಕುಟಿಲಸಿದ್ಧರ
ನಿರದೆ ಜಯಿಸುತ ಚಿರದೆ ನೆಲೆಗೊಳಿಸಿದನು ಸಿದ್ಧಾಂತ ॥ ೨೪ ॥

ವರಶಿವಾದ್ವೈತಾತ್ಮಬೋಧೆಯು
ಸರುವರಂತರದಲ್ಲಿ ನೆಲೆನಿಲೆ
ಗುರುವುಲಿಂಗವು ಜಂಗಮಾರ್ಚನೆ ನಿರುತವಾಗಲ್ಕೆ ।
ಹರನಭಕ್ತಿಯು ಬೆಳೆಯುಸಿರಿಯೊಳು
ಶರಣಪೀಳಿಗೆಕುಡಿಯುಪರಿಯಲು
ಹರುಷದಿಂ ಜಗವೆಲ್ಲ ತಣಿಯಿತು ಶಾಂತಿ ಚಿರವಾಯ್ತು ॥ ೨೫ ॥

ಚನ್ನವರಶಿವಯೋಗಿ ರೇಣುಕ
ತನ್ನ ಮೊದಲವತಾರ ಭೂಮಿಗೆ
ತನ್ನ ನೆಲೆವನೆ ಕುಲ್ಯಪಾಕಾಕ್ಷೇತ್ರದಾಲಯಕೆ ।
ತನ್ನನಾನಾಲೀಲೆ ಮೆರೆಯಿಸು
ತಿನ್ನುಬರುತಿರೆ ಸಕಲಭಕ್ತರು
ಮುನ್ನ ನೆರೆದರು ಬಯಸೆ ಸುಸ್ವಾಗತವ ಗುರುವರಗೆ ॥ ೨೬ ॥

ಸೋಮನಾಥಾಲಯದೆ ಭಕ್ತ
ಸ್ತೋಮ ಜಯಜಯಕಾರ ಮಾಡುತ
ಸೋಮಲಿಂಗೋದ್ಭವದಮೂರ್ತಿಯ ಚರಣಕೆರಗಿದರು ।
ರೇಣುಕಾರ್ಯನ ನೋಡುತಿರೆ ಯಿರೆ
ಸೋಮಶೇಖರ ಭಕ್ತರೆಲ್ಲರು
ಸೋಮನಾಥನನಿಂತು ಸಂಸ್ತುತಿಗೈದನಾಚಾರ್ಯ ॥ ೨೭ ॥

ಶಿವನೆ! ಸರ್ವೋತ್ತಮನೆ! ಶಂಕರ!
ಭವನೆ! ಸಕಲೋದ್ಧರನೆ! ಪುರಹರ!
ಭುವನಕಾರಣಕರ್ತ! ಜಗದಾಧಾರ! ಜಗದೀಶ!
ವಿವಿಧ ವೇದಾಗಮದೆ ಸಂಸ್ತುತ
ಭವದ ರೋಗಕೆ ಪರಮವೈದ್ಯನೆ
ದಿವಿಜರೊಡೆಯಂ ಬ್ರಹ್ಮವಿಷ್ಣುವು ನಮಿತ ಪದಕಮಲ ॥ ೨೮ ॥

ಸರ್ವಸಂಸ್ತುತ ಸಿದ್ಧಿಕಾಮನೆ
ಸರ್ವಗಂ ಸ್ಥಿರ! ನಿರುಪಮಾಧಿಕ
ಸರ್ವಮಂಗಳಮಯನೆ! ಸಚ್ಚಿನ್ಮಾತ್ರ! ಸರ್ವೇಶ!
ಸರ್ವಶಕ್ತನೆ! ಪರಮಮುಕ್ತನೆ!
ಸರ್ವಭರಿತನೆ! ಸರ್ವಮಂತನೆ
ಸರ್ವತೇಜೋಮಯನೆ! ಪರಮಾಕಾಶ ವಿಗ್ರಹನೆ ॥ ೨೯ ॥

ಪಾಹಿ ಪರಮಜ್ಯೋತಿರೂಪನೆ
ಪಾಹಿ ಪರತರ ಲಿಂಗರೂಪನೆ
ಪಾಹಿ ಗಂಗಾಭರಣಭೂಷಣ ತಿಂಗಳೂಡಿದನೆ!
ಪಾಹಿ ಮಂಗಳಶೃತಿವಿಲೋಚನ
ಪಾಹಿ ಪರಮಾನಂದಲಕ್ಷಣ
ಪಾಹಿ ಪಾರ್ವತಿಪತಿಯೆ! ಪರಶಿವ ಪಾಹಿ ಪರಮೇಶ! ॥ ೩೦ ॥

ನಿನ್ನೊಳಾಜ್ಞೆಯ ಪಡೆದು ಭುವನದೆ
ನಿನ್ನಮುಖದಿಂದುಕ್ತತತ್ತ್ವವ
ನನ್ನಶಕ್ತಿಗೆ ಮೀರೆ ಹರಡಿದೆ ನಿನ್ನ ಕರುಣದೊಳು!
ಇನ್ನು ನಿನ್ನಯ ರೂಪಹೊಂದಲು
ನನ್ನ ಹೃದಯವು ತುಡಿಯುತಿಹುದೈ
ನಿನ್ನ ತೇಜದೆ ಬೆರೆಯಲೆನಗಿನ್ನನುವುನೀಡಯ್ಯ ॥ ೩೧ ॥

ಇಂತು ನುತಿಸಲು ರೇಣುಕಾರ್ಯನು
ಶಂತಮಯ ಶಿವ ಸೋಮಶೇಖರ
ನಂತರಂಗವ ಮಿಡಿಯುತಾಡಲು ಮೂಡಿಬಂದ ಶಿವ ।
ಅಂತುಮೂಡಿದ ಕರುಣಶಂಕರ
ನಿಂತುನುತಿಸುವ ತನ್ನ ಕಂದನ
ಚಿಂತೆಹರಿಸಲು ಶಿರವನಾಘ್ರಾಣಿಸುತಲಿಂತೆಂದ ॥ ೩೨ ॥

"ಭುವನ ಬೆಳಗಿದ ಮುದ್ದುಗುವರನೆ
ತವಸುಭಕ್ತಿಗೆ ಮೆಚ್ಚಿಗೊಂಡೆನು
ಜವದಿ ಬೆರೆಯಲು ಬೆಳಕುಕೂಡಲು ನೀನು ಬಾರಯ್ಯ" ।
ಶಿವನ ಪರಮೋತುಚ್ಚವಾಣಿಯ
ನವರುಕೇಳುತ ಬೆರಗುಗೊಂಡರು
ದಿವಿಜರೂರಿಂ ಪುಷ್ಪವೃಷ್ಟಿಯು ಕರೆದುದಾಕ್ಷಣಕೆ ॥ ೩೩ ॥

ಮಧುರವಾಣಿಯ ಕೇಳ್ದ ರೇಣುಕ
ಹೃದಯ ತಣಿಯಿತು ! ಶಿವನಕರುಣದೊ
ಳುದಯಸೂರ್ಯನ ಕೋಟಿತೇಜದೆ ಬೆಳಗು ಬೆಳಗಿದುದು ।
ಮುದದಿಪಾಡುವ ಯೋಗಿವರ್ಯರ
ಮಧುರಕಂಠಸ್ತೋತ್ರಪಾಠದೆ
ಚದುರತನದೋಳ್ ಜ್ಯೋತಿಲಿಂಗದೆ ಬೆರೆದನಾಚಾರ್ಯ ॥ ೩೪ ॥

ಪರಮತೇಜೋರೂಪಧಾರಿಯು
ಸರುವಸಿದ್ಧರ ಚಕ್ರವರ್ತಿಯು
ವರದರೇಣುಕ ಲಿಂಗಮುಖದೊಳು ಬೆರೆದು ಬಯಲಾಗೆ ।
ನೆರೆದ ಜನಗಳ ಭಕ್ತಿಯುಕ್ಕಿತು
ಪರಶಿವಾದ್ವೈತಾತ್ಮತತ್ತ್ವಂ
ಸ್ಥಿರವುಗೊಂಡಿತು ಸರ್ವಸಂಶಯ ದೂರವಾಯ್ತಿಂತು ॥ ೩೫ ॥

ಸಾರವೇದಾಗಮದರೂಪವು
ವೀರಶಿವಮತ ತತ್ತ್ವಪದ್ಧತಿ
ತೋರರತ್ನಗಳಿಲ್ಲಿ ಷಟ್‌ಸ್ಥಲ ತರಣಿ ಲಿಂಗೈಕ್ಯ ।
ಭಾರಿಗೋಪ್ಯದ ಮಂತ್ರಚಿಂತಿತ
ವೀರಸಿದ್ಧಾಂತಂ ಶಿಖಾಮಣಿ
ಧೀರ ಪಂಡಿತರೆಲ್ಲ ಮೆಚ್ಚುತ ಮಣಿದು ಪೂಜಿಪರು ॥ ೩೭ ॥

ಯಾರು ಬರೆವರೊ ಬರೆಸಿ ಕೇಳ್ವರೊ
ಯಾರು ಪಾಡುತ ಹಾಡಿ ತಣಿವರೊ
ಯಾರು ಪಾರಾಯಣವ ಮಾಡುವರೆಲ್ಲರೋರಂತೆ ।
ಸಾರನಿರ್ಮಲ ಭೋಗಪಡೆವರು
ಸೇರಿ ಶಿವನೊಳು ಕೂಡಿಬೆರೆವರು
ವೀರವರಶಿವಯೋಗ ಪದವಿಯನಿರದೆಪಡೆಯುವರು ॥ ೩೭ ॥

ಇಂತು ರೇಣುಕಗೀತೆ ಬೋಧಿಪು
ದೆಂತು ರೇಣುಕ ಯೋಗಿವರ್ಯನು
ಸಂತ ದನುಜೇಂದ್ರಂಗೆ ದರ್ಶನವಿತ್ತು ಹರಸಿದನು ।
ಕಂತಮಯ ಶಿವಲಿಂಗ ನಿರ್ಮಿಸು
ತಂತವರಿಗಾಭೀಷ್ಟಸಲಿಸಿದ
ನೆಂತು ಸೋಮೇಶ್ವರನ ಲಿಂಗದೊಳೈಕ್ಯನೆಂಬುದನು ॥ ೩೮ ॥

ಇಪ್ಪತ್ತೊಂದನೆಯ ಸಂಧಿ ಸಂಪೂರ್ಣಂ.

ಅಂತು ಸಂಧಿ ಇಪ್ಪತ್ತೆರಡಕ್ಕಂ ಪದನೊಂಭೈನೂರ್ರೈವತ್ತಕ್ಕಂ
ಮಂಗಳಮಸ್ತು.

| ತಪ್ಪು | ಸರಿ | ಪುಟ ಸಂಖ್ಯೆ | ಪದ್ಯ | ಸಾಲು |
|---|---|---|---|---|
| ಮತ್ತಿಕೋಕಿಲ | ಮತ್ತಕೋಕಿಲ | 25 | 4 | 3 |
| ಪಾಡ್ವ | ನುಡಿವ | 25 | 4 | 4 |
| ರನ್ನಗಂಭದ | ರನ್ನಗಂಬದ | 26 | 6 | 1 |
| ರುದ್ರೆಂ | ರುದ್ರಂ | 28 | ಕಂದ | 1 |
| ಲೋಲೆಯಲ | ಲೋಲೆಯ | 33 | 30 | 5 |
| ಹಾಡಿ | ಪಾಡಿ | 33 | 31 | 6 |
| — | ವೀರಸೋಮೇಶ್ವರನ ಲಿಂಗದಿ | 40 | 1 | 4 |
| ತೋರ್ಪುಪು | ತೋರ್ಪುವು | 44 | 18 | 5 |
| ಸ್ಥಲ | ಸ್ಥಲ | 56 | 15 | 5 |
| ಮಧುರದಾತ್ಮಾರ್ಪಣೆಯೆ | ಮಧುರಾದಾತ್ಮಾರ್ಪಣೆಯೆ | 56 | 16 | 4 |
| ನಿರುತ | ನಿರತ | 61 | 35 | 3 |
| ದೇಹಮಸಿರ | ದೇಹಮಸ್ಥಿರ | 61 | 35 | 5 |
| ಸಂಸಾರ್ದೋಷ | ಸಂಸ್ಕೃತಿದೋಷ | 65 | 1 | 1 |
| ರುದ್ರುದಕ್ಷಿಯ | ರುದ್ರನಕ್ಷಿಯ | 66 | 4 | 3 |
| ಯೋಗಸಾಧನೆ | ಯೋಗಸಾಧನೆಗೆ | 72 | 27 | 6 |

| | | | | |
|---|---|---|---|---|
| ಇರುವನಾದದ | ಇರುವ ಪಾದದ | 232 | 4 | 4 |
| ಯೋಗಿಯು | ಯೋಗಿಯ | 235 | 18 | 4 |
| ನಿರಮಲ ಶಿವ ವಿಲೀನ | ನಿರಮಲಶ್ರೀವಲೀನ | 237 | 25 | 3 |
| ಹೊಳೆಯೋಳ್ | ಹೊಳೆಯೊಳ್ | 239 | 31 | 2 |
| ದಿರವ | ದಿರುವ | 247 | ಸೂ.ಪ. | 3 |
| ಸಂಧಿ ಇಪ್ಪತ್ತೃಕ್ಕಂ | ಸಂಧಿ ಇಪ್ಪತ್ತೊಂದಕ್ಕಂ | 260 | – | ಪುಟದ ಕೊನೇ ಸಾಲು |
| ಶಿವ ಪ್ರಸಾದ | ಶಿವಸುಪ್ರಸಾದ | 260 | 50 | 5 |
| ದಯದಿಂದಿನ | ದಯವಿದಿಂದಿನ | 262 | 5 | 6 |
| ಸಂತ ಷೇಂದುವೆ | ಸಂತಷೇಂದುವೆ | ,, | 7 | 4 |
| ವಾಣಿಯು ದಾಣವಾಮಲ | ವಾಣಿಯದಾಣವಾಮಲ | 266 | 23 | 5 |
| ಭಕ್ತರೋದ್ಧರಿಸೆ | ಭಕ್ತರುದ್ಧರಿಸೆ | ,, | ,, | 6 |
| ತಂತವಂ ಗಾಭೀಷ್ಟ | ತಂತವಂಗಾಭೀಷ್ಟ | 270 | 38 | 5 |

---

## ಗ್ರಂಥ ದೊರೆಯುವ ಇತರ ಸ್ಥಳಗಳು:

೧. ಶ್ರೀ ರಂಭಾಪುರಿ ಪೀಠ,
ಬಾಳೆಹೊನ್ನೂರು

೨. ಶ್ರೀ ಪಂಡಿತಾರಾಧ್ಯ ಮಂದಿರ,
ಶ್ರೀಶೈಲ.

೩. ವೇ|| ಎಸ್. ಎಂ. ಸಿದ್ಧಯ್ಯ,
C/o ಉಜ್ಜಯನಿ ಮಠ, ಚಿತ್ರದುರ್ಗ.

೪. ಶ್ರೀ ಚನ್ನಪ್ಪಸ್ವಾಮಿ,
ಹಿರೇಕಲ್ಮಠ, ಹೊನ್ನಾಳಿ.



ಕವಿಯ ಮತ್ತೊಂದು ಕೃತಿ:

ಶ್ರೀಶೈಲ ಕುಸುಮ



‘ನಿಜಗುಣಸಿದ್ಧ’ ಕಾವ್ಯನಾಮದಿಂದ ಪ್ರಸಿದ್ಧರಾದ ಎಸ್. ಎಂ. ಸಿದ್ಧಯ್ಯ, ಬಿ. ಎ. (ಆನರ್ಸ್) ಇವರು ಶಿವಮೊಗ್ಗ ಜಿಲ್ಲೆ, ಚನ್ನಗಿರಿ ತಾಲ್ಲೂಕು, ಚಿರಡೋಣಿ ಗ್ರಾಮದ ಚರಂತದೇವರ ವೇ|| ಸಿದ್ಧಯ್ಯನವರ ಹಿರಿಯ ಮಕ್ಕಳು. ೧೯೩೫ರಲ್ಲಿ ಜನ್ಮ ತಾಳಿದರು. ಮೈಸೂರು ವಿಶ್ವ ವಿದ್ಯಾನಿಲಯದ ಬಿ.ಎ. (ಆನರ್ಸ್) ಪದವಿಯನ್ನು ೧೯೫೯ರಲ್ಲಿ ಪಡೆದರು. ಸಂತೇಬೆನ್ನೂರು ಪ್ರೌಢಶಾಲೆಯಲ್ಲಿ ಎರಡು ವರ್ಷ ಸೇವೆ ಸಲ್ಲಿಸಿದರು. ೧೯೬೧ ರಿಂದ ಸ್ಟೇಟ್ ಅಕೌಂಟ್ಸ್ ಡಿಪಾರ್ಟ್‌ಮೆಂಟಿನ ನೌಕರರು. ಸತತಾಭ್ಯಾಸ ಪ್ರಯತ್ನದಿಂದ ಸಾಹಿತ್ಯ ಸೇವೆಯನ್ನೂ ಮಾಡುತ್ತಾ ಇದ್ದಾರೆ. ‘ಶ್ರೀಶೈಲಕುಸುಮ’ ಎಂಬ ಕವನಸಮಾಕಿ ಮತ್ತು ‘ರೇಣುಕ ಗೀತೆ’ ಎಂಬ ಕಾವ್ಯ ಇವೆರಡು ಇವರ ಮುಖ್ಯ ಕೃತಿಗಳು.